# ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ



ಸಂಶೋಧಕರು

ಎಚ್. ಜಂಬುಮ್ಮ

ಮಾರ್ಗದರ್ಶಕರು

ಡಾ|| ದೇವರಕೊಂಡಾರೆಡ್ಡಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ

೨೦೦೨

120

# ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ

ಸಂಶೋಧಕರು

ಎಚ್. ಜಂಬುವಮ್ಮ

ಮಾರ್ಗದರ್ಶಕರು

ಡಾ॥ ದೇವರಕೊಂಡಾರೆಡ್ಡಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ

೨೦೦೨



## ಯೋಗ್ಯತಾಪತ್ರ

"ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಈ ನಿಬಂಧವು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ನಿಬಂಧವನ್ನು ಸಂಶೋಧಕರು ತಮ್ಮ ಸ್ವಂತ ಸಂಶೋಧನೆಯ ಮೂಲಕ ರಚಿಸಿದ್ದಾರೆ. ಈ ನಿಬಂಧದ ವಿಷಯವನ್ನಾಗಲೀ ಇದರ ಅಥವಾ ಯಾವುದೇ ಭಾಗವನ್ನಾಗಲೀ, ಈ ಮೊದಲು ಬೇರೆ ಯಾವುದೇ ಪದವಿಗಾಗಲೀ ಒಪ್ಪಿಸಿಲ್ಲ.

ವಿದ್ಯಾರಣ್ಯ

೩೦-೭-೨೦೦೨.

( ಡಾ। ದೇವರಕೊಂಡಾರೆಡ್ಡಿ )

# ನುಡಿನಮನ

ಬಾಲ್ಯದಲ್ಲಿ ಓದುವ ಹವ್ಯಾಸ ಬೆಳೆಸಿದವರು ನಮ್ಮನ್ನಗಲಿದ ನಮ್ಮ ಪ್ರೀತಿಯ ತಂದೆಯವರನ್ನು ಇಲ್ಲಿ ಜ್ಞಾಪಿಸಿಕೊಳ್ಳಲೇಬೇಕು. ಎಸ್.ಎಸ್.ಎಲ್.ಸಿ. ಮುಗಿದ ಮೇಲೆ ವಿವಾಹ, ನಂತರ ಉದ್ಯೋಗ, ಹೀಗೆ ಸಾಂಸಾರಿಕ ಜೀವನದಲ್ಲಿ ಅನಿವಾರ್ಯವಾಗಿ ತೊಡಗಿಸಿಕೊಂಡೆ. ನಿಂತಿದ್ದ ಓದನ್ನು ಮುಂದುವರಿಸಲು ಅವಕಾಶ ಮಾಡಿಕೊಟ್ಟದ್ದು ಮೈಸೂರು ವಿಶ್ವವಿದ್ಯಾಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ. ಆ ಶಿಕ್ಷಣ ಸಂಸ್ಥೆಯ ವಿದ್ಯಾರ್ಥಿನಿಯಾಗಿ ೧೯೮೫-೮೬ ರಲ್ಲಿ ಕನ್ನಡ ಎಂ.ಎ. ಪದವಿ ಪಡೆದೆ.

ಮುಂದೆ ಪತಿಯ ಅಗಲಿಕೆ ಮತ್ತು ಉದ್ಯೋಗದಿಂದ ನಿವೃತ್ತಿ ನಂತರ ಪುನಃ ಓದು ಮುಂದುವರಿಸಿ ೧೯೯೬-೯೭ ರಲ್ಲಿ ಇತಿಹಾಸ ಎಂ.ಎ. ಪದವಿ ಪಡೆದೆ. ಏನನ್ನಾದರು ಸಾಧಿಸಬೇಕೆನ್ನುವ ಮನಸ್ಸು. ಮುಂದಿನ ಅಧ್ಯಯನಕ್ಕೆ ದಾರಿ ತೋರಿಸಿದವರು, ಶಾಸನಶಾಸ್ತ್ರದ ಗುರುಗಳೂ ಆಗಿದ್ದು, ಈ ಸಂಶೋಧನೆಗೆ ಎಲ್ಲ ರೀತಿಯಲ್ಲಿಯೂ ಸಲಹೆ, ಸಹಕಾರಗಳನ್ನು ನೀಡಿ ಮಾರ್ಗದರ್ಶಕರಾದ ಗುರು ಡಾ॥ ದೇವರಕೊಂಡಾರೆಡ್ಡಿಯವರಿಗೆ ನಾನು ಋಣಿ.

ಸಕಾಲದಲ್ಲಿ ಡಿ.ಟಿ.ಪಿ. ಗೆ ನೆರವಾದ ಗೆಳತಿ ಶ್ರೀಮತಿ ಎಸ್.ವೈ. ನಿರ್ಮಲ ಗಣೇಶ್‌ಗೆ ನಾನು ಕೃತಜ್ಞಳು.

ನನ್ನ ಕುಟುಂಬದಲ್ಲಿ ಪ್ರೀತಿಯ ಮಕ್ಕಳು, ಸೊಸೆಯ ಸಹಾಯ, ಹಾಗೂ ಸಕಾಲಿಕ ಸಲಹೆ, ಸೂಚನೆಗಳನ್ನು ನೀಡಿದ ಸೋದರ ಕೃಷ್ಣ ಮತ್ತು ನನ್ನ ಸೋದರಿಯರಿಗೆ ಕೃತಜ್ಞತೆಗಳು.

ಅನಿವಾರ್ಯ, ಹಾಗೂ ಮಾನಸಿಕ ತೊಳಲಾಟದಲ್ಲಿ ಸಿಲುಕಿ ಕೈಚೆಲ್ಲಿ ಕುಳಿತಾಗ ನನ್ನ ನೋವುಗಳಿಗೆ ಸ್ಪಂದಿಸಿ ಧೈರ್ಯ ತುಂಬಿದ ಗೆಳತಿ ಭಾರತಿಗೆ ನನ್ನ ನುಡಿ ನಮನಗಳು. ಆತ್ಮೀಯ ಸ್ನೇಹಿತೆಯರಾದ ಶ್ರೀಮತಿ ಉಷಾ ಶಾಸ್ತ್ರಿ, ಶ್ರೀಮತಿ ಅಮೃತ ನಾರಾಯಣ್ ಹಾಗೂ ನೆರವಾದ ಎಲ್ಲರಿಗೂ ನನ್ನ ಧನ್ಯವಾದಗಳು.

ನನ್ನ ಅಧ್ಯಯನಕ್ಕೆ ನೆರವಾದ ಕನ್ನಡ ಸಾಹಿತ್ಯ ಪರಿಷತ್ತು, ಮಿಥಿಕ್ ಸೊಸೈಟಿ, ಐ.ಸಿ.ಎಚ್.ಆರ್.ನ ಗ್ರಂಥ ಭಂಡಾರ ಮತ್ತು ಅಲ್ಲಿನ ಸಿಬ್ಬಂದಿ ವರ್ಗಕ್ಕೆ ನಾನು ಕೃತಜ್ಞಳು.

ಬೆಂಗಳೂರು.
೩೦-೭-೨೦೦೨.

(ಎಚ್. ಜಯಮ್ಮ)

## ಪರಿವಿಡಿ

## ಅಧ್ಯಾಯ – I

# ಅಧ್ಯಯನ

ಕರ್ನಾಟಕವನ್ನು ಸ್ವತಂತ್ರ ರಾಜಮನೆತನಗಳಾದ ಶಾತವಾಹನರು, ಕದಂಬರು, ಗಂಗರು, ಪಲ್ಲವರು, ರಾಷ್ಟ್ರಕೂಟರು, ಚಾಳುಕ್ಯರು, ಚೋಳರು ಮತ್ತು ಹೊಯ್ಸಳರು ಕನ್ನಡ ನಾಡನ್ನು ವೈಭವದಿಂದ ಆಳಿದರು. ಇವರಂತೆ ಮಹಾಮಂಡಲೇಶ್ವರರೂ, ಸಾಮಂತರೂ, ಪಾಳೆಯಗಾರರು ಅಷ್ಟೇ ವೈಭವದಿಂದ ಆಳಿದರು. ಅವರು ಶಾಶ್ವತವಾದ ಕೋಟೆ, ಕೊತ್ತಲ, ಕೆರೆ, ಕಟ್ಟೆ, ದೇವಸ್ಥಾನಗಳು ಮುಂತಾದವುಗಳನ್ನು ಕಟ್ಟಿ ಕನ್ನಡ ನಾಡಿನ ಸಂಸ್ಕೃತಿಗೆ ಅತ್ಯಮೂಲ್ಯ ಕೊಡುಗೆ ನೀಡಿದ್ದಾರೆ. ಅಂತಹ ಮಹಾಸಾಮಂತರಲ್ಲಿ ನೊಳಂಬರೂ ಒಬ್ಬರು. ಇವರು ತಮ್ಮನ್ನು ಶಾಸನಗಳಲ್ಲಿ ನೊಳಂಬ ಪಲ್ಲವರೆಂದು ಹೇಳಿಕೊಂಡಿದ್ದಾರೆ. ಆದರೆ ಈ ನೊಳಂಬರಿಗೂ ಕಂಚಿಯ ಪಲ್ಲವರಿಗೂ ಇದ್ದ ನಿರ್ದಿಷ್ಟ ಸಂಬಂಧವೇನು ಎಂಬುದು ಖಚಿತವಾಗಿ ತಿಳಿದು ಬಂದಿಲ್ಲ.

ನೊಳಂಬರು ಈಗಿನ ಕರ್ನಾಟಕದ ತುಮಕೂರು, ಚಿತ್ರದುರ್ಗ, ಬಳ್ಳಾರಿ, ಕೋಲಾರ, ಬೆಂಗಳೂರು, ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಕೆಲವು ಭಾಗಗಳನ್ನು ಆಳಿದರು. ಮೊದಲಿಗೆ ಗಂಗರ ಸಾಮಂತರಾಗಿಯೂ ರಾಜ್ಯಭಾರ ಮಾಡಿದರು. ಈ ರಾಜರ ಇತಿಹಾಸವನ್ನು ಅಧ್ಯಯನ ಮಾಡಿದಾಗ, ಅವರ ಆಳ್ವಿಕೆಯ ಪ್ರದೇಶದಲ್ಲಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಕುರುಹಾಗಿ ಅನೇಕ ಅವಶೇಷಗಳನ್ನು ಉಳಿಸಿಹೋಗಿದ್ದಾರೆ.

ಎಪಿಗ್ರಾಫಿಯಾ ಕರ್ನಾಟಕದ ಸಂಪುಟಗಳನ್ನು ಬಿ.ಎಲ್. ರೈಸರು ಪ್ರಕಟಿಸಲು ಆರಂಭಿಸಿದ ಮೇಲೆ ಕರ್ನಾಟಕದ ಗತ ಇತಿಹಾಸವು ಎಳೆ ಎಳೆಯಾಗಿ ಬಿಚ್ಚಿಕೊಳ್ಳಲಾರಂಭಿಸಿತು. ರೈಸರು ಸಂಪುಟಗಳ ಪ್ರಕಟಣೆಯ ಜೊತೆಗೆ ಸಂಕ್ಷಿಪ್ತವಾದ ಪ್ರಸ್ತಾವನೆಯನ್ನು ಬರೆದರು. ಈ ಪ್ರಸ್ತಾವನೆಯಲ್ಲಿ ಶಾಸನಗಳಲ್ಲಿ ಉಲ್ಲೇಖಿತವಾದ ಮುಖ್ಯ ರಾಜವಂಶಗಳಲ್ಲದೆ ಸ್ಥಳೀಯವಾಗಿ ಆಳಿದ ಮಾಂಡಲೀಕರ ಇತಿಹಾಸವೂ ಇದೆ. ಇಲ್ಲಿಂದಾಚೆಗೆ ವಿದ್ವಾಂಸರು ಒಂದೊಂದೆ ರಾಜವಂಶವನ್ನು ಆಯ್ಕೆ ಮಾಡಿಕೊಂಡು ಇತಿಹಾಸವನ್ನು ರಚಿಸಲಾರಂಭಿಸಿದರು. ರೈಸರು ಸಂಪಾದಿಸಿದ ಬೆಂಗಳೂರು, ಮೈಸೂರು, ಕೋಲಾರ, ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಉಕ್ತವಾಗಿರುವ ನೊಳಂಬರಿಗೆ

ಸೇರಿದ ಆ ಸ್ಥಳಗಳಲ್ಲಿನ ವಿಷಯವನ್ನು ಸಂಗ್ರಹಿಸಿ ನೊಳಂಬರ ಬಗ್ಗೆ ಅಧಿಕೃತವಾಗಿ ಮೊದಲು ಬೆಳಕು ಚೆಲ್ಲಿದ ವಿದ್ವಾಂಸರನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಬಿ.ಎಲ್. ರೈಸರು ನೊಳಂಬರ ರಾಜಧಾನಿಯಾಗಿದ್ದ ಈಗಿನ ಆಂಧ್ರಪ್ರದೇಶಕ್ಕೆ ಸೇರಿರುವ ಹೇಮಾವತಿಯ ಪ್ರಾಮುಖ್ಯತೆಯನ್ನು ಗಮನಿಸಿ ತುಮಕೂರು ಜಿಲ್ಲೆಯ ಸಿರಾ ತಾಲೂಕಿನ ಶಾಸನಗಳ ಸಂಪುಟದಲ್ಲಿ ಇವನ್ನು ಸಂಗ್ರಹಿಸಿದ್ದಾರೆ.

ರೈಸರೇ ಬರೆದ ಮೈಸೂರು ಮತ್ತು ಕೂರ್ಗ ಶಾಸನಗಳು ಎಂಬ ಪುಸ್ತಕದಲ್ಲಿ ಇದುವರೆವಿಗೆ ರೈಸರು ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳಲ್ಲಿ ಸಂಗ್ರಹಿಸಿದ್ದ ವಿವರಗಳನ್ನು ಇತಿಹಾಸ ರೂಪದಲ್ಲಿ ಜೋಡಿಸಿ ಕರ್ನಾಟಕದ ಇತಿಹಾಸವನ್ನು ರಚಿಸಿರುತ್ತಾರೆ. ಈ ಕೃತಿಯಲ್ಲಿ ಕೂಡ ನೊಳಂಬರ ಇತಿಹಾಸವನ್ನು ಸಂಕ್ಷಿಪ್ತವಾಗಿ ನೀಡಿದ್ದಾರೆ. ಈ ಎರಡೂ ಕಾರ್ಯಗಳಲ್ಲಿ ರೈಸರು ಸಂಕ್ಷಿಪ್ತವಾದ ರಾಜಕೀಯ ಇತಿಹಾಸಕ್ಕೆ ಒತ್ತು ನೀಡಿದ್ದಾರೆ. ಇನ್ನುಳಿದ ಸಾಂಸ್ಕೃತಿಕ ಮತ್ತಿತರ ವಿವರಗಳು ಆ ಕಾಲದ ಇತಿಹಾಸಕಾರರಿಗೆ ಇದ್ದಂತೆ ಇವರಿಗೂ ಅಗಣ್ಯವಾಗಿದ್ದವು. ಹೀಗಾಗಿ ರಾಜಕೀಯ ಇತಿಹಾಸವನ್ನು ಮಾತ್ರ ಇವರ ಬರಹದಲ್ಲಿ ಒತ್ತುಕೊಟ್ಟಿರುವುದು ತಿಳಿಯಬಹುದಾಗಿದೆ.

ಡಾ। ಸಿ.ಶಿವರಾಮಮೂರ್ತಿಯವರು ಇಂಡಿಯನ್ ಸ್ಕಲ್ಪಚರ್ (೧೯೬೧) ಎಂಬ ಕೃತಿಯಲ್ಲಿ ಭಾರತದ ಬೇರೆ ಬೇರೆ ವಂಶದ ಶಿಲ್ಪಗಳ ವಿವರಗಳನ್ನು ನೀಡುವಾಗ ಅರಳಗುಪ್ಪೆಯ ನಟರಾಜ ಶಿಲ್ಪದ ಬಗ್ಗೆ ಬರೆದು ಇದನ್ನು ನೊಳಂಬರ ಕಾಲದ ನಟರಾಜನೆಂದು ಗುರುತಿಸಿರುತ್ತಾರೆ.

ನೊಳಂಬರ ಶಿಲ್ಪಗಳ ಬಗ್ಗೆ ಮತ್ತು ಅವುಗಳ ಸೌಂದರ್ಯದ ಬಗ್ಗೆ ಆಸಕ್ತರ ಗಮನವನ್ನು ಸೆಳೆದ ಮೊದಲಿಗರಲ್ಲಿ ಇವರು ಮುಖ್ಯರು. ಇದೇ ಲೇಖಕರ ಇನ್ನೊಂದು ಪುಸ್ತಕ 'Nolambas Scalpture' (ಮದ್ರಾಸ್ ಸರ್ಕಾರಿ ಮ್ಯೂಸಿಯಂ, ೧೯೬೪). ಈ ಕೃತಿಯಲ್ಲಿ ನೊಳಂಬರ ರಾಜಧಾನಿಯಾಗಿದ್ದ ಹೇಮಾವತಿಯಿಂದ ತೆಗೆದುಕೊಂಡು ಹೋಗಿ, ಮದರಾಸು ವಸ್ತುಸಂಗ್ರಹಾಲಯದಲ್ಲಿ ಇರಿಸಿರುವ ಶಿಲ್ಪಗಳನ್ನು ಕುರಿತು ಬರೆದಿರುವ ಗ್ರಂಥ ಇದಾಗಿದೆ. ಈ ಪುಸ್ತಕದಲ್ಲಿ ನಟರಾಜ, ದಕ್ಷಿಣಾಮೂರ್ತಿ, ಚಾಮುಂಡಿ (ಕಾಳಿ), ಉಮಾಮಹೇಶ್ವರ, ಅಷ್ಟದಿಕ್ಪಾಲಕರ ಶಿಲ್ಪಗಳನ್ನು ಕುರಿತು ಬರೆಯಲಾಗಿದೆ. ಇವರು ಒಂದೇ ಸ್ಥಳದಲ್ಲಿ ಸಂಗ್ರಹಿಸಿದ ಶಿಲ್ಪಗಳನ್ನು ನೊಳಂಬರ ಶಿಲ್ಪಗಳೆಂದು ಹೆಸರಿಸಿ ಅವುಗಳ ಲಕ್ಷಣಗಳನ್ನು ಗುರುತಿಸಿದ್ದಾರೆ. ಈ ಬಗೆಯ ಅಭ್ಯಾಸ ಮುಂದಿನ ನೊಳಂಬರ ಶಿಲ್ಪಗಳ ಅಭ್ಯಾಸಕ್ಕೆ ಸ್ಫೂರ್ತಿಯನ್ನು ತುಂಬಿದೆ.

ಕರ್ನಾಟಕ ಇತಿಹಾಸ ದರ್ಶನ (೧೯೭೦) ಎಂಬ ಐತಿಹಾಸಿಕ ಗ್ರಂಥವನ್ನು ಡಾ। ಎಂ.ವಿ. ಕೃಷ್ಣರಾವ್ ಮತ್ತು ಶ್ರೀ ಎಂ. ಕೇಶವಭಟ್ ಅವರು ರಚಿಸಿದ್ದಾರೆ. ಈ ಕೃತಿಯ ವೈಶಿಷ್ಟ್ಯವೆಂದರೆ ಅದುವರೆಗೆ ಚದುರಿ ಹೋಗಿದ್ದ ಕರ್ನಾಟಕದ ಬಹುತೇಕ ರಾಜಮನೆತನಗಳ ಇತಿಹಾಸವನ್ನು

ಒಂದೆಡೆ ತಂದದ್ದು. ಅವುಗಳಲ್ಲಿ ನೊಳಂಬ ಪಲ್ಲವರ ಇತಿಹಾಸವೂ ಒಂದು . ಅದುವರೆವಿಗೂ ನೊಳಂಬರ ಬಗ್ಗೆ ಚದುರಿದ್ದ ವಿವರಗಳನ್ನು ಒಂದೆಡೆ ಸಂಗ್ರಹಿಸಿ ಅವರ ಇತಿಹಾಸವನ್ನು ರಚಿಸಿರುತ್ತಾರೆ. ಕ್ರಿ.ಶ.೯೫೦ ರಿಂದ ಕ್ರಿ.ಶ.೧೦೫೫ ರ ವರೆಗೆ ಆಳಿದ ನೊಳಂಬರ ದೀರ್ಘ ಇತಿಹಾಸವನ್ನು ಸಂಗ್ರಹಿಸಿದ್ದಾರೆ. ಗಂಗ ಮತ್ತು ನೊಳಂಬ ಪಲ್ಲವರ ಸಂಬಂಧವು, ಅವರ ನಡುವೆ ನಡೆದ ಯುದ್ಧಗಳು, ವಂಶಾವಳಿ ಮುಂತಾದ ವಿವರಗಳನ್ನಲ್ಲದೆ ನೊಳಂಬರು ಪ್ರಬಲರಾಗಿ ರಾಜ್ಯ ವಿಸ್ತರಣೆ ಮಾಡಿದ ವಿವರಣೆಗಳನ್ನು ನೀಡಿದ್ದಾರೆ. ಈ ಹೇಮಾವತಿಯನ್ನು ಚೋಳರು ಗೆದ್ದ ಮೇಲೆ ಕಂಪಿಲಿಗೆ ರಾಜಧಾನಿಯನ್ನು ಸ್ಥಳಾಂತರಿಸಿ ಅಲ್ಲಿಂದ ಆಳ್ವಿಕೆಯನ್ನು ಮುಂದುವರಿಸಿದ ನೊಳಂಬ ರಾಜರ ಬಗ್ಗೆಯೂ ಸಂಕ್ಷಿಪ್ತವಾಗಿ ವಿವರಗಳನ್ನು ನೀಡಿದ್ದಾರೆ. ಇವರು ಬರೆದಿರುವ ಈ ಅಧ್ಯಾಯದಲ್ಲಿ ರಾಜಕೀಯಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟಿದ್ದಾರೆ. ಸಾಂಸ್ಕೃತಿಕ ಇತಿಹಾಸಕ್ಕಾಗಲಿ ಧಾರ್ಮಿಕ ಇತಿಹಾಸಕ್ಕಾಗಲಿ ಹೆಚ್ಚಿನ ವಿವರಗಳನ್ನು ಸಂಗ್ರಹಿಸಿಲ್ಲ.

ಕರ್ನಾಟಕ ಪರಂಪರೆ (೧೯೭೦) ಕೃತಿಯು Karnataka Through the ages ಎಂಬ ಆಂಗ್ಲ ಕೃತಿಯ ಕನ್ನಡಾನುವಾದ. ಈ ಕೃತಿಯಲ್ಲಿ ಕರ್ನಾಟಕದ ಇತಿಹಾಸ ದರ್ಶನದ ಭಾಗವನ್ನೇ ಸಂಗ್ರಹಿಸಿದಂತಿದೆ. ಅದಕ್ಕಿಂತಲೂ ಹೆಚ್ಚಿನ ವಿವರಗಳು ಇದರಲ್ಲಿ ಕಾಣುವುದಿಲ್ಲ.

ಚಂದ್ರವಳ್ಳಿ ಎಂಬ ಶೀರ್ಷಿಕೆಯ ಗ್ರಂಥ (೧೯೭೪)ದಲ್ಲಿ ಚಿತ್ರದುರ್ಗದ ಉತ್ಸಾಹಿ ಇತಿಹಾಸ ಶೋಧಕರ ಲೇಖನಗಳನ್ನೊಳಗೊಂಡ ಸಂಗ್ರಹದ ಪುಸ್ತಕ. ಇದರಲ್ಲಿ ನೊಳಂಬರಿಗೆ ಸೇರಿದ ಲೇಖನಗಳಿವೆ. ಅದುವರೆಗೆ ಪ್ರಕಟವಾಗಿದ್ದ ಶಾಸನಗಳನ್ನು ಮತ್ತು ಕೃತಿಗಳನ್ನು ಆಧರಿಸಿ ನೊಳಂಬರ ಇತಿಹಾಸವನ್ನು ರಚಿಸಿದ್ದಾರೆ. ನೊಳಂಬರ ಬಗ್ಗೆ ಪುನರ್ ಅಧ್ಯಯನದ ಒತ್ತನ್ನು ನೀಡಿದ ಲೇಖನಗಳಿವು.

ನೊಳಂಬ ಇತಿಹಾಸ ದರ್ಶನ (೧೯೭೬)ದಲ್ಲಿ ನೊಳಂಬರಿಗೆ ಸಂಬಂಧಿಸಿದ ಅನೇಕ ಲೇಖನಗಳಿವೆ. ನೊಳಂಬ ಶಬ್ದದ ಅರ್ಥ ವಿವೇಚನೆ, ರಾಜಕೀಯ ಇತಿಹಾಸ, ವಾಸ್ತು ಮತ್ತು ಶಿಲ್ಪಗಳ ಬಗ್ಗೆ ಸ್ವಲ್ಪ ವಿವರಗಳನ್ನು ನೀಡಲಾಗಿದೆ. ನೊಳಂಬರ ಬಗ್ಗೆ ಹೆಚ್ಚಿನ ವಿವರಗಳನ್ನು ಈ ಪುಸ್ತಕದಲ್ಲಿ ನೀಡಲಾಗಿದೆ.

ಎಪಿಗ್ರಾಫಿಯ ಕರ್ನಾಟಿಕ ೬ ರ ಪೀಠಿಕೆಯಲ್ಲಿ ಸಂಪಾದಕರು ಆ ಸಂಪುಟ ವ್ಯಾಪ್ತಿಯ ಪ್ರದೇಶದಲ್ಲಿದ್ದ ನೊಳಂಬರ ಬಗ್ಗೆ ಉಲ್ಲೇಖವಿರುವ ತಾಯಲೂರಿನ ಶಾಸನದಲ್ಲಿ ನೊಳಂಬಾಧಿ ರಾಜನ ಆಳ್ವಿಕೆಯ ಉಲ್ಲೇಖ ಬಂದಿದೆ. ತೈರೂರು ಗಾಮುಣ್ಡ ಸಾಮಿಯ ಮಗ ನಾಗಮಯ್ಯ ಶಿಲಾಮಯವಾದ ದೇವಾಲಯ ಕಟ್ಟಿಸಿದ್ದನ್ನು ಈ ಶಾಸನ ತಿಳಿಸುತ್ತದೆ. ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ತೈರೂರು ಈಗಿನ ತಾಯಲೂರು. ಅದೇ ಕಲ್ಲಿನ ದಕ್ಷಿಣಮುಖದಲ್ಲಿ

ಶಾಸನವೊಂದಿದ್ದು ಅದು ಸತ್ಯವಾಕ್ಯ ಪೆರ್ಮಾನಡಿಯ ಆಳ್ವಿಕೆಯ ೨೭ ನೇ ವರ್ಷವನ್ನು ಉಲ್ಲೇಖಿಸುತ್ತದೆ. ಪ್ರಸ್ತುತ ಶಾಸನ ನೊಳಮ್ಬಾಧಿರಾಜನನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೮೯೬ ರ ಸುಮಾರಿನಲ್ಲಿ ನೊಳಮ್ಬ ಅಧಿಪ ಮಹೇಂದ್ರನ್ನು ಎಱೆಯಪ್ಪ ಕೊಂದನೆಂದು ಸೂಚಿತವಾಗಿದೆ. ಈತ ಬಹುಶ: ಮಹೇಂದ್ರಾಧಿರಾಜನಿದ್ದಿರಬಹುದು. ಆತ ತನ್ನ ಪರಾಭವ ಮತ್ತು ಸಾವಿಗೆ ಕೆಲವು ತಿಂಗಳ ಮೊದಲಷ್ಟೇ ಈ ದೇವಾಲಯವನ್ನು ಕಟ್ಟಿಸಿರಬೇಕು. ಈ ಶಾಸನ ನೊಳಂಬ ರಾಜನು ಸ್ವತಂತ್ರವಾಗಿ ಆಳ್ವಿಕೆ ನಡೆಸುತ್ತಿದ್ದಂತೆ ಉಲ್ಲೇಖಿಸುವುದನ್ನು ಗಮನಿಸಬಹುದು. ಮುಂದೆ ಇಮ್ಮಡಿ ರಾಚಮಲ್ಲ ತನ್ನ ಆಳ್ವಿಕೆಯ ೨೭ ನೇ ವರ್ಷದಲ್ಲಿ ಬಹುಶ: ಈ ದತ್ತಿಯನ್ನು ಸ್ಥಿರೀಕರಿಸಿ ಅದೇ ಕಲ್ಲಿನ ದಕ್ಷಿಣಮುಖದ ಮೇಲೆ ಶಾಸನ ಹಾಕಿಸಿದ್ದಾನೆ. ಮೇಲಿನ ಶಾಸನದಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಈ ಪ್ರದೇಶದಲ್ಲಿ ಮೊದಲು ಇಟ್ಟಿಗೆಯಿಂದ ನಿರ್ಮಿತವಾದ ದೇವಾಲಯಗಳಿದ್ದು (ಅರೆತಿಪ್ಪೂರು) ಬಹುಶ: ಮಹೇಂದ್ರನು ಕಲ್ಲಿನಲ್ಲಿ ದೇವಾಲಯವನ್ನು ಕಟ್ಟಿಸಿ ಅದರ ಬಗ್ಗೆ ವಿಶೇಷವಾಗಿ ಹೇಳಿಕೊಂಡಿದ್ದಾನೆ.

ಶ್ರೀ ಎ.ವಿ. ನರಸಿಂಹಮೂರ್ತಿಯವರು (೧೯೮೦) ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪ್ರಕಟಿಸಿದ ನೊಳಂಬರು ಎನ್ನುವ ೨೩ ಪುಟಗಳ ಕಿರುಹೊತ್ತಿಗೆಯಲ್ಲಿ ನೊಳಂಬರು ಕರ್ನಾಟಕಕ್ಕೆ ಬಂದು ಪ್ರಾರಂಭದಲ್ಲಿ ಸಣ್ಣ ರಾಜ್ಯವನ್ನು ಸ್ಥಾಪಿಸಿ ೩೦೦ ವರ್ಷಗಳ ಕಾಲ ದಕ್ಷಿಣ ಭಾರತದಲ್ಲಿ ರಾಜ್ಯಭಾರ ಮಾಡಿದರು. ಅವರು ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಪ್ರೋತ್ಸಾಹ ಕೊಟ್ಟು ಕರ್ನಾಟಕ ಇತಿಹಾಸದಲ್ಲಿ ವಿಶೇಷ ಸ್ಥಾನಗಳಿಸಿರುವುದನ್ನು ಸಂಕ್ಷಿಪ್ತವಾಗಿ ಹೇಳಿದ್ದಾರೆ. ನೊಳಂಬರ ಮೂಲ ಪುರುಷನಿಂದ ತ್ರೈಲೋಕ್ಯ ನನ್ನಿ ನೊಳಂಬನವರೆಗೆ ಬಹಳ ಸಂಕ್ಷಿಪ್ತವಾಗಿ ಮಾಹಿತಿ ನೀಡಿದ್ದಾರೆ. ಕಲೆ ಸಾಹಿತ್ಯದ ಬಗ್ಗೆಯೂ ಹೇಳಿದ್ದಾರೆ.

ಡಾ। ಎಂ.ಎಸ್. ಕೃಷ್ಣಮೂರ್ತಿಯವರು 'The Nolambas' A Political and cultural study (c.750 to 1050 A.D) ಎಂಬ ಕೃತಿಯನ್ನು (೧೯೮೦) ಮೈಸೂರು ವಿಶ್ವವಿದ್ಯಾಲಯಕ್ಕೆ ಆಂಗ್ಲ ಭಾಷೆಯಲ್ಲಿ ರಚಿಸಿ ಪಿಎಚ್.ಡಿ. ಪದವಿಗೆ ಸಲ್ಲಿಸಿದ ಪ್ರೌಢ ನಿಬಂಧ. ಈ ನಿಬಂಧವನ್ನು ಹತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿ ನೊಳಂಬರ ಮೂಲ ವಂಶಾವಳಿಯನ್ನು ಚರ್ಚಿಸಿದ್ದಾರೆ. ಆ ವಂಶಾವಳಿಯಲ್ಲಿ ಬರುವ ಮುಖ್ಯ ಅರಸರ ಸಾಧನೆಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ಒಂಬತ್ತನೇ ಅಧ್ಯಾಯದಲ್ಲಿ ಆಡಳಿತ ಮತ್ತು ಸಾಮಾಜಿಕ ಜನ-ಜೀವನಗಳ ವಿವರಗಳನ್ನೂ, ಹತ್ತನೇ ಅಧ್ಯಾಯದಲ್ಲಿ ವಾಸ್ತು ಮತ್ತು ಶಿಲ್ಪಗಳ ಬಗ್ಗೆ ವಿವರಗಳನ್ನು ನೀಡಿದ್ದಾರೆ. ಅಲ್ಲದೆ ಹೆಚ್ಚುವರಿಯಾಗಿ ಅವರ ಆಳ್ವಿಕೆಯ ವಿಭಾಗಗಳ ಬಗ್ಗೆ ಮತ್ತಿತರ ಕೆಲವು ವಿಷಯಗಳ ಬಗ್ಗೆ ಚರ್ಚೆ ಮಾಡಿದ್ದಾರೆ. ಅಭ್ಯಾಸಕ್ಕೆ ಅನುಕೂಲವಾಗುವಂತೆ ನೊಳಂಬ ರಾಜ್ಯದ ಆಡಳಿತ ವಿಭಾಗದ ಭೂಪಟವನ್ನೂ, ನೊಳಂಬರದೆಂದು ಗುರುತಿಸಿರುವ ದೇವಾಲಯಗಳ ತಳವಿನ್ಯಾಸಗಳನ್ನೂ ನೀಡಿದ್ದಾರೆ. ಪುಸ್ತಕದ

ಅಂತ್ಯದಲ್ಲಿ ಹೇಮಾವತಿ, ಆವನಿ, ಧರ್ಮಪುರಿ, ನಂದಿ, ಬರಗೂರು ಸ್ಥಳಗಳಲ್ಲಿನ ಆಯ್ದ ಛಾಯಾಚಿತ್ರಗಳನ್ನು ನೀಡಿದ್ದಾರೆ. ಇಷ್ಟಾದರೂ ಹೆಚ್ಚಿನ ಭಾಗ ಇತಿಹಾಸಕ್ಕೆ ಮೀಸಲಾಗಿದ್ದು ಕೆಲವು ಆಯ್ದ ಸ್ಥಳಗಳ ವಿವರಗಳು ಮಾತ್ರ ಇದರಲ್ಲಿ ಉಲ್ಲೇಖಿತವಾಗಿವೆ. ಈ ವಿವರಗಳಲ್ಲಿ ಹೆಚ್ಚಿನವು ಈಗಾಗಲೆ ಬೇರೆಡೆಯಲ್ಲಿ ಪ್ರಕಟವಾದವುಗಳು.

ಸಾಂಸ್ಕೃತಿಕ ಚರಿತ್ರೆಯಲ್ಲಿ ಇವರ ಕೊಡುಗೆಯನ್ನಾಗಲಿ, ಇವರ ಮೇಲೆ ಬೇರೆಯವರು ಬೀರಿದ ಪ್ರಭಾವವನ್ನಾಗಲಿ ಈ ನಿಬಂಧದಲ್ಲಿ ತಿಳಿಸಿಲ್ಲ. ಇಂದಿಗೂ ಉಳಿದು ಬಂದಿರುವ ಹಾಗೂ ಪೂಜೆ ನಡೆಯುತ್ತಿರುವ ದೇವಾಲಯಗಳ ಬಗ್ಗೆಯಾಗಲಿ ಮತ್ತು ಆ ದೇವರುಗಳ ಮುಂದಿನ ವಿಕಾಸದ ಹಂತದ ಬಗ್ಗೆ ಏನನ್ನೂ ಸೂಚಿಸಿಲ್ಲ. ಅಲ್ಲದೆ ಕಂಪಿಲಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ ನೊಳಂಬರ ಸಾಂಸ್ಕೃತಿಕ ಕೊಡುಗೆಯ ಬಗ್ಗೆ ಹೆಚ್ಚಿನ ಬೆಳಕು ಚೆಲ್ಲಿರುವುದಿಲ್ಲ. ನೊಳಂಬರು ನೊಳಂಬವಾಡಿಯಿಂದ ಕಣ್ಮರೆಯಾದರೂ ಅವರ ಶಾಖೆಗಳ ಮತ್ತು ಅವರ ಸಂತತಿಯ ಬಗ್ಗೆಯಾಗಲಿ ಹೇಳಿರುವುದಿಲ್ಲ.

ತುಮಕೂರು ಜಿಲ್ಲಾ ದರ್ಶನ (೧೯೮೧)ದಲ್ಲಿ ಪುಟ ೩೦ ರಿಂದ ೩೪ ರ ವರೆಗೆ ನಾಲ್ಕು ಪುಟಗಳಲ್ಲಿ ನೊಳಂಬ ರಾಜಧಾನಿಯ ಬಗ್ಗೆ ಮತ್ತು ನೊಳಂಬವಾಡಿ-೩೨೦೦೦ದ ಪ್ರದೇಶಗಳ ಬಗ್ಗೆ ಮತ್ತೆ ನೊಳಂಬ ಮಹೇಂದ್ರನ ಬಗ್ಗೆ, ನೊಳಂಬರ ಪತನದ ಹಾಗೂ ನೊಳಂಬರ ಅರ್ವಾಚೀನ ಇತಿಹಾಸದ ಬಗ್ಗೆ ಬೆಳಕು ಚೆಲ್ಲಿರುವರು.

ಮೈಕೇಲ್ ಮಿಷಲ್ ಮತ್ತು ಎಂ.ಎ. ಡಾಖಿಯವರ ಸಂಪಾದಕತ್ವದಲ್ಲಿ ಹೊರಬಂದಿರುವ 'Encyclopaedia of Indian Temple Architecture' ಸಂಪುಟ.೧, ಭಾಗ.೨ (Upper Dravidadesha)(೧೯೮೬) ಎಂಬ ಪುಸ್ತಕವು ಕರ್ನಾಟಕದಲ್ಲಿ ವಾಸ್ತುಶಿಲ್ಪದ ಆರಂಭ ಕಾಲದಿಂದ ಹಿಡಿದು ಹತ್ತನೇ ಶತಮಾನದವರೆಗಿನ ದೇವಾಲಯಗಳ ಬೆಳವಣಿಗೆಯ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಈ ಪುಸ್ತಕದಲ್ಲಿ ಅಧಿರಾಜರ ವಾಸ್ತುಶಿಲ್ಪವಲ್ಲದೆ ಅಧೀನರಾಜರ ವಾಸ್ತುಶಿಲ್ಪದ ಬಗ್ಗೆಯೂ ವಿವರಗಳನ್ನು ನೀಡಿರುತ್ತಾರೆ. ಅಧಿರಾಜರ ಸಾಲಿನಲ್ಲಿ ಗಂಗ, ನೊಳಂಬ, ಅಳುಪ ಮುಂತಾದವರ ದೇವಾಲಯ ರಚನೆಗಳ ಬಗೆಗಿನ ವಿವರಗಳಿವೆ. ನೊಳಂಬರು ಗಂಗ ರಾಷ್ಟ್ರಕೂಟರ ಸಾಮಂತರಾಗಿ ಮುಂದೆ ಚೋಳರಿಂದ ಬದಿಗೊತ್ತಿದವರಾಗಿ ಕಲ್ಯಾಣದ ಚಾಲುಕ್ಯರ ಆಶ್ರಯವನ್ನು ಸೇರಿದ ಈ ನೊಳಂಬ ಮನೆತನದ ವಾಸ್ತುವಿನ ಬಗ್ಗೆ ಕ್ರಿ.ಶ. ೮೦೦ ರಿಂದ ಕ್ರಿ.ಶ. ೧೦೦೦ ದ ವರೆಗಿನ ರಚನೆಗಳ ಬಗ್ಗೆ ಬೆಳಕು ಚೆಲ್ಲಿರುತ್ತಾರೆ. ವಿಷಯ ಸಂಗ್ರಹ ಕಿರಿದಾದರೂ ಅತ್ಯುಪಯುಕ್ತ ಮಾಹಿತಿ ನೀಡುವ ಮೂಲಕ ಬಹು ಮುಖ್ಯ ಆಕರಗ್ರಂಥವಾಗಿ ಈ ಕೃತಿ ಸ್ಥಾನ ಪಡೆದಿದೆ. ಈ ನೊಳಂಬರ

ವಾಸ್ತುವಿನ ಬಗ್ಗೆ ತಿಳಿಸುವ ಅಧ್ಯಾಯದಲ್ಲಿ ನೊಳಂಬರ ವಾಸ್ತುವಿನ ವೈಲಕ್ಷಣಗಳೇನು ಎಂಬುದನ್ನು ಈ ಅಧ್ಯಾಯದಲ್ಲಿ ಸೋದಾಹರಣವಾಗಿ ನಿರೂಪಿಸಲಾಗಿದೆ. ಅಷ್ಟರ ಮಟ್ಟಿಗೆ ಈ ಗ್ರಂಥವು ಮಾರ್ಗದರ್ಶಿ ಗ್ರಂಥದ ಸ್ಥಾನವನ್ನು ಪಡೆದಿದೆ.

ಶ್ರೀ ಕೆ. ಕೃಷ್ಣಮೂರ್ತಿಯವರು ಬರೆದಿರುವ Nolambas Scluptures: A Cultural Study (೧೯೮೭) ಎಂಬ ಪುಸ್ತಕವು ಪ್ರಕಟವಾಗಿದ್ದು ನೊಳಂಬರ ಕಾಲದ ಸಾಮಾಜಿಕ ಧಾರ್ಮಿಕ ವಿಷಯಗಳನ್ನೊಳಗೊಂಡಿದೆ. ಅವರ ಕಾಲದ ಶಿಲ್ಪಗಳಲ್ಲಿನ ವೇಷಭೂಷಣಗಳು, ಆಯುಧಗಳು ಮುಂತಾದವುಗಳ ಬಗ್ಗೆ ಇಲ್ಲಿ ವಿವೇಚಿಸಲಾಗಿದೆ. ಈ ಪುಸ್ತಕದಲ್ಲಿ ನೀಡಿರುವ ರೇಖಾಚಿತ್ರಗಳು ಬಹು ಉಪಯುಕ್ತವಾಗಿವೆ. ಇದನ್ನು ಬಿಟ್ಟರೆ ವಿವರಣೆಯ ಸಂಗ್ರಹಣೆಯಲ್ಲಿ ಹೊಸದೇನನ್ನು ಹೇಳುತ್ತಿಲ್ಲ. ಇಡೀ ಪುಸ್ತಕ ಹೇಮಾವತಿಯ ಶಿಲ್ಪಗಳನ್ನಾಧರಿಸಿ ಬರೆದಂತಿದ್ದು ಅದರ ಮಿತಿಯಿಂದ ಹೊರಬಂದಿಲ್ಲ. ಹೇಮಾವತಿಗೇ ಸೀಮಿತವಾಗಿದೆಯೇನೋ? ಎಂಬ ಅನಿಸಿಕೆ ಉಂಟುಮಾಡುತ್ತದೆ.

Andrew L Cohen ಅವರು The Temple Architecture and Sclupture of the Nolambas ಎಂಬ ಪುಸ್ತಕವನ್ನು ಬರೆದಿದ್ದು, ಇದರಲ್ಲಿ ಐದು ಅಧ್ಯಾಯಗಳಿವೆ. ಇವುಗಳಲ್ಲಿ ನೊಳಂಬರ ಇತಿಹಾಸವನ್ನು ಸಂಕ್ಷಿಪ್ತವಾಗಿ ಹೇಳಿ ಉಳಿದ ಅಧ್ಯಾಯಗಳಲ್ಲಿ ವಾಸ್ತು ಮತ್ತು ಮೂರ್ತಿಶಿಲ್ಪದ ವಿವರಗಳನ್ನು ನೀಡಿದ್ದಾರೆ. ಈ ವಿಂಗಡಣೆಯನ್ನು ನೊಳಂಬರ ಆಳ್ವಿಕೆಯ ಹೃದಯಭಾಗ, ಪೂರ್ವಭಾಗ, ಮತ್ತು ದಕ್ಷಿಣಭಾಗದ ಅವಶೇಷಗಳನ್ನು ವಿಂಗಡಿಸಿಕೊಂಡು ಅನೇಕ ದೇವಾಲಯಗಳ ವಿವರಗಳನ್ನು ನೀಡಿರುತ್ತಾರೆ. ಪ್ರತಿ ವಿಭಾಗದಲ್ಲಿರುವ ದೇವಾಲಯಗಳ ವಿವರಣೆಗಳನ್ನು ಮತ್ತು ಹೋಲಿಕೆಗಳನ್ನು ನೀಡಿದ್ದು ವಾಸ್ತು ಮತ್ತು ಮೂರ್ತಿಶಿಲ್ಪದ ಛಾಯಾಚಿತ್ರಗಳ ಸಹಿತ ವಿವರಗಳಿಗೆ ಹೆಚ್ಚಿನ ಗಮನ ನೀಡಿದ್ದಾರೆ.

Douglas Barrett ಅವರು ಆಂಗ್ಲಭಾಷೆಯಲ್ಲಿ ಬರೆದಿರುವ ಹೇಮಾವತಿ ಎಂಬ ಪುಸ್ತಕವು ನೊಳಂಬರ ರಾಜಧಾನಿಯಾಗಿದ್ದ ಹೇಮಾವತಿಯನ್ನು ಕುರಿತು ಬರೆದಿದ್ದಾರೆ. ಈ ಪುಸ್ತಕವು ಕೆಲವೇ ಪುಟಗಳನ್ನು ಹೊಂದಿದ್ದರೂ (Nolamaba Temples at Hemavathi, Bombay.1958) ಅದರಲ್ಲಿರುವ ಛಾಯಾಚಿತ್ರಗಳಿಂದ ಪ್ರಾಮುಖ್ಯತೆಯನ್ನು ಪಡೆದಿದೆ.

ಪಲ್ಲವ–ನೊಳಂಬ ಕುಡಿಯರ ಮಹಾ (೭) ನಾಡಿನ ನೊಳಂಬ ಸಿದ್ದೇಶ್ವರ ಎಂಬ ಹೆಸರಿನ ಸ್ಮರಣ ಸಂಚಿಕೆ (೨೦೦೨)ಯಲ್ಲಿ ನೊಳಂಬರ ಬಗ್ಗೆ ಈಗಾಗಲೇ ಪ್ರಕಟವಾಗಿರುವ ವಿವರಗಳನ್ನೊಳಗೊಂಡಂತೆ ಮಾಹಿತಿ ನೀಡಿರುತ್ತಾರೆ.

++

# ಅಧ್ಯಾಯ – II

# ಕರ್ನಾಟಕದಲ್ಲಿ ಪಲ್ಲವರು ಮತ್ತು ಅವರ ಉಲ್ಲೇಖಗಳು

ಕರ್ನಾಟಕದ ಇತಿಹಾಸಕ್ಕೆ ಸುಮಾರು ಎರಡು ಸಾವಿರ ವರ್ಷಗಳಷ್ಟು ಸುದೀರ್ಘ ಉನ್ನತ ಪರಂಪರೆಯಿದೆ. ಈ ಅವಧಿಯಲ್ಲಿ ದಕ್ಷಿಣ ಭಾರತದ ಪ್ರಮುಖ ಅರಸು ಮನೆತನಗಳಾದ ಪಲ್ಲವ, ಕದಂಬ, ಚಲುಕ್ಯ, ರಾಷ್ಟ್ರಕೂಟ, ಗಂಗ, ಬಾಣ, ಪಾಂಡ್ಯ, ಚೋಳ ಮುಂತಾದವರು ಕೆಲವೊಮ್ಮೆ ಸ್ವತಂತ್ರ ರಾಜರಾಗಿಯೂ, ಮಾಂಡಲೀಕರಾಗಿಯೂ ಪ್ರಸಿದ್ಧರಾಗಿದ್ದಾರೆ. ಆ ಅರಸು ಮನೆತನಗಳಲ್ಲಿ ನೊಳಂಬ ಪಲ್ಲವರ ವಂಶವೂ ಒಂದು. ನೊಳಂಬ ಪಲ್ಲವರ ಬಗ್ಗೆ ಚರ್ಚಿಸುವ ಮೊದಲು ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಪಲ್ಲವ ವಂಶಗಳ ಬಗ್ಗೆ ಗಮನಿಸೋಣ.

ಪ್ರಾಚೀನ ತಮಿಳು ಸಂಘಂ ಸಾಹಿತ್ಯದಲ್ಲಿ ಪಲ್ಲವರ ಉಲ್ಲೇಖವಿಲ್ಲ. ಕ್ರಿಸ್ತಪೂರ್ವದ ಕೊನೆಯಲ್ಲಿ ಅಥವಾ ಕ್ರಿಸ್ತಶಕದ ಆರಂಭದಲ್ಲಿಯೂ ಪಲ್ಲವರ ಹೆಸರು ಕೇಳಿಬರುವುದಿಲ್ಲ. ಪಲ್ಲವರು ಕ್ರಿ.ಶ. ಎರಡನೆಯ ಶತಮಾನದಿಂದ ಕಂಚಿಯನ್ನು ಆಳ್ವಿಕೆ ಮಾಡಲು ಪ್ರಾರಂಭಿಸಿರಬೇಕು. ಈ ಆಧಾರಗಳಿಂದ ಪಲ್ಲವರ ಪ್ರಾರಂಭದ ಕಾಲವನ್ನು ಕ್ರಿ.ಶ. ಎರಡನೆಯ ಶತಮಾನದ ಅಂತ್ಯ ಅಥವಾ ಮೂರನೆಯ ಶತಮಾನದ ಆರಂಭದಲ್ಲಿ ಆಗಿರಬಹುದೆಂದು ಗುರುತಿಸಬಹುದು[1] ಎಂದು ಅಭಿಪ್ರಾಯಪಡುತ್ತಾರೆ.

ದಕ್ಷಿಣ ಭಾರತದಲ್ಲಿ ಶಾತವಾಹನರ ನಂತರ ಪಲ್ಲವರು ದಕ್ಷಿಣಾಪಥದ ಪೂರ್ವ ಭಾಗದಲ್ಲಿ ಶಾತವಾಹನರಿಗೆ ಸೇರಿದ ಪ್ರದೇಶಗಳನ್ನು ಆಕ್ರಮಿಸಿ ಅವರ ಉತ್ತರಾಧಿಕಾರಿಗಳಾಗಿ ಆಳ್ವಿಕೆ ಮಾಡಿದರು. ದಕ್ಷಿಣ ಭಾರತದ ಪ್ರದೇಶದಲ್ಲಿನ ಸಾತವಾಹನ ರಾಜ್ಯ ಸಹ ಪಲ್ಲವರದಾಯಿತು.[2]

ಕ್ರಿ.ಶ.೩ನೇ ಶತಮಾನದಲ್ಲಿದ್ದ ಮುಕುಂಟಿ ಪಲ್ಲವನ ಪೂರ್ವಜರು ಪ್ರತಿಷ್ಠಾನ (ಗೋದಾವರಿ ದಡದಲ್ಲಿರುವ ಪೈಠಣ) ದಲ್ಲಿ ಆಳುತ್ತಿದ್ದ ಶಾಲಿವಾಹನ ವಂಶಜನಾಗಿದ್ದ.[3] ಇವನು ಪೂರ್ವದಲ್ಲಿ ಕೃಷ್ಣ ಮತ್ತು ಗೋದಾವರಿಗಳ ನಡುವಿನ ವೆಂಗಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಇವನು ಬ್ರಾಹ್ಮಣರನ್ನು ದಕ್ಷಿಣದಲ್ಲಿ ಪರಿಚಯಿಸಿದನು. ಆದರೆ ಮುಂದೆ ಮದ್ರಾಸ್ ಹತ್ತಿರದ 'ಕಾಂಚೀ' ಅವರ ಮುಖ್ಯ ರಾಜಧಾನಿಯಾಗಿತ್ತು.[4]

ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಹಿರೇಹಡಗಲಿಯ ಶಾಸನದಿಂದ[5] ಕ್ರಿ.ಶ.ಸು. ೩ನೇ ಶತಮಾನದಲ್ಲಿಯೇ ಪಲ್ಲವರು ಕರ್ನಾಟಕದಲ್ಲಿದ್ದುದು ತಿಳಿಯಬಹುದು. ಎಂಟು ಹಲಗೆಗಳಿರುವ ಶಾಸನದ ಮುದ್ರೆಯಲ್ಲಿ 'ಶಿವಸ್ಕಂದವರ್ಮಣಃ' ಎಂಬ ಬರಹವಿದೆ. ಕಾಲದ ಉಲ್ಲೇಖವಿರದ ಈ ಶಾಸನ ಪ್ರಾಕೃತಭಾಷೆಯಲ್ಲಿದೆ. ಕಾಂಚಿಯ ಪ್ರಾಚೀನ ಪಲ್ಲವರ ಕಾಲಕ್ಕೆ ಸೇರಿದೆ. ಬಪ್ಪ(?) ನ ಮಗ ಪಲ್ಲವರ ದೊರೆ ಶಿವಸ್ಕಂದವರ್ಮನು ತನ್ನ ಆಳ್ವಿಕೆಯಲ್ಲಿ ಹಾಕಿಸಿದ ಶಾಸನ ಇದಾಗಿದೆ. ಇವನು ಭಾರಧ್ವಾಜಗೋತ್ರಕ್ಕೆ ಸೇರಿದವನು. ಇವನು ಚಿಲ್ಲರೆಕೋಡುಂಕ ಗ್ರಾಮದಲ್ಲಿನ ತೋಟವನ್ನು ಈ ಮೊದಲೇ ಬಪ್ಪಸ್ವಾಮಿರಾಜನು ಬ್ರಾಹ್ಮಣರಿಗೆ ದಾನವಾಗಿ ನೀಡಿದ್ದನ್ನು ಪುನರ್ದತ್ತಿಯಾಗಿ ನೀಡಿರುವುದು ತಿಳಿದು ಬರುತ್ತದೆ. ಪಲ್ಲವರು ತಮ್ಮ ಸಾಮ್ರಾಜ್ಯಕ್ಕೆ ಸೇರಿದ ಭಾಗಗಳನ್ನು ಗುರುತಿಸುವಾಗ ಶಾಸನ ದಾನದ ಉಲ್ಲೇಖದ ಭಾಗವನ್ನು 'ಶಾತವಾಹನಿರಠ' (ಶಾತವಾಹನ ರಾಷ್ಟ್ರ) ಎಂದು ಹೆಸರಿಸಲಾಗಿದೆ.[6]

ಇದೇ ಕಾಲದ ಪಲ್ಲವರ ಶಾಸನವೊಂದು ಮಯಿದವೋಲುವಿನಲ್ಲಿ ದೊರೆತಿದ್ದು ಇಲ್ಲಿಯೂ ಪಲ್ಲವರು ಆಳುತ್ತಿದ್ದ ಉಲ್ಲೇಖವಿದೆ. ಹೀಗಾಗಿ ಕರ್ನಾಟಕದಲ್ಲಿ ಕ್ರಿ.ಶ.೩ನೇ ಶತಮಾನದಲ್ಲಿಯೇ ಪಲ್ಲವರು ಆಳುತ್ತಿದ್ದರು. ಇವರ ನಂತರವೂ ಈ ವಂಶದ ಅನೇಕ ಅರಸರು ಕರ್ನಾಟಕದ ಬೇರೆ ಬೇರೆ ಭಾಗದಲ್ಲಿ ಆಳುತ್ತಿದ್ದುದು ತಿಳಿಯುತ್ತದೆ.

ಕ್ರಿ.ಶ. ೪ನೇ ಶತಮಾನಕ್ಕೆ ಸೇರಿದ ಕದಂಬ ಮಯೂರಶರ್ಮನ ಚಂದ್ರವಳ್ಳಿ ಶಾಸನದಲ್ಲಿ ಅನೇಕ ಅರಸರ ಸಂಗಡ ಪಲ್ಲವರ ಉಲ್ಲೇಖವೂ ಬಂದಿದೆ. ಶಾಸನವು ಮೂರು ಸಾಲನ್ನು ಹೊಂದಿದ್ದು ಕದಂಬರಾಜನಾದ ಮಯೂರಶರ್ಮನು ಕೆರೆಯನ್ನು ಕಟ್ಟಿಸಿದಂತೆ ಹೇಳಿ, ಇವನು ತ್ರೇಕೂಟ, ಅಭೀರ, ಪಲ್ಲವ, ಪಾರಿಯಾತ್ರಿಕ, ಸಕಸ್ಥಾಣ, ಸಯಿನ್ದಕ, ಪುಣಾಟ ಮತ್ತು ಮೊಕರಿ[ಣಾ] ಗಳನ್ನು ಸೋಲಿಸಿದನೆಂದು ತಿಳಿಸುತ್ತದೆ.[7]

ಕಾಕುಸ್ಥವರ್ಮನ ತಾಳಗುಂದ ಶಾಸನದಲ್ಲಿ ಮಯೂರಶರ್ಮನು ಪಲ್ಲವರ ರಾಜಧಾನಿಯಾದ ಕಾಂಚೀಪುರದ ಘಟಿಕಾಸ್ಥಾನಕ್ಕೆ ಉನ್ನತ ಅಭ್ಯಾಸಕ್ಕೆಂದು ತನ್ನ ಗುರು (ತಾತ) ವೀರಶರ್ಮನ ಜೊತೆಯಲ್ಲಿ ಹೋದನು. ಅಲ್ಲಿ ಪಲ್ಲವರ ಅಶ್ವಸಂಸ್ಥೆಯೊಡನೆ ಆದ ಕಲಹದಲ್ಲಿ ಅವಮಾನಿತನಾಗಿ ರೊಚ್ಚಿಗೆದ್ದು ಬ್ರಾಹ್ಮಣಕರ್ಮಗಳನ್ನು ತ್ಯಜಿಸಿ, ಕ್ಷಾತ್ರಧರ್ಮ ಧಾರಣಮಾಡಿ, ಶಸ್ತ್ರವನ್ನು ಹಿಡಿದು ಪಲ್ಲವರ ಅನ್ತಪಾಲರನ್ನು ಸೋಲಿಸಿ, ಬೃಹದ್ಬಾಣರು ಮುಂತಾದ ಅರಸರಿಂದ ಕಪ್ಪಗಳನ್ನು ಮತ್ತು ತೆರಿಗೆಗಳನ್ನು ಪಡೆದು ಸ್ವತಂತ್ರರಾಜ್ಯ ಸ್ಥಾಪಿಸಿದ. ಈ ಘಟನೆಯ ನಂತರ ಪಲ್ಲವರು ಇವನನ್ನು ಮಿತ್ರನನ್ನಾಗಿ ಪರಿಗಣಿಸಿದರು ಎಂದಿದೆ. ಇದರ ಪ್ರಕಾರ ಪಲ್ಲವರು ಮಯೂರವರ್ಮನ ಕಾಲದವರೆಗೆ ಇಡೀ ಕರ್ನಾಟಕವನ್ನು ಆಳುತ್ತಿದ್ದುದೂ, ಮಯೂರವರ್ಮನು ಅವರನ್ನು ಓಡಿಸಿದಂತೆ ಉಲ್ಲೇಖವಾಗಿದೆ.[8] ಮಯೂರವರ್ಮ ರಾಜ್ಯ ಸ್ಥಾಪಿಸುವ ಕಾಲದವರೆಗೆ ಕರ್ನಾಟಕದ ವೈಜಯಂತಿಯೂ ಸೇರಿದಂತೆ ಬಹುಭಾಗ ಪಲ್ಲವರ ಅಧೀನದಲ್ಲಿತ್ತು.

ಕ್ರಿ.ಶ.೫ನೇ ಶತಮಾನದ ಹಲ್ಮಿಡಿ ಶಾಸನದಲ್ಲಿ ಕದಂಬ ದೊರೆ ಕಾಕುಸ್ಥವರ್ಮನ ಮೊಮ್ಮಗನಾದ ಮೃಗೇಶವರ್ಮನು ಕೇಕೆಯ, ಪಲ್ಲವರ ಮೇಲೆ ನಡೆದ ಯುದ್ಧದ ಸಂದರ್ಭದಲ್ಲಿ ಭಾಗವಹಿಸಿ ಜಯವನ್ನು ಪಡೆದ ವಿಜ ಅರಸ ಎಂಬುವನಿಗೆ 'ಬಾಳ್ಗಚ್ಚು' ನೀಡಿದ ವಿವರಗಳನ್ನು ತಿಳಿಸುತ್ತದೆ. ಈ ಶಾಸನದ ಕಾಲವನ್ನು ಲಿಪಿ ಮತ್ತು ಕೆಲವು ಆಂತರಿಕ ಆಧಾರಗಳ ಮೇಲೆ ಕಾಕುಸ್ಥವರ್ಮನ ಕಾಲದೆಂದು ತೀರ್ಮಾನಿಸಿರುತ್ತಾರೆ.[9] ಈ ಶಾಸನದಲ್ಲಿ ಪಲ್ಲವರ ಮೇಲೆ ಯುದ್ಧ ಮಾಡಿದ ಉಲ್ಲೇಖ ಬಂದಿರುವುದರಿಂದ ಕದಂಬರು ಪಲ್ಲವರನ್ನು ಕರ್ನಾಟಕದಿಂದ ಓಡಿಸಿ ಸ್ವತಂತ್ರರಾದರೂ, ಸಣ್ಣ ಪುಟ್ಟ ಮಾಂಡಲೀಕರಾಗಿ ನೆಲೆಗೊಂಡಿದ್ದರೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಕಂಚಿಯ ಪಲ್ಲವರೇ, ಬೇರೆ ಈ ಗುಂಪುಗಳೇ ಬೇರೆ ಎಂದು ಹೇಳಬಹುದು, ಕದಂಬ ಮಯೂರವರ್ಮನು ಪಲ್ಲವರನ್ನು ಕರ್ನಾಟಕದ ಹೊರಗೆ ಕಳುಹಿಸಿದರೂ, ಪಲ್ಲವ ವಂಶದ ಅನೇಕ ಸಣ್ಣ ಪುಟ್ಟ ರಾಜರು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಆಳುತ್ತಿದ್ದುದು ಇಂತಹ ಶಾಸನಗಳಲ್ಲಿ ಉಲ್ಲೇಖಿತವಾದ ಘಟನೆಗಳಿಂದ ತಿಳಿದುಬರುತ್ತದೆ.

ಮೃಗೇಶವರ್ಮನ ಬನವಾಸಿ ಶಾಸನದಲ್ಲಿ ಮೃಗೇಶವರ್ಮನು ಗಂಗರನ್ನು, ಪಲ್ಲವರನ್ನು ಸೋಲಿಸಿದನೆಂದು 'ಆಜನ್ಮತಸ್ಸಜ್ಜಿತ ದುಮ್ಮ: (ಖ) ಲಬ್ದಾಂಜಯಶ್ರೀಯಂ ಪಲ್ಲವ ಪಾರ್ಥಿವಸ್ಸ ಜಹಾರ ರಾಮಸ್ಸಯಶ್ಯೆ (ಥೈ) ವ ರಾಮ:' ಹೇಳುತ್ತದೆ.[10]

ರವಿವರ್ಮನ ಹಲಸಿ ತಾಮ್ರಶಾಸನದಲ್ಲಿ ಅರಸ ರವಿವರ್ಮನು ವಿಷ್ಣುವರ್ಮಾದಿ ಅರಸರನ್ನು ಕೊಂದು ಕಾಂಚೀಶ್ವರನಾದ ಚಂಡದಂಡನನ್ನು ನಿರ್ಮೂಲಗೊಳಿಸಿದನೆಂದು ಹೇಳಿದೆ. 'ಉತ್ಸಾದ್ಯ ಕಾಞ್ಚೀಶ್ವರ ಚಣ್ಡದಣ್ಡಂ ಪಲಾಶಿಕಾಯಂ ಸಮವಸ್ಥಿತಸ್ಯ:' ಚಂಡದಂಡ ಪಲ್ಲವ ಅರಸ ಕಾಂಚೀಪುರವನ್ನು ಆಳುತ್ತಿದ್ದನೆಂದು ಈ ಶಾಸನ ತಿಳಿಸುತ್ತದೆ. ಶಾಸನದಲ್ಲಿ ಕಾಲ ನಿರ್ದೇಶನವಿಲ್ಲ. ಇದರ ಭಾಷೆ ಸಂಸ್ಕೃತ.[11]

ಚಿತ್ರದುರ್ಗ ಜಿಲ್ಲೆ, ದಾವಣಗೆರೆ ತಾಲೂಕು ಅಣಜಿ ಗ್ರಾಮದಲ್ಲಿ[12] ಸಿಕ್ಕಿರುವ ಶಾಸನದಲ್ಲಿ 'ನಣಕ್ಕಸ ಪಲ್ಲವನು' ಅಣಜಿ ಎಂಬ ಪ್ರದೇಶದ ಹತ್ತಿರ ನಡೆದ ಯುದ್ಧದಲ್ಲಿ ಕದಂಬ ಕೃಷ್ಣವರ್ಮ ರಾಜನನ್ನು ಸೋಲಿಸಿದನ್ನು ತಿಳಿಸುತ್ತದೆ. 'ಶಿವನನ್ದವರ್ಮ್ಮಾ ಸ್ವದೇಶಸ್ಯ ಕ್ಷಯೇ ನಣಕ್ಕಾಸ ಪಲ್ಲವರಾಜ ಕೃಷ್ಣವರ್ಮರಾಜಯೋಃ ಸಮರೇತು ಮುಲಿನೇ ಪ್ರವೃತ್ರೇ ಕೃಷ್ಣವರ್ಮರಾಜ ಸೈನ್ಯೇ ಭಗ್ನೇ ಪ್ರಶಮಿತ ಹೃದಯ:' ಈ ಯುದ್ಧದಲ್ಲಿ ಕಾದಿದ ಶಿವನಂದವರ್ಮನು ಸೋಲನ್ನು ಸಹಿಸದೆ ಸನ್ಯಾಸವನ್ನು ಸ್ವೀಕರಿಸಿ, ದರ್ಭಾಶಯನನ್ನಾಗಿ ಶಾಶ್ವತಕೀರ್ತಿಗಾಗಿ ದಿವಂಗತನಾದನೆಂದು ತಿಳಿಸುತ್ತದೆ. ಈತನು ಕೃಷ್ಣವರ್ಮನಿಗೆ ಕೇಕೆಯ ರಾಜಪುತ್ರಿಯಲ್ಲಿ ಜನಿಸಿದ ಮಗನೆಂದು ಊಹಿಸಲಾಗಿದೆ.[13]

ಈ ಶಾಸನದ ಆಧಾರದಿಂದ ಪಲ್ಲವರು ಅಲ್ಲಲ್ಲಿ ನೆಲೆಗೊಂಡಿದ್ದು ಕದಂಬರನ್ನು ವಿರೋಧಿಸುತ್ತಿದ್ದ ಸಂಗತಿ ತಿಳಿಯುತ್ತದೆ. ಈ ಸ್ಥಳೀಯ ಪಲ್ಲವ ರಾಜರು ಕದಂಬ ರಾಜರ ಗದ್ದುಗೆಯ ವಿಷಯದಲ್ಲಿಯೂ ತಲೆ ಹಾಕಿದಂತೆ ಈ ಶಾಸನದಿಂದ ಅರ್ಥೈಸಬಹುದು. ಕದಂಬರ ಎರಡು ಶಾಖೆಗಳ ಕಿತ್ತಾಟದ ಸಂದರ್ಭವನ್ನು ಇವರು ತಮ್ಮ ಅನುಕೂಲಕ್ಕೆ ಬಳಸಿಕೊಂಡಿರಬೇಕು. ಈ ಪಲ್ಲವರು ಬಹುಶಃ ಕಂಚಿಯ ನೇರ ಶಾಖೆಗೆ ಸೇರಿದವರಲ್ಲ.

ತುಮಕೂರು ಜಿಲ್ಲೆಯ ಕೋರ ಗ್ರಾಮದಲ್ಲಿ ದೊರೆತ ವಿಷ್ಣುವರ್ಮನ ೫ ನೇ ವರ್ಷದ ಹೆರ್ಬಟ ತಾಮ್ರಶಾಸನದಲ್ಲಿ[14] 'ಶಾನ್ತಿವರ ಮಹರಾಜ ಪಲ್ಲವೇನ್ದ್ರಾಭಿಷಿಕ್ತೇನ ಶ್ರೀ ವಿಷ್ಣುವರ್ಮಮಹಾರಾಜೇನ ಕೂಡಲೂರಧಿಷ್ಠಾನೇ' ವಿಷ್ಣುವರ್ಮನನ್ನು ಪಲ್ಲವರ ಅರಸ ಶಾಂತಿವರ ಮಹಾರಾಜನು ಪಟ್ಟಾಭಿಷೇಕ ಮಾಡಿದ ವಿಷಯ ತಿಳಿಸುತ್ತದೆ. ಈ ಶಾಸನದ ಭಾಷೆ ಸಂಸ್ಕೃತ.

ಈ ಶಾಂತಿವರ (ರ್ಮ್ಮ) ರಾಜ ಕಾಂಚಿಯ ಪಲ್ಲವರ ವಂಶಾವಳಿಯಲ್ಲಿ ಕಂಡುಬರುವುದಿಲ್ಲ. ಹೀಗಾಗಿ ಈ ಶಾಂತಿವರ್ಮನು ಸ್ಥಳೀಯನಾಗಿದ್ದ ಪಲ್ಲವ ವಂಶದವನಾಗಿರಬೇಕು.

ಈ ಪಲ್ಲವ ವಂಶೀಯರಿಗೂ ಈ ಕದಂಬರಿಗೂ ಯುದ್ಧಗಳಾಗುತ್ತಿದ್ದುದನ್ನು ಮೇಲಿನ ಶಾಸನಗಳು ಉಲ್ಲೇಖಿಸುತ್ತವೆ. ಹೀಗಾಗಿ ಈ ಪಲ್ಲವ ವಂಶಗಳು ಮೂಲವಂಶದ ಯಾವುದೋ ಶಾಖೆಗೆ ಸೇರಿದವರಾಗಿರಬಹುದು.

ಇಮ್ಮಡಿ ಮಾಧವನ ಪೆನುಗೊಂಡೆ ತಾಮ್ರಶಾಸನದಲ್ಲಿ ಕಣ್ವಾಯನಗೋತ್ರದ ಒಂದನೇ ಮಾಧವನ ಮಗ ಅಯ್ಯವರ್ಮನಿಗೆ ಪಲ್ಲವರ ದೊರೆ ಸಿಂಹವರ್ಮ ಪಟ್ಟಕಟ್ಟಿದ ಉಲ್ಲೇಖವಿದೆ. ಅಯ್ಯವರ್ಮನ ಮಗ ಸಿಂಹವರ್ಮನೆಂದು ಹೆಸರಿದ್ದ ಇಮ್ಮಡಿ ಮಾಧವನಿಗೆ ಪಲ್ಲವರ ದೊರೆ ಸ್ಕಂದವರ್ಮನು ಪಟ್ಟಾಭಿಷೇಕ ಮಾಡಿದ ವಿಷಯ ಹೇಳುತ್ತದೆ. ಈ ಮಾಧವ ಕ್ರಿ.ಶ.ಸು.೫ನೇ ಶತಮಾನಕ್ಕೆ ಸೇರಿದ ಪಲ್ಲವರ ಸ್ಕಂದವರ್ಮ ಈ ಕಾಲಕ್ಕೆ ಸೇರಿದ್ದಾನೆ. ಶಾಸನದಲ್ಲಿ ಇವರು ಆಳ್ವಿಕೆ ನಡೆಸುತ್ತಿದ್ದ ಪ್ರದೇಶಗಳನ್ನು ಹೆಸರಿಸಿರುವುದಿಲ್ಲ. ಫ್ಲೀಟ್ ಅವರು ಶಾಸನದ ಕಾಲವನ್ನು ಕ್ರಿ.ಶ. ೪೭೫ ಎಂದು ಹೇಳಿದ್ದಾರೆ.

ಗಂಗರಿಗೂ ಕಾಂಚಿಯ ಪಲ್ಲವರಿಗೂ ಮೊದಲಿನಿಂದ ಸಂಬಂಧಗಳಿದ್ದು ಈ ಸಿಂಹವರ್ಮನನ್ನು ಪಲ್ಲವರ ಕಾಂಚಿಯ ಶಾಖೆಯಲ್ಲಿ ಗುರುತಿಸಲಾಗಿದೆ. ಹೀಗಾಗಿ ಈ ಪಲ್ಲವ ಅರಸ ಸಿಂಹವರ್ಮನು ಕಂಚಿಯ ಮೂಲಶಾಖೆಯ ಅರಸನಾಗಿದ್ದಾನೆ. ಆದರೂ ಕರ್ನಾಟಕದ ರಾಜಕಾರಣದಲ್ಲಿ ಕೈ ಆಡಿಸಿರುವುದು ಈ ಘಟನೆಗಳಿಂದ ತಿಳಿಯುತ್ತದೆ.

ಕಾರವಾರ ಜಿಲ್ಲೆಯ ಕರಾವಳಿ ಪ್ರದೇಶದಲ್ಲಿ ಪಲ್ಲವರ ಒಂದು ಮನೆತನ ರಾಜ್ಯವಾಳುತ್ತಿತ್ತೆಂದು ಹಳದಿಪುರ ತಾಮ್ರಶಾಸನದಿಂದ ತಿಳಿದು ಬರುತ್ತದೆ.[15]ಈ ತಾಮ್ರಶಾಸನ ನಾಲ್ಕು ಹಾಳೆಗಳನ್ನು ಹೊಂದಿದೆ. 'ಸ್ವಸ್ತಿ ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪ್ರಿಥುವಿವಲ್ಲಭ ಪಲ್ಲವ ರಾಜ ಗೋಪಾಲದೇವಸ್ಯ ಕೇಕೆಯ ವಂಶೋದ್ಭವೋ ಪ್ರಧಾನ ಪುರುಶ್ಯಾಯ ಅನೇಕ ಗುಣಗಣ ಅಲಂಕೃತ ಪ್ರಸೇವ್ಯ ಲಕ್ಷ್ಮೀನಿವಾಸ ವಕ್ಷಸ್ಥಲಸ್ಯ ಅನೇಕ ರಣ ವಿಪುಲ ಶತ್ರುಜನ ಪ್ರಭಂಜನ ಕರಿ ಕರಾಕರ ಬಾಹುದ್ವಯಸ್ಯಯ ಚಂಡಮಹಾಸೇನ ಪುತ್ರಸ್ಯ ಪಯ್ವೆಗುಂದು ಪುರೇಶ್ವರಸ್ಯ ಪಲ್ಲವರಾಜೇನ ದತ್ತಃ ಮಂತ್ರಿ ಪುರೋಹಿತ ಶ್ರೀಕರಣಮಂ ಸಾಸಿರ್ವರುಂ ಅಯಿನೂರುರ್ವ್ವರುಂ ಸಹಿತ ತಮ್ಮ ಪ್ರಸಾದ ಪರನ ಅಪ್ಪೊಂಗೆ' ಎಂಬುದಾಗಿ ಉಲ್ಲೇಖಿತವಾಗಿದೆ.

ಅನೇಕ ಯುದ್ಧಗಳಲ್ಲಿ ಶತ್ರುಗಳನ್ನು ಸೋಲಿಸಿದ ಕೇಕೆಯವಂಶದಲ್ಲಿ ಜನಿಸಿದ ಚಂಡಮಹಾಸೇನನ ಪುತ್ರ, ಪಯ್ವೆಗುಂದ ಪರಮೇಶ್ವರ, ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀ ಪೃಥ್ವಿವಲ್ಲಭ ಪಲ್ಲವರಾಜ ಗೋಪಾಲದೇವನು ಮಂತ್ರಿ, ಪುರೋಹಿತ, ಶ್ರೀಕರಣ, ನಗರ, ಮಹಾಜನ ಸಹಿತವಾಗಿ

ಆರಿದ (ಹಾರೀತ) ಗೋತ್ರದ ಸಿಂಗಿತಲೆ ಪಣ್ಯಾರಂಗ ಎಂಬುವವನಿಗೆ ಕಾಸಂಪಳ್ಳಿ ಗ್ರಾಮದ ಅರ್ಧ ಭಾಗವನ್ನು, ಕೆಲವು ಭೂಮಿಗಳನ್ನು ದಾನವಾಗಿ ಕೊಟ್ಟು ಸುಂಕಗಳನ್ನು ಬಿಟ್ಟ ಸಂಗತಿ ತಿಳಿದು ಬರುತ್ತದೆ.

'ಪಂಪ್ವೆಗುಂದ ಪುರೇಶ್ವರ' ಹೆಸರಿನಿಂದ ಪಂಪ್ವೆಗುಂದವು ಗೋಪಾಲದೇವನ ರಾಜಧಾನಿಯಗಿತ್ತೆಂದು ತಿಳಿದುಬರುತ್ತದೆ. ಪಂಪ್ವೆಗುಂದ ಈಗಿನ ಹೈಗುಂದ. ವಿಕ್ರಮಾದಿತ್ಯ ಸತ್ಯಾಶ್ರಯ ಶ್ರೀಪೃಥ್ವೀವಲ್ಲಭ ಪಲ್ಲವರಾಜ ಎಂಬ ಹೆಸರಿನ ಗೋಪಾಲದೇವನು ಚಾಲುಕ್ಯ ಸಾಮ್ರಾಟ ೧ನೇ ವಿಕ್ರಮಾದಿತ್ಯನ (ಕ್ರಿ.ಶ.೬೩೩–೬೪೫) ಕೈಕೆಳಗೆ ಆಳುತ್ತಿದ್ದನೆಂದು ಡಾ। ಆರ್.ಎನ್. ಗುರುವ ಅವರು ಕಾರವಾರ ಜಿಲ್ಲೆಯ ಶಾಸನಗಳು ಎಂಬ ಕಿರುಹೊತ್ತಿಗೆಯಲ್ಲಿ ತಿಳಿಸಿದ್ದಾರೆ. 'ಕೈಕೇಯ ವಂಶೋದ್ಭವ'ನೆಂದು ಕರೆದಿರುವುದರಿಂದ ಆತನ ತಾಯಿ ಕೈಕೇಯ ವಂಶದವಳೆಂದು ತಿಳಿಯುತ್ತದೆ. ತಾಮ್ರಶಾಸನದ ಮುದ್ರೆಯ ಮೇಲೆ ಸಿಂಹದ ಚಿಹ್ನೆ ಇದೆ. ಶಾಸನದ ಲಿಪಿಯ ದೃಷ್ಟಿಯಿಂದ ಇದರ ಕಾಲವು ಚಲುಕ್ಯ ಒಂದನೆಯ ವಿಕ್ರಮಾದಿತ್ಯನ ಕಾಲಕ್ಕೆ ಸರಿಹೊಂದುತ್ತದೆ. ಹೀಗಾಗಿ ಇವನ ಕಾಲವನ್ನು ಕ್ರಿ.ಶ.ಸು.೬೨೦ ಕ್ಕೆ ನಿಗದಿಪಡಿಸಬಹುದಾಗಿದೆ.

ಹಲ್ಮಿಡಿ ಶಾಸನದಲ್ಲಿ ಬರುವ ಕೇಕೆಯ ಪಲ್ಲವರು ಇವರ ಸಂಬಂಧಿಗಳಾಗಿದ್ದಿರಬೇಕು. ಆ ಸಂಬಂಧಗಳು ಬಾದಾಮಿ ಚಲುಕ್ಯರ ಕಾಲಕ್ಕೂ ಮುಂದುವರಿದಿರಬೇಕು.

ಪಲ್ಲವ ಸಿಂಹವಿಷ್ಣುವಿಗೆ ತ್ರಿಲೋಚನ ಅಥವಾ ತ್ರಿನಯನ ಪಲ್ಲವನೆನ್ನುವ ಹೆಸರಿತ್ತು. ನಿಷ್ಠಾವಂತ ಶೈವನಾಗಿದ್ದ ಇವನು ಅನೇಕ ಶಿವನ ದೇವಸ್ಥಾನಗಳನ್ನು ಕಟ್ಟಿಸಿ ದಾನ, ಧರ್ಮಗಳನ್ನು ಮಾಡಿದ್ದನು. ಇವನು ತನ್ನದೇ ಆದ ರಾಜವಂಶವನ್ನು ಸ್ಥಾಪಿಸಿ ಕಂಚಿಯಲ್ಲಿ ಪ್ರಭಾವ ಪೂರ್ಣವಾಗಿ ಆಳುತ್ತಿದ್ದನು. ಮತ್ತು ಪಲ್ಲವರ ಕೀರ್ತಿಯನ್ನು ಕರ್ನಾಟಕ ಮತ್ತು ತೊಂಡೈಮಂಡಲವನ್ನು ಒಳಗೊಂಡಂತೆ ದಕ್ಷಿಣ ಭಾರತದ ಸಾರ್ವಭೌಮರಾಗಿ ಮೆರೆಯುವಂತೆ ಮಾಡಿದನು.

ತ್ರಿನಯನ ಅಥವಾ ಸಿಂಹವಿಷ್ಣುವಿನ ಕಾಲದಲ್ಲಿ ಪಲ್ಲವವಂಶ ಎರಡು ಶಾಖೆಗಳಾಗಿರುವುದು ಕಾಣಬರುತ್ತದೆ. ಇವನ ತಮ್ಮ ಭೀಮವರ್ಮ ತನ್ನದೇ ಆದ ಶಾಖೆಯನ್ನು ಆರಂಭಿಸುತ್ತಾನೆ. ಸಿಂಹವಿಷ್ಣುವಿನ ವಂಶಜರು ಪಲ್ಲವ ಮೂಲಶಾಖೆಯಲ್ಲಿ ಆಳುತ್ತಿದ್ದಾಗ ಭೀಮವರ್ಮನ ಶಾಖೆಯವರು ಮೂಲಶಾಖೆಗೆ ಅಧೀನರಾಗಿದ್ದರು ಎಂದು[16] ಎಸ್. ಪರಶಿವಮೂರ್ತಿ ಅಭಿಪ್ರಾಯ ಪಡುತ್ತಾರೆ.

ಸಿಂಹವಿಷ್ಣು ಅಥವಾ ತ್ರಿನೇತ್ರ ಪಲ್ಲವನನ್ನು ಪಲ್ಲವ ನೊಳಂಬ ಶಾಖೆಯ ಮೂಲಪುರುಷನೆಂದು ಹೇಮಾವತಿ ಶಾಸನದಲ್ಲಿ ಕರೆಯಲಾಗಿದೆ. ನೊಳಂಬ ಪಲ್ಲವರು ಪ್ರಸಿದ್ಧಿಗೆ ಬರುವ ವೇಳೆಗೆ ಪಲ್ಲವ ಮೂಲಶಾಖೆಯಲ್ಲಿ ಭೀಮವರ್ಮನ ವಂಶಜನಾದ ಹಿರಣ್ಯವರ್ಮನ ಮಗ ಪಲ್ಲವ ಮಲ್ಲ ಎರಡನೆಯ ನಂದಿವರ್ಮ ಮತ್ತು ಅವನ ವಂಶಜರು ಆಳ್ವಿಕೆ ಮಾಡುತ್ತಿದ್ದರು. ಅವರಿಂದ ಪ್ರತ್ಯೇಕ ವಂಶಜರೆಂದು ಹೇಳಿಕೊಳ್ಳಲು ಅವರ ಶಾಖೆಯ ಮೂಲಪುರುಷನಾದ ಸಿಂಹವಿಷ್ಣು ಅಥವಾ ತ್ರಿನೇತ್ರ ಪಲ್ಲವನನ್ನು ಹೆಸರಿಸಿದೆ.[17] ಪಲ್ಲವಮಲ್ಲ ಮೂರನೆಯ ನಂದಿವರ್ಮ ವೈಷ್ಣವಧರ್ಮಾವಲಂಬಿ ಎಂಬುದನ್ನು ಇಲ್ಲಿ ಗಮನಿಸಬಹುದು.

ಮುಮ್ಮಡಿ ಮಹೇಂದ್ರವರ್ಮನ ಮಗ ಒಂದನೇ ಪರಮೇಶ್ವರವರ್ಮ ಇವನ ಮಗ ಮೂರನೆಯ ನರಸಿಂಹವರ್ಮನ ನಂತರ ಪಟ್ಟಕ್ಕೆ ಬಂದನು. ಇವನನ್ನು ಒಂದನೆಯ ವಿಕ್ರಮಾದಿತ್ಯನ ಮಗ ವಿನಯಾದಿತ್ಯನು 'ವಿಲಿಂದೆ'ಯಲ್ಲಿ ಸೋಲಿಸಿ, ಕೊಂದನು. ಇವನ ಇಬ್ಬರು ಮೊಮ್ಮಕ್ಕಳನ್ನು ಗಂಗರಾಜ ಭೂವಿಕ್ರಮನು ಕೊಂಡೊಯ್ದು ಬೆಳಸಿದನು.[18] ಭೂವಿಕ್ರಮನಿಂದ ರಕ್ಷಿಸಲ್ಪಟ್ಟ ಮೂರನೆಯ ನರಸಿಂಹವರ್ಮನ ಮೊಮ್ಮಕ್ಕಳು ಪಲ್ಲವ ನೊಳಂಬ ಶಾಖೆಯನ್ನು ಪ್ರಾರಂಭಿಸಿ ಗಂಗರಿಗೆ ಅಧೀನರಾಗಿ ಕರ್ನಾಟಕದಲ್ಲಿ ಪ್ರಭಾವಶಾಲಿಗಳಾಗುತ್ತಾರೆಂದು ಅಭಿಪ್ರಾಯಪಡುತ್ತಾರೆ.[19]

ಅವನೀತನ ಕಾಲದಲ್ಲಿ ಪಲ್ಲವ ಸಿಂಹವಿಷ್ಣುವಿನ ತಾಯಿ ಕಟ್ಟಿಸಿದ ಜೈನಬಸದಿಯೊಂದಕ್ಕೆ ಅವಿನೀತ ದಾನ ನೀಡುತ್ತಾನೆ.[20] ಇದು ನಿಜವಾಗಿದ್ದಲ್ಲಿ ಈಕೆ ಗಂಗವಂಶದವಳೆ ಆಗಿದ್ದಿರಬೇಕು. ಸಿಂಹವಿಷ್ಣುವಿನ ತಾಯಿ ಅವನೀತನ ಸೋದರಿಯಾಗಿದ್ದಿರಬಹುದು. ಸಿಂಹವಿಷ್ಣು ಮತ್ತು ದುರ್ವಿನೀತರು ಸಮಕಾಲೀನರಾಗುತ್ತಾರೆ.[21] ಈ ಉಲ್ಲೇಖದಿಂದ ಗಂಗರ ಮತ್ತು ಪಲ್ಲವ ಸಂಬಂಧ ಮೊದಲಿನಿಂದಲೇ ಇತ್ತು ಎಂಬುದನ್ನು ಗಮನಿಸಬಹುದು.

ಪೃಥ್ವಿಕೊಂಗಣಿ ಮುತ್ತರಸನ ಅನುಮತಿ ಪಡೆದು ಪಲ್ಲವ ಎಳೆಅರಸ (ಯುವರಾಜ) ಕೊಕಂದಿ, ಮೈಲಕರೆ, ಮೇಲ್ಪಾಡು, ಜಾದಿಗಾಲು, ಕೊಲಿಗನ್‌ಕೆರೆಯಲ್ಲಿ ತೋಟವನ್ನು ಮತ್ತು ಗದ್ದೆಯನ್ನು ಬಹುಶಃ ಬಸದಿಗೆ ದಾನವಾಗಿ ನೀಡುತ್ತಾನೆ.[22] ಒಂದನೆಯ ಶಿವಮಾರನ ಕಾಲದಲ್ಲಿ ಜಯ ಮತ್ತು ವೃದ್ಧಿ ಎಂಬ ಪಲ್ಲವ ರಾಜರ ವಿಜ್ಞಾಪನೆಯಂತೆ ಶಕವರ್ಷ ೬೩೫ರಲ್ಲಿ ಅಂದರೆ ಕ್ರಿ.ಶ.೭೧೩ ರಲ್ಲಿ ತಲವನಪುರದಲ್ಲಿದ್ದಾಗ ಕೆರೆಗೋಡು ವಿಷಯಕ್ಕೆ ಸೇರಿದ ಕೆರೆಗೋಡಿನ ಉತ್ತರ ಪಾರ್ಶ್ವ ಕಿಬಿನಿ ನದಿಗೆ ಸೇತುವೆಯನ್ನು ಕಟ್ಟಿಸಿ ನದಿಯ ದಕ್ಷಿಣಕ್ಕೆ ಕೊಳುಗುಳು, ಬೆಳ್ಕರೆ ಸಹಿತವಾಗಿ ಪಲ್ಲವತಟಾಕವೆಂದು ಹೆಸರನ್ನು ನೀಡಿ ಆತ್ರೇಯಗೋತ್ರಜನಾದ ವಾಜಸನೇಯ ಚರಣ

ಮಹಾಸೇನಪುರದಲ್ಲಿ ವಾಸವಾಗಿರುವ ಭವಶರ್ಮನ ಮೊಮ್ಮಗನಾದ ಮಾರಶರ್ಮನ ಪುತ್ರನಾದ ಮಾಧವಶರ್ಮ ಮತ್ತು ಮುಂತಾದ ಅನೇಕ ಬ್ರಾಹ್ಮಣರಿಗೆ ದಾನವನ್ನಾಗಿ ನೀಡುತ್ತಾನೆ. [23]

ನೊಳಂಬ ಇತಿಹಾಸ ದರ್ಶನದಲ್ಲಿ ಪರಮೇಶ್ವರವರ್ಮನ ಮೊಮ್ಮಕ್ಕಳನ್ನು ಭೂವಿಕ್ರಮನು ಕರೆತಂದು ಬೆಳಸಿದನೆಂದು ಹೇಳಿದೆ. ಆದರೆ ಚಾಮರಾಜನಗರದ ಒಂದು ಶಾಸನದಲ್ಲಿ ಪಲ್ಲವ ಎಳೆ ಅರಸರು ಪೃಥ್ವಿಕೊಂಗಣಿ ಮುತ್ತರಸನ ಅನುಮತಿ ಪಡೆದು ಬಸದಿಗೆ ದಾನ ನೀಡಿರುವುದನ್ನು ತಿಳಿಸುತ್ತದೆ. ಕಾಲದ ಉಲ್ಲೇಖವಿರುವ ಮಂಡ್ಯ ಜಿಲ್ಲೆಯ ಮತ್ತೊಂದು ಶಾಸನದಲ್ಲಿ ಒಂದನೆಯ ಶಿವಮಾರನ ಕಾಲದಲ್ಲಿ ಜಯ ಮತ್ತು ವೃದ್ಧಿ ಎಂಬ ಪಲ್ಲವ ರಾಜರ ವಿಜ್ಞಾಪನೆಯಂತೆ ಆತ್ರೇಯ ಗೋತ್ರಜನಾದ ವಾಜಸನೇಯ ಚರಣ ಮಾಧವಶರ್ಮ ಮತ್ತು ಅನೇಕ ಬ್ರಾಹ್ಮಣರಿಗೆ ದಾನ ನೀಡಿದ ವಿಷಯ ಉಕ್ತವಾಗಿದೆ. ಭೂವಿಕ್ರಮನ ತಮ್ಮ ಒಂದನೆಯ ಶಿವಮಾರನ ಕಾಲವೆಂದು ಸ್ಪಷ್ಟವಾಗುತ್ತದೆ. ಈ ಜಯ ಮತ್ತು ವೃದ್ಧಿ ಪಲ್ಲವಾಧಿರಾಜರು ಪಲ್ಲವ ಇಮ್ಮಡಿ ನರಸಿಂಹವರ್ಮನ ಮೊಮ್ಮಕ್ಕಳೂ ಮತ್ತು ಮುಮ್ಮಡಿ ಮಹೇಂದ್ರವರ್ಮನ ಮಕ್ಕಳು. ಇವರನ್ನು ಮೂಲೆಗೆ ತಳ್ಳಿ ಮುಮ್ಮಡಿ ನರಸಿಂಹವರ್ಮನ ಇನ್ನೊಬ್ಬ ಮಗ ಇಮ್ಮಡಿ ಪರಮೇಶ್ವರವರ್ಮ ಪಟ್ಟಕ್ಕೆ ಬರುತ್ತಾನೆ. ಬಹುಶ: ಈ ಎಳ ಅರಸರು ಸಹಾಯವನ್ನು ಕೋರಿ ಗಂಗ ಸಾಮ್ರಾಜ್ಯಕ್ಕೆ ಬಂದಿದ್ದಿರಬೇಕು ಎಂದಿದ್ದಾರೆ. [24, 24A] ಮೇಲಿನ ಉಲ್ಲೇಖಗಳಿಂದ ಜಯ ಮತ್ತು ವೃದ್ಧಿ ಎಂಬ ಪಲ್ಲವ ಯುವರಾಜರು ಭೂವಿಕ್ರಮನ ಕಾಲದಲ್ಲಿ ಇರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಅವನ ತಮ್ಮ ಒಂದನೇ ಶಿವಮಾರನ ಕಾಲದಲ್ಲಿ ಅವರು ಇದ್ದರೆಂಬ ಸಂಗತಿಯನ್ನು ಶಾಸನಗಳು ದೃಢವಾಗಿ ಪುಷ್ಟೀಕರಿಸುತ್ತವೆ.

# ನೊಳಂಬ ಶಬ್ದದ ಮೂಲ

ಈಗಿನ ಹೇಮಾವತಿ ಅಥವಾ ಹಿಂದಿನ ಹೆಂಜೇರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯವಾಳಿದ ಪಲ್ಲವ ಶಾಖೆಯ ನೊಳಂಬರನ್ನು ನೊಳಂಬ ಪಲ್ಲವ ವಂಶವೆಂದು ಶಾಸನಗಳಲ್ಲಿ ಕರೆಯಲಾಗಿದೆ. ಇವರು ಕಂಚಿಯ ಮೂಲದ ಪಲ್ಲವರೆಂದು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಇವರು ತಮ್ಮನ್ನು ಪಲ್ಲವಾನ್ವಯ, ಪಲ್ಲವಕುಲ, ಪಲ್ಲವ ಕುಲತಿಲಕರೆಂದು ಕರೆದುಕೊಂಡಿದ್ದಾರೆ. ಆದರೆ ಪಲ್ಲವರ ಶಾಸನಗಳಲ್ಲಿ ಕಂಚಿಯನ್ನಾಳಿದ ಪಲ್ಲವರು ಎಲ್ಲಿಯೂ ನೊಳಂಬರೆಂದು ಕರೆದುಕೊಂಡಿಲ್ಲ. ಈ ಒಂದು ಶಾಖೆಯನ್ನು ಮಾತ್ರ ನೊಳಂಬರೆಂದು ಕರೆಯಲಾಗಿದೆ. ನೊಳಂಬ ಎಂಬ ಶಬ್ದವನ್ನು ಪ್ರಾಚೀನ ಶಾಸನಗಳಲ್ಲಿ ನೊೞಂಬ ಎಂದೂ, ಮುಂದಿನ ಶಾಸನಗಳಲ್ಲಿ ಮತ್ತು ಬೇರೆ ದಾಖಲೆಗಳಲ್ಲಿ ನೊಳಂಬ, ನೊಣಂಬ, ನೊಂಬ, ನೊಣಬ ಮುಂತಾಗಿ ಕರೆದಿದ್ದಾರೆ. ತಮಿಳು ಶಾಸನಗಳಲ್ಲಿ ನುಳುಂಬ ಎಂದು ಕರೆದಿದ್ದಾರೆ.

ಈ 'ನೊೞಂಬ' ಶಬ್ದದ ಬಗ್ಗೆ ಅರ್ಥೈಸಲು ವಿದ್ವಾಂಸರು ಈಗಾಗಲೇ ಪ್ರಯತ್ನಿಸಿರುತ್ತಾರೆ. ಆದರೆ ಈ ಪದದ ಅರ್ಥವನ್ನು ಅರ್ಥೈಸಲು ಬೇಕಾದ ಆಧಾರಗಳು ಸ್ಪಷ್ಟವಾಗಿ ದೊರೆತಿಲ್ಲ. ಕೊಲ್ಲಾಪುರದ ಕ್ರಿ.ಶ ೧೧೧೫ ರ ಶಿಲಾಹಾರದ ಶಾಸನದಲ್ಲಿ ನೊಳಂಬ ಎಂಬ ಹೆಸರಿನ ಮಾಂಡಲೀಕನ ಬಗ್ಗೆ ಹೇಳುವಾಗ ಅವನ ಮೂಲವನ್ನು ನಿಗುಂಬವಂಶದವನೆಂದು ಕರೆದಿದ್ದಾರೆ. ನಿಗುಂಬ ಎಂದರೆ ನಿಕುಂಬ ಎಂದು ಅರ್ಥೈಸಿದಲ್ಲಿ ಇವನು ಕುಂಭಕರ್ಣನ ಮಗನಾಗುತ್ತಾನೆ. ಶಾಸನವನ್ನು ಪರಿಶೋಧಿಸಿದ ವಿದ್ವಾಂಸರು ರಾಕ್ಷಸನಾದ ನಿಕುಂಬನಿಂದ ಇವರ ಮೂಲವನ್ನು ಹುಡುಕಲು ಪ್ರಯತ್ನಿಸಿದ್ದಾರೆ. ಹೀಗೆ ರಾಕ್ಷಸರ ಮೂಲದಿಂದ ತಮ್ಮ ವಂಶದ ಮೂಲವನ್ನು ಬಾಣರೂ ಗುರುತಿಸಿಕೊಂಡಿದ್ದಾರೆ. ಹಾಗೆಯೇ ಹದಿನೆಂಟನೆಯ ಶತಮಾನದ ಮಹಾನಾಡಿನ ಅರಸರ ಬಗ್ಗೆ ಹೇಳುವಾಗ ಅವರು ನೊಣಬಾಸುರನೆಂಬ ರಾಕ್ಷಸನನ್ನು ಕೊಂದುದಾಗಿಯೂ ಹೇಳಿ ಆ ಮೂಲಕ್ಕೆ ತಮ್ಮನ್ನು ತೆಗೆದುಕೊಂಡು ಹೋಗಿದ್ದಾರೆ. ಹೀಗೆ ಪುರಾಣವ್ಯಕ್ತಿಗಳಿಗೆ ತಮ್ಮ ವಂಶದ ಮೂಲವನ್ನು ಸಮೀಕರಿಸಿಕೊಂಡಿರುತ್ತಾರೆ.

ನೊಱಂಬ ಎಂಬ ಶಬ್ದವು ನೊಳಂಬರ ಪ್ರಾಚೀನ ಶಾಸನಗಳ ಆಧಾರದಿಂದ ಮಂಗಳನಿಗೆ ಇತ್ತು ಎಂಬುದನ್ನು ಗುರುತಿಸಬಹುದು. ಅವನಿಗೆ ನೊಳಂಬರಾಜನೆಂಬ ವಿಶೇಷಣವೂ ಇತ್ತು. ಅವನಿಂದ ಮುಂದಿನ ಎಲ್ಲ ಅರಸರೂ ತಮ್ಮ ಮೂಲದ ಬಗ್ಗೆ ಹೇಳಿಕೊಳ್ಳುವಾಗ ನೊಳಂಬಾಧಿರಾಜನೆಂದೇ ಗುರುತಿಸಿಕೊಂಡಿದ್ದಾರೆ.

'ನೊಱಂಬ' ಶಬ್ದವು ತಮಿಳಿನ 'ನುಳ್' ಎಂಬ ಶಬ್ದದ ಸಮಾನಾಂತರ ರೂಪ, ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟುವಿನಲ್ಲಿ ನೊಱಂಬೆ ಎಂದರೆ ಒಂದು ಊರಿನ ಹೆಸರು, ನೋಱಮ್ಮ= ಒಬ್ಬಾತನ ಹೆಸರು, ನೊಳಗ ಎಂದರೆ ದನಕರುಗಳಿಗೆ ದ್ರವಪದಾರ್ಥಗಳನ್ನು ಕುಡಿಸಲು ಬಳಸುವ ಸಾಧನ, ಗೊಟ್ಟೆ; ನೊಳಲ್ ಎಂದರೆ ನೀರಿನಲ್ಲಿ ವಾಸಿಸುವ ಒಂದು ಬಗೆಯ ಹುಳು. ನೊಱಂಬ, ನೊಣಂಬ, ನೊಳಂಬ ಎಂದರೆ ಒಂದು ರಾಜವಂಶದ ಹೆಸರು ಎಂದು ಹೇಳಿದೆ. ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿ ನೋಳ್ ಎಂದರೆ ಮುಂದೆ ನುಗ್ಗು, ಮುಂದುವರಿ, ಮುಂದಾಳಾಗು, ನಾಯಕತ್ವವಹಿಸು ಎಂದರ್ಥ. ನುಳ್ಗು ಎಂದರೆ ಪುಡಿಯಾಗು, ಚೂರಾಗು ಎಂದರ್ಥ. ಶಿವರಾಮ ಕಾರಂತರ ಅರ್ಥಕೋಶದಲ್ಲಿ ನೊಳ್ ಎಂದರೆ ಮುಂದುವರಿ ಎಂದರ್ಥ. ಕಿಟ್ಟೆಲ್‌ರ ನಿಘಂಟಿನಲ್ಲಿ ನೊಳ ಎಂದರೆ ನೊಣ ಎಂದು, ನೊಣಬ ಎಂದರೆ ಕುರುಬರ ಒಂದು ಪಂಗಡಕ್ಕೆ ಸೇರಿದ ಮನುಷ್ಯನೆಂದು ಅರ್ಥವಿದೆ. ತುಳು ನಿಘಂಟಿನಲ್ಲಿ ನೊಣ ಎಂದರೆ ಒಂದು ಕೀಟ(ನೊಣ) ಎಂಬ ಅರ್ಥದಲ್ಲಿಯೂ, ನೊಣಚ್ಚಿ ಎಂದರೆ ಹರಟೆಮಲ್ಲಿ, ಮಾತುಗಾತಿ ಎಂದು ಅರ್ಥವಿದೆ. ತಮಿಳು ನಿಘಂಟುವಿನಲ್ಲಿ ನೊಳ ಎಂದರೆ ತುಂಬ ಮಾಗಿದ ಹಣ್ಣೆಂದು, ನೊಳಂಬರ್ ಎಂದರೆ ಪಲ್ಲವರ ಒಂದು ಶಾಖೆಯೆಂದು, ನೊಳವು ಎಂದರೆ ಕೆಲಸ ಮಾಡದ ಮೈಗಳ್ಳತನವೆಂದೂ ಅರ್ಥವಿದೆ. ನೊಳ್ ಎಂದರೆ ಒಂದು ಅಳತೆಯ ಮಾಪನವೆಂದೂ ಅರ್ಥವಿದೆ. ಆದರೆ ಇವು ಯಾವುವು ಈ ಪದಕ್ಕಿರಬಹುದಾದ ಅರ್ಥವನ್ನು ನೀಡುತ್ತಿಲ್ಲ. ಯಾವುದೇ ಪದವು ಬಳಕೆಯಾದ ಮೇಲೆ ಅರ್ಥದ ಹುಡುಕಾಟವಾಗುತ್ತದೆ.

ಮೇಲಿನ ಪ್ರಯೋಗಗಳಲ್ಲಿನ ಯಾವುದೇ ಅರ್ಥ ಇಲ್ಲಿ ಸರಿ ಹೊಂದುತ್ತಿಲ್ಲ. ಶಾಸನಗಳಲ್ಲಿ ಪಲ್ಲವರ ಒಂದು ಪ್ರಾಚೀನ ಶಾಖೆಯನ್ನು ನಣಕ್ಕಸ ಪಲ್ಲವ ಎಂದು ಕರೆಯಲಾಗಿದೆ. ಇಲ್ಲಿ ನಣಕ್ಕಸ ಎಂಬುದನ್ನು ವ್ಯಕ್ತಿನಾಮವಾಗಿ ಸ್ವೀಕರಿಸಬೇಕೊ ಅಥವಾ ವಿಶೇಷಣವಾಗಿ ಸ್ವೀಕರಿಸಬೇಕೊ ತಿಳಿಯದು. ಮುಂದಿನ ಶಾಸನವೊಂದರಲ್ಲಿ ರಕ್ಕಸ ಪಲ್ಲವ ಎಂಬ ಪ್ರಯೋಗವೂ ಬಂದಿದೆ. ವಂಶದ ಮೂಲ ಪುರುಷರೆಂದು ತರ್ಕಿಸಿರುವ ಪಲ್ಲವ ಯುವರಾಜನಾದ ಜಯ ಮತ್ತು ವೃದ್ಧಿ ಅರಸರಿಗೆ ನುಳುಂಬ ಎಂದಾಗಲೀ, ನೊಱಂಬ ಎಂದಾಗಲೀ ವಿಶೇಷಣವಿರಲಿಲ್ಲ.

ದ.ರಾ. ಬೇಂದ್ರೆಯವರು ನೊಳಂಬ ಶಬ್ದದ ಮೂಲವನ್ನು ನಳ, ನಣ, ನೊಳ, ನೊಣ ಎಂಬ ರೂಪಗಳು ನಳ ಎಂಬ ಶಬ್ದದ ಮೂಲದಿಂದ ಬಂದಿವೆಯೆಂದು ಅಭಿಪ್ರಾಯಪಡುತ್ತಾರೆ. ಅಂತೆಯೇ ಈ ಅರ್ಥವನ್ನು ಮುಂದಿಟ್ಟುಕೊಂಡು ನಲಕ್ಕಸ, ನಳಕ್ಕಸ ಎಂಬುದು ಈ ಶಬ್ದದ ಮೂಲವೆಂದು ಅಭಿಪ್ರಾಯಪಟ್ಟಿದ್ದಾರೆ.[25]

ನೊಳಂಬ ಎಂಬ ಶಬ್ದವು ಒಂದೇ ಪದವೋ ಅಥವಾ ಸಂಯುಕ್ತಪದವೋ ಅರ್ಥವಾಗುತ್ತಿಲ್ಲ. ಇದನ್ನು ಬಿಡಿಸಿದಲ್ಲಿ ನೊಳ+ಅಂಬ ಅಥವಾ ನೊಳಂ+ಪ ಎಂದು ಬಿಡಿಸಬೇಕು. ತಮಿಳಿನಲ್ಲಿ ಇದೇ ರೀತಿ ಬಿಡಿಸಬೇಕಾಗುತ್ತದೆ. ಈ ಪದವು ತಮಿಳಿನಿಂದ ಕನ್ನಡಕ್ಕೆ ಬಂದಿದೆಯೋ ಅಥವಾ ಕನ್ನಡದಿಂದ ತಮಿಳಿಗೆ ಹೋಗಿದೆಯೋ ಸ್ಪಷ್ಟವಿಲ್ಲ.

ನೊಳ್ ಎಂಬ ಶಬ್ದಕ್ಕೆ ವಿದ್ವಾಂಸರು ಸೂಚಿಸಿರುವಂತೆ ನುಗ್ಗಿ ಹೋಗು, ದಾರಿ ಮಾಡಿಕೊಂಡು ಹೋಗು ಮುನ್ನುಗ್ಗು ಎಂಬ ಅರ್ಥ ನೀಡುತ್ತವೆ. ನೊಳಂಬರ ಆರಂಭದ ಆಡಳಿತ ಭಾಗವನ್ನು ನೊಳಂಬಳಿಗೆ ಎಂದು ಕರೆದಿದ್ದಾರೆ. ಕರ್ನಾಟಕವನ್ನು ಆಕ್ರಮಣ ಮಾಡಬೇಕಿದ್ದಲ್ಲಿ ನೊಳಂಬವಾಡಿ ಮೂಲಕ ಹೋಗಬೇಕಿತ್ತು. ಹೀಗಾಗಿ ನೊಳಂಬ ಎಂದರೆ ಗಡಿ ಪ್ರದೇಶದಲ್ಲಿ/ ನಾಡಿನಲ್ಲಿ ಮುನ್ನುಗ್ಗುವ ವ್ಯಕ್ತಿ ಎಂದು ಕೃಷ್ಣಮೂರ್ತಿಯವರು ಅರ್ಥೈಸಿದ್ದಾರೆ. ಹೀಗಾಗಿ ನೊಳ್ ಎಂಬ ಶಬ್ದದಿಂದ ಬಂದಿರಬಹುದು. ತಮಿಳಿನ ಶಬ್ದವಾದ ನುಚ್ಳೈ ಎಂಬುದಕ್ಕೆ ಮೇಲಿನ ಅರ್ಥವೇ (ಮುನ್ನುಗ್ಗು, ನುಗ್ಗಿಹೋಗು) ಇದ್ದು ಕನ್ನಡ ಶಬ್ದದ ಅರ್ಥಕ್ಕೆ ಸಮೀಪವಾಗಿದೆ.

ಇತ್ತೀಚೆಗೆ ಕರ್ನಾಟಕದ ನೊಣಬ ಎಂಬ ಶಬ್ದವು ನೊಳಂಬ ಶಬ್ದದ ಮೂಲವೆಂದು ಹೇಳಿ, ಪಲ್ಲವ, ನೊಳಂಬಕುಡಿಯರು ಒಂದೇ ಎಂದು ಹೇಳಿದ್ದಾರೆ. ಇವರ ಪ್ರಕಾರ ಪಲ್ಲವ ಎಂದರೆ ಚಿಗುರು ಎಂದರ್ಥ. ಹಾಗೆಯೇ ನಾಮಪದ, ಕುಡಿ ಎಂದರೂ ಚಿಗುರು ಎಂದರ್ಥ. ಇವೆರಡರ ಮಧ್ಯದ ಪದವೇ ನೊಣಬ ಅಥವಾ ನೊಳಂಬ > ನೊಟಂಬ. ನೊಳಂಬ ಎಂಬ ಶಬ್ದವನ್ನು ಚಿಗುರು ಎಂಬ ಅರ್ಥದಲ್ಲಿ ಯಾವ ನಿಘಂಟುವಿನಲ್ಲಿಯೂ ಬಳಸಿಲ್ಲ. ನುಣುಪು ಅಥವಾ ನುಣುಂಪು ಎಂಬ ಶಬ್ದದಿಂದ ಈ ಶಬ್ದವು ಬಂದಿದ್ದಲ್ಲಿ ನಯವಾದದ್ದು, ಒರಟಿಲ್ಲದ ಎಂಬ ಅರ್ಥವನ್ನು ನೀಡಬಹುದು. ಇದೇ ಅರ್ಥವನ್ನು ಮುಂದುವರಿಸಿದಲ್ಲಿ ಚಿಗುರು ಎಂಬ ಅರ್ಥ ಪಡೆಯಲು ಸಾಧ್ಯ. ಈ ಅರ್ಥವನ್ನು ಇಟ್ಟುಕೊಂಡಲ್ಲಿ ಪಲ್ಲವ ಶಬ್ದಕ್ಕೆ ಸಮಾನಾಂತರವಾಗಿ ಬಳಸಿದ ಶಬ್ದವಾಗಿರುತ್ತದೆ. ಆಗ ಇದರ ಅರ್ಥ ಚಿಗುರು ಎಂದೇ ಅರ್ಥವಾಗುತ್ತದೆ. ಗಂಗ-೬೦೦೦ಕ್ಕೆ ಮೊರಸುನಾಡು ಎಂಬ ಬೇರೆ ಹೆಸರಿರುವಂತೆ, ಪಲ್ಲವರ ಈ ಶಾಖೆಗೆ ನೊಳಂಬ ಎಂಬ ಹೆಸರಿರುವುದು ತಿಳಿಯುತ್ತದೆ.

ಒಟ್ಟಿನಲ್ಲಿ ನೊಳಂಬ ಎಂಬ ಶಬ್ದಕ್ಕೆ ಚಿಗುರು (ಚಿಗುರು = ಪಲ್ಲವ) ಎಂಬ ಅರ್ಥವನ್ನು ನೀಡಬಹುದಾಗಿದೆ.

++

## ಟಿಪ್ಪಣಿಗಳು

1. ನೊಳಂಬ ಇತಿಹಾಸ ದರ್ಶನ ಪು.೧೧
2. ಬನವಾಸಿ ಕದಂಬರು p.xv
3. Mysore and Coorg from the Inscriptions p.53
4. ಅದೇ ಪು.೫೩.
5. ಕ.ವಿ.ಶಾ.ಸಂ.೧.ಹಡಗ ೫೬.
6. ಎ.ಇಂ.೧.ಪು.೨.
7. M.A.R. 1920
8. M.A.R. 1936.
9. M.A.R. 1929. p.50.
10. ಮಾನವಿಕ ಕರ್ನಾಟಕ; Studies in Indian History.
11. J.B.B.R.A.S. IX.
12. EC.11. Dg.161.
13. ಬನವಾಸಿ ಕದಂಬರು. ಪು.೩೮.
14. M.A.R.1925; ಬನವಾಸಿ ಕದಂಬರು ಪು.೬೧.
15. EI.Vol.21.p.173 to 179.
16. ನೊಳಂಬ ಇತಿಹಾಸ ದರ್ಶನ ಪು.೧೪
17. ಅದೇ. ಪು.೧೫
18. ಅದೇ. ಪು.೧೬
19. ಅದೇ. ಪು.೧೬
20. MAR.1938.p.86
21. ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ-೧೯೯೦.
    (ಡಾ। ದೇವರ ಕೊಂಡಾರೆಡ್ಡಿಯವರ ಅಪ್ರಕಟಿತ ಪಿಎಚ್.ಡಿ ನಿಬಂಧ)
22. EC.4 (R) Ch.347
23. EC.VII. Md.35.
24. Inscription of Pallavas Plate 7; ಟಿ.ವಿ. ಮಹಾಲಿಂಗಂ

24A ತ.ಗಂ.ದೇ.ಗಳು ಒಂದು ಅಧ್ಯಯನ – ದೇವರಕೊಂಡಾರೆಡ್ಡಿ ಅವರ
ಅಪ್ರಕಟಿತ ಪಿ ಹೆಚ್.ಡಿ. ನಿಬಂಧ ಪು.೩೩

25. ನೊಳಂಬ ಇತಿಹಾಸ ದರ್ಶನ ಪು.೬

## ಅಧ್ಯಾಯ – III

# ಆರಂಭದ ಅರಸರು

(ಕ್ರಿ.ಶ. ೭೫೦ ರಿಂದ ೧೦೦೦ ದ ವರಗೆ)

ಕರ್ನಾಟಕದಲ್ಲಿ ಮಹಾಮಾಂಡಲೀಕರಾಗಿ ಆಳ್ವಿಕೆ ಮಾಡಿದ ನೊಳಂಬ ಅರಸರ ವಂಶವೃಕ್ಷವನ್ನು ಹೇಮಾವತಿಯ ಕ್ರಿ.ಶ. ೯೪೨ ರ ಶಾಸನದಲ್ಲಿ ಮೊದಲ ಅರಸನಾದ ಮಂಗಳ ನೊಂಬಾದಿರಾಜ (ನೊಳಂಬಾದಿರಾಜ)ನಿಂದ ಪ್ರಾರಂಭವಾಗಿ ಇರಿವನೊಳಂಬ ಒಂದನೆಯ ದಿಲೀಪನವರೆಗೆ ನೀಡಲಾಗಿದೆ.[1] ಅದರ ಪ್ರಕಾರ –



ಈ ಶಾಸನದ ಮುಂದುವರಿದ ವಂಶಾವಳಿಯ ಚಿತ್ತೂರು ಜಿಲ್ಲೆಯ ಪುಂಗನೂರು ತಾಲೂಕಿನ ನೆಲಪಲ್ಲಿ[2] ಶಾಸನದಲ್ಲಿ ಬಂದಿದೆ. ಇರಿವನೊಳಂಬ ಒಂದನೆಯ ದಿಲೀಪನಿಂದ ಪ್ರಾರಂಭವಾಗಿ ಇರಿವನೊಳಂಬ ಘಟೆಯಂಕಕಾರನ ವರಗೆ ಈ ವಂಶಾವಳಿ ಮುಂದುವರೆದಿದೆ.




ಈ ನೊಳಂಬ ವಂಶದ ಮುಂದುವರಿದ ಭಾಗವು ಮೊರಿಗೇರಿ ಶಾಸನದಲ್ಲಿ[3] ಉಕ್ತವಾಗಿದೆ.




ಚಿತ್ರದುರ್ಗ ಜಿಲ್ಲೆ ಮಹದೇವಪುರ ಈಶ್ವರ ದೇವಾಲಯದ ಗೋಡೆಯಲ್ಲಿ ಶ್ರೀ ಹುಲ್ಲೂರ ಶ್ರೀನಿವಾಸಜೋಯಿಸರಿಗೆ ದೊರೆತ ನೊಳಂಬ ಪಲ್ಲವರ ಪ್ರಭುರಾಮುಮಂಗಲದ ಒಂದು ತಾಮ್ರಶಾಸನದಲ್ಲಿ[4] ನೊಳಂಬರ ವಂಶವೃಕ್ಷದಲ್ಲಿ ಉಕ್ತವಾಗಿರುವ ಹೆಸರುಗಳು ಬೇರೆಯಾಗಿದ್ದು, ಮುತ್ತರೇಯನಿಂದ ಆರಂಭವಾಗಿ ಒಂದನೆಯ ಪೊಳಲ್ಚೋರನವರೆಗೆ ನೀಡಲಾಗಿದೆ.




ಹೇಮಾವತಿಯ ಸ್ತಂಭಶಾಸನದಲ್ಲಿ ಹೇಳಿರುವ ಸಿಂಹಪೋತರಸನ ತಂದೆಯನ್ನೂ ನೊಳಂಬಾಧಿರಾಜ ಮಂಗಳನೆಂದು ಹೆಸರಿಸುತ್ತದೆ. ಈ ತಾಮ್ರಶಾಸನದಲ್ಲಿ ಶ್ರೀಮುಖರಾಮನೆಂದು, ಇವನ ತಂದೆಯನ್ನು ಪೇರ್ಮುಖರಾಮನೆಂದು, ಇವನ ತಂದೆಯನ್ನು ಶ್ರೀಮತ್ ಮುತ್ತರೇಯನೆಂದು ಹೇಳಿದೆ. ಈ ತಾಮ್ರಶಾಸನದ ಪ್ರಕಾರ ಇವನೇ ನೊಳಂಬ ಪಲ್ಲವರಲ್ಲಿ ಹಿರಿಯನು. ಶ್ರೀಮತ್ ಮುತ್ತರೇಯನೇ ಮೊದಲು ಬರುವ ಅರಸು. ಇವನ ಮಗ ಪೇರ್ಮುಖರಾಮ, ಇವನ ಮಗ ಶ್ರೀಮುಖರಾಮ, ಇವನ ಮಗ ಸಿಂಗಪೋತ, ಸಿಂಗಪೋತರಸನ ಹಿಂದಿನ ಮೂರು ತಲೆಮಾರಿನವರ ಹೆಸರು ಇನ್ನಿತರ ಶಾಸನಗಳಲ್ಲಿ ಕಂಡುಬಾರದ ಹೆಸರುಗಳು.

ಹೇಮಾವತಿಯ ಶಾಸನದ ಪ್ರಕಾರ ಈಶ್ವರವಂಶದಲ್ಲಿ ಹುಟ್ಟಿದ ತ್ರಿನಯನನೇ ನೊಳಂಬ ವಂಶದ ಮೊದಲ ದೊರೆ. ತ್ರಿನಯನನ್ನು ಕ್ರಿ.ಶ. ೫ನೆಯ ಶತಮಾನದಲ್ಲಿ ಬಾದಾಮಿಯನ್ನು ಆಳುತ್ತಿದ್ದ ಚಾಲುಕ್ಯ ದೊರೆ ವಿಜಯಾದಿತ್ಯನಿಂದ ಸೋತ ರಾಜನ ಹೆಸರಿನ ಜೊತೆ ಇವನನ್ನು ಗುರುತಿಸಬಹುದು.[5] ತ್ರಿನಯನನನ್ನು ಐತಿಹಾಸಿಕವಾಗಿ ಗುರುತಿಸುವುದಕ್ಕಿಂತ ಹೆಚ್ಚಾಗಿ ಪೌರಾಣಿಕ ವ್ಯಕ್ತಿಯನ್ನಾಗಿ ಗುರುತಿಸಬಹುದು. ಮಹಾಲಿಂಗಂ ಅವರು 'ತ್ರಿನಯನ' ಎಂದರೆ ಮೂರು ಕಣ್ಣುಳ್ಳವನು, ಮುಕುಂಟಿ (ಮುಕ್ಕಣ್ಣ) ಎಂದು ಕರೆಯುಬಹುದು. ಅಲ್ಲದೇ ಈ ರೀತಿಯ ಪೌರಾಣಿಕ ವ್ಯಕ್ತಿಯನ್ನಾಗಿ ಗುರುತಿಸಿರುವುದು ತೆಲುಗು ಶಾಸನಗಳಲ್ಲಿ[6] ಕಂಡುಬರುತ್ತದೆ ಎಂದಿದ್ದಾರೆ. ಆದರೆ ವಿಜಯಾದಿತ್ಯನ ಕಾಲವು ಕ್ರಿ.ಶ.ಸು. ೮ನೆಯ ಶತಮಾನವಾಗಿದ್ದು, ಈ ಕಾಲಕ್ಕೆ ನೊಳಂಬರು ದಕ್ಷಿಣದಲ್ಲಿ ಗಂಗರ ಮಾಂಡಳೀಕರಾಗಿ ರಾಜ್ಯಭಾರವನ್ನು ಆರಂಭಿಸಿದ್ದರು. ವಿಜಯಾದಿತ್ಯನು ಈ ನೊಳಂಬ ಪಲ್ಲವರ

ಮೂಲಪುರುಷನನ್ನು ತನ್ನ ಮಾಂಡಳೀಕನನ್ನಾಗಿ ಮಾಡಿಕೊಂಡಿರಬಹುದು. ಹೀಗಾಗಿ ತ್ರಿನಯನನು ವಿಜಯಾದಿತ್ಯನ ಸಮಕಾಲೀನನೆಂಬುದರಲ್ಲಿ ಸಂಶಯವಿಲ್ಲ.

ಹೇಮಾವತಿಯ ಶಾಸನದ ಪ್ರಕಾರ ತ್ರಿನಯನ ವಂಶದಲ್ಲಿ ಹುಟ್ಟಿದವನು ಮಂಗಳ ನೊಂಬಾಧಿರಾಜ. ಇವನು ಕಿರಾತರನ್ನು ಜಯಿಸಿ ಕರ್ನಾಟಕರಿಂದ ಪ್ರಶಂಸೆ ಗಳಿಸಿದನೆಂದು ಹೇಳಿದೆ. ಈ ಕರ್ನಾಟರು ಬಾದಾಮಿ ಚಳುಕ್ಯರೆಂದು ಇದರಿಂದ ಮಂಗಳ ನೊಳಂಬಾಧಿರಾಜನು ಬಹುಶಃ ಚಲುಕ್ಯರ ಕೈಕೆಳಗೆ ಅವರ ಸಾಮಂತನಾಗಿ ಅಥವಾ ಅಧೀನನಾಗಿ ಆಳ್ವಿಕೆ ನಡೆಸುತ್ತಿದ್ದಿರಬಹುದು ಎಂದು ಕೃಷ್ಣಮೂರ್ತಿಯವರು ಅಭಿಪ್ರಾಯಪಡುತ್ತಾರೆ. ಇವನ ಶಾಸನಗಳು ದೊರೆತಿಲ್ಲ. ಹೀಗಾಗಿ ಇವನ ವಿಷಯ ಅಸ್ಪಷ್ಟವಾಗಿದೆ. ಪ್ರಭುರಾಮ ಮಂಗಲದ ತಾಮ್ರಶಾಸನದಲ್ಲಿ ಬಂದಿರುವ ಶ್ರೀಮುಖರಾಮ ಇವನೇ ಎಂದು ಸಮೀಕರಿಸಬಹುದಾಗಿದೆ.

ಹೇಮಾವತಿ ಶಾಸನದ ಪ್ರಕಾರ ಈಶ್ವರವಂಶದಲ್ಲಿ ಹುಟ್ಟಿದ ತ್ರಿನಯನ ಎಂಬುವವನೇ ನೊಳಂಬ ವಂಶದ ಮೊದಲ ದೊರೆ. ಆದರೆ ಪ್ರಭುರಾಮ ಮಂಗಲದ ಶಾಸನದಲ್ಲಿ ಈ ಹೆಸರು ಬಂದಿರದೆ ಇವನಿಗಿಂತ ಹಿಂದೆ ಇದ್ದ ರಾಜರ ಹೆಸರುಗಳು ಬದಲಾಗಿವೆ. ಮುತ್ತರೇಯ ಎಂಬುವನಿಂದ ಈ ವಂಶವು ಪ್ರಾರಂಭವಾಗಿದೆ. ಇವನ ಮಗ ಪೇರ್ಮುಖರಾಮ (ಅಥವಾ ಪೋರ್ಮುಖರಾಮ). ಈ ಹೆಸರು ಪಾರಂಪರಿಕ ಶಿಲಾಶಾಸನಗಳಲ್ಲಿ ಬಂದಿರದೆ ಈ ಹೆಸರಿನ ಬದಲಾಗಿ ತ್ರಿನಯನನ ಹೆಸರು ಬಂದಿದೆ. ಪೇರ್ಮುಖರಾಮನ ಮಗ ಶ್ರೀಮುಖರಾಮನ ಹೆಸರಿಗೆ ಬದಲಾಗಿ ಶಾಸನಗಳಲ್ಲಿ ಮಂಗಳ ನೊಳಂಬಾಧಿರಾಜನ ಹೆಸರಿದೆ. ಹಾಗೆಯೇ ತಾಮ್ರಶಾಸನದಲ್ಲಿ ಶ್ರೀಮುಖರಾಮನ ಮಗ ಸಿಂಗಪೋತ್ತಿಯರಸು ಎಂದಿದೆ. ಶಿಲಾಶಾಸನಗಳಲ್ಲಿಯೂ ಈ ಸಿಂಗಪೋತ್ತಿಯರಸನ ಉಲ್ಲೇಖವಿದೆ. ಇಲ್ಲಿಂದ ಮುಂದೆ ಒಂದನೇ ಪೊಳಲ್ಚೋರನವರೆಗೆ ವಂಶಾವಳಿಯನ್ನು ತಾಮ್ರಶಾಸನವು ನೀಡಿದ್ದು, ಶಿಲಾಶಾಸನಗಳಲ್ಲಿಯೂ ಇದೇ ಕ್ರಮದಲ್ಲಿ ಹೆಸರುಗಳು ಬಂದಿವೆ.

ಪ್ರಭುರಾಮ ಮಂಗಲದ ತಾಮ್ರಶಾಸನವನ್ನು ಎಂ. ಎಸ್. ಕೃಷ್ಣಮೂರ್ತಿಯವರು ಅದರ ಲಿಪಿ ಸ್ವರೂಪ ಮತ್ತು ವಂಶಾವಳಿಯನ್ನು ಗಮನಿಸದೆ ಇದು ಕೂಟಶಾಸನವೆಂದಿದ್ದಾರೆ.[7] ಇದರ ಲಿಪಿ ಸ್ವರೂಪ ಕ್ರಿ.ಶ. ೯ ರಿಂದ ೧೩ನೆಯ ಶತಮಾನದವರೆಗೆ ಹಬ್ಬಿದೆಯೆಂದಿದ್ದಾರೆ. ಆದರೆ ಇವರ ವಾದದಲ್ಲಿನ ಅಂಶಗಳು ಸಮರ್ಥನೀಯವಲ್ಲ. ಜಿ. ವರದರಾಜರಾಯರು ಈ ಶಾಸನದ ಲಿಪಿಗಳನ್ನು ಪ್ರಾಚೀನ ಲಿಪಿಗಳೆಂದು ಗುರುತಿಸಿದ್ದಾರೆ. ತಾಮ್ರಶಾಸನದ ವಂಶಾವಳಿಯು ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಕಂಬದೂರಿನ ಶಾಸನದಲ್ಲಿ ಉಕ್ತವಾಗಿದೆ. ಅದರಂತೆ ಪೇರ್ಮುಖರಾಮನ ಸ್ಥಳದಲ್ಲಿ ವೀರನೊಳಂಬಾಧಿರಾಜನ ಹೆಸರೂ, ಮಂಗಳರಾಜನ ಹೆಸರಿನ ಜಾಗದಲ್ಲಿ ಶ್ರೀಮುಖರಾಮನ ಹೆಸರೂ ಬಂದಿದೆ. ಹೀಗಾಗಿ ಪೇರ್ಮುಖರಾಮನಿಗೆ ವೀರನೊಳಂಬಾಧಿರಾಜನೆಂಬ

ಹೆಸರಿತ್ತು ಎಂಬುದು ಸ್ಪಷ್ಟವಾಗುತ್ತದೆ. ಸಿಂಗಪೋತ ಅಥವಾ ಸಿಂಹಪೋತನನ್ನು ಎಲ್ಲಾ ಶಾಸನಗಳು ಹೆಸರಿಸುತ್ತವೆ. ಆದ್ದರಿಂದ ಪ್ರಭುರಾಮಮಂಗಲದ ಶಾಸನವು ವಿಷಯದ ದೃಷ್ಟಿಯಿಂದ ನೈಜ ಶಾಸನವಾಗಿದ್ದು, ಅದರಲ್ಲಿನ ವಂಶಾವಳಿ ನಂಬಿಕೆಗೆ ಅರ್ಹವಾಗಿದೆ. ಪ್ರಭುರಾಮಮಂಗಲದ ಶಾಸನವನ್ನು ಶೋಧಿಸಿ ಪ್ರಕಟಿಸಿದ ಹುಲ್ಲೂರು ಶ್ರೀನಿವಾಸಜೋಯಿಸರ ಅಭಿಪ್ರಾಯವೂ ಇದೇ ಆಗಿದೆ. ಅಲ್ಲದೆ ವಂಶಾವಳಿಯನ್ನು ಹೇಳುವ ಶಾಸನಗಳು ನೊಳಂಬ ವಂಶವು ಸ್ಥಾಪನೆಯಾದ ಎಷ್ಟೋ ಕಾಲದ ನಂತರ ರಚಿತವಾದವು. ಹೀಗಾಗಿ ಪೂರ್ವದ ಅರಸರ ಹೆಸರುಗಳು ಮರೆತು ಆ ಹೆಸರಿನ ಸ್ಥಾನದಲ್ಲಿ ಬೇರೆ ಹೆಸರುಗಳು ಅಥವಾ ಅಡ್ಡಹೆಸರುಗಳು ಉಕ್ತವಾಗಿರಬೇಕು.

ನೊಳಂಬರ ಮೂಲಪುರುಷನನ್ನು ಗುರುತಿಸುವುದು ಕಷ್ಟ. ಅವನ ಬಗೆಗಿನ ಶಾಸನಗಳು ದೊರೆಯುತ್ತಿಲ್ಲ. ಈ ಮುತ್ತರೇಯನು ಕರ್ನಾಟಕದಲ್ಲಿದ್ದ ಪಲ್ಲವರ ಶಾಖೆಯವನೋ ಅಥವಾ ಕಂಚಿಯ ಪಲ್ಲವರ ಶಾಖೆಯವನೋ ಸ್ಪಷ್ಟವಾಗಿಲ್ಲ. ಮುತ್ತರೇಯನ ಕಾಲವನ್ನು ವಂಶಾವಳಿಯ ಆಧಾರದಿಂದ ಒಂದನೆಯ ಶಿವಮಾರನ ಕಾಲಕ್ಕೆ ಹಾಕಬಹುದಾಗಿದೆ. ಅಂದರೆ ಕ್ರಿ.ಶ.ಸು. ೬೮೦ಕ್ಕೆ ಹಾಕಬಹುದಾಗಿದೆ. ಈ ಮುತ್ತರೇಯನಿಗೆ ಸಂಬಂಧಿಸಿದ ಶಾಸನಗಳು ದೊರೆತಿಲ್ಲ. ಕಾಲದ ಉಲ್ಲೇಖವಿಲ್ಲದ ಶಾಸನವೊಂದರಲ್ಲಿ ಒಂದನೆಯ ಶಿವಮಾರನ ಕಾಲದಲ್ಲಿ ಪಲ್ಲವ ಎಳ ಅರಸರು (ಯುವರಾಜರು) ಶಿವಮಾರನ ಅನುಮತಿ ಪಡೆದು ಕೆಲ್ಲಿಪೂಸೂರ ಬಸದಿಗೆ ದಾನ ನೀಡಿದ ಉಲ್ಲೇಖವಿದೆ.[8] ಇದೇ ಅರಸನ ಕ್ರಿ.ಶ. ೭೧೩ರ ಶಾಸನದಲ್ಲಿ ಜಯ ಮತ್ತು ವೃದ್ಧಿಯೆಂಬ ಪಲ್ಲವ ರಾಜಕುಮಾರರು ಶಿವಮಾರನ ಅನುಮತಿ ಪಡೆದು ಬ್ರಾಹ್ಮಣರಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಈ ಯುವರಾಜರು ಕಂಚಿಯ ಪಲ್ಲವ ಅರಸ ಮುಮ್ಮಡಿ ಮಹೇಂದ್ರವರ್ಮನ ಮಕ್ಕಳು. ಇವರನ್ನು ಪಕ್ಕಕ್ಕೆ ತಳ್ಳಿ ಮುಮ್ಮಡಿ ಮಹೇಂದ್ರವರ್ಮನ ತಮ್ಮ ಪರಮೇಶ್ವರವರ್ಮ ಪಟ್ಟಕ್ಕೆ ಬರುತ್ತಾನೆ. ಈ ಹಂತದಲ್ಲಿ ಈ ಯುವರಾಜರು ಗಂಗ ಸಾಮ್ರಾಜ್ಯಕ್ಕೆ ಸಹಾಯ ಕೋರಿ ಬಂದಿರಬೇಕೆಂದು ಟಿ.ವಿ. ಮಹಾಲಿಂಗಂ ಅವರು ಅಭಿಪ್ರಾಯಪಡುತ್ತಾರೆ.[9] ಈ ಪಲ್ಲವ ಯುವರಾಜರನ್ನು ಶಿವಮಾರ ತನ್ನ ರಾಜ್ಯದಲ್ಲಿ ಸ್ಥಾನ ನೀಡಿ ನೆಲೆಗೊಳಿಸಿದಲ್ಲಿ ಇವರೇ ನೊಳಂಬರ ಮೂಲ ಅರಸರಾಗಿರಬಹುದೆಂದು ತರ್ಕಿಸಬಹುದು. ಏಕೆಂದರೆ ಇವರ ಕಾಲ ಮತ್ತು ನೊಳಂಬ ಅರಸರ ಆರಂಭದ ಕಾಲ ಒಂದೇ ಆಗಿರುತ್ತದೆ. ಆದರೆ ಈ ಹೆಸರುಗಳು ನೊಳಂಬರ ಯಾವುದೇ ವಂಶಾವಳಿಯಲ್ಲಿ ದೊರೆಯುವುದಿಲ್ಲವಾದ್ದರಿಂದ ಇವರೇ ಈ ವಂಶದ ಮೂಲಪುರುಷರೆಂದು ಹೇಳುವುದು ಕಷ್ಟ. ಈ ಬಗ್ಗೆ ಮುಂದೆ ಚರ್ಚಿಸಲಾಗುವುದು.

ಇವಲ್ಲದೆ ಶಾಸನದಲ್ಲಿ ಇನ್ನೂ ಕೆಲವು ನೊಳಂಬ ರಾಜರ ಹೆಸರು ಕಂಡುಬಂದಿವೆ. ಅವು ಪರಮೇಶ್ವರ ಪಲ್ಲವಾಧಿರಾಜ, ಪಲ್ಲವ ಮಲ್ಲ, ನೊಳಂಬಾಧಿರಾಜ ನೊಳಿಪಯ್ಯ, ಅಂಕಯ್ಯ, ಮೆಯ್ದನೊಲಿಪ, ಇರುಳಚೋರ, ಎರಡನೆಯ ಅಯ್ಯಪದೇವ ಮತ್ತು ಗನ್ನರಸನ ಹೆಸರುಗಳು.

ಪರಮೇಶ್ವರ ಪಲ್ಲವಾಧಿರಾಜನು, ಸಿಂಹಪೋತನ ಮಗನೆಂದು ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲೂಕು, ಚಿಕ್ಕಮದಿರೆ ತಾಲೂಕಿನ ಎರಡು ಶಾಸನಗಳಲ್ಲಿ ಉಕ್ತವಾಗಿದೆ.[10] ಹೇಮಾವತಿಯ ಶಾಸನದಲ್ಲಿ ಸಿಂಹಪೋತನ ಮಗ ಚಾರುಪೊನ್ನೇರನೆಂದು ಮತ್ತು ಅವನ ಮಗ ಒಂದನೆಯ ಮಹೇಂದ್ರನೆಂದು ತಿಳಿದು ಬಂದಿದೆ. ತಮಿಳುನಾಡಿನ ಧರ್ಮಪುರಿಯ ಎರಡು ಶಾಸನಗಳಲ್ಲಿ[11] ಮತ್ತು ತುಮಕೂರು ಜಿಲ್ಲೆಯ ಎರಡು ಶಾಸನಗಳಲ್ಲಿ[12] ಪರಮೇಶ್ವರ ಪಲ್ಲವಾಧಿರಾಜನ ಮಗ ನೊಳಂಬಾಧಿರಾಜ (ಪೊಳಲ್ಚೋರ) ಅವನ ಮಗ ಒಂದನೆಯ ಮಹೇಂದ್ರನೆಂದು ಹೇಳಿದೆ. ಆದುದರಿಂದ ಪರಮೇಶ್ವರ ಪಲ್ಲವಾಧಿರಾಜನು ಸಿಂಹಪೋತನ ಮಗನಾದ ಚಾರುಪೊನ್ನೇರನೆಂದು ಗುರುತಿಸಬಹುದು ಮತ್ತು ಇದರಿಂದ ಪರಮೇಶ್ವರ ಪಲ್ಲವಾಧಿರಾಜನು ಪೊಳಲ್ಚೋರನ ತಂದೆ ಮತ್ತು ಒಂದನೆಯ ಮಹೇಂದ್ರನ ತಾತನೆಂದು ಸ್ಪಷ್ಟವಾಗುತ್ತದೆ.

ಪರಮೇಶ್ವರ ಪಲ್ಲವಾಧಿರಾಜ ಅಥವಾ ಚಾರುಪೊನ್ನೇರನ ಮಗ ಪಲ್ಲವಮಲ್ಲನೆಂಬುದು ನಿರ್ವಿವಾದ. ಹೇಮಾವತಿಯ ಶಾಸನದಲ್ಲಿ ಉಕ್ತವಾಗಿರುವಂತೆ ಒಂದನೆಯ ಪೊಳಲ್ಚೋರನು ಚಾರುಪೊನ್ನೇರನ ಮಗನೇ ಆದ ಪಲ್ಲವಮಲ್ಲ. ಇದರಿಂದ ಪಲ್ಲವಮಲ್ಲನು, ಪರಮೇಶ್ವರ ಪಲ್ಲವಾಧಿರಾಜನ ಮಗ ಒಂದನೇ ಪೊಳಲ್ಚೋರನೆಂದು ಮೇಲಿನ ಹೇಮಾವತಿ ಮತ್ತು ಇತರೆ ಶಾಸನಗಳಿಂದ ಗುರುತಿಸಬಹುದು.

ಮಧುಗಿರಿ ತಾಲೂಕಿನ[13] ಶಾಸನದಲ್ಲಿ ಉಕ್ತವಾಗಿರುವ ನೊಳಂಬಾಧಿರಾಜ ನೊಲಿಪಯ್ಯನನ್ನು ಒಂದನೆಯ ಅಯ್ಯಪದೇವನೆಂದು ಗುರುತಿಸಬಹುದು.

ಹೇಮಾವತಿಯ ಶಾಸನದಲ್ಲಿ ದಾಖಲಾಗದಿರುವ ದೊರೆ ಅಂಕಯ್ಯನು, ನೊಳಂಬಾಧಿರಾಜ ನೊಳಿಪಯ್ಯ ಅಥವಾ ಒಂದನೆಯ ಅಯ್ಯಪದೇವನ ಮಗ[14] ಇರಬೇಕು. ಒಂದನೆಯ ಅಯ್ಯಪದೇವನಿಗೆ ಅಂಕಯ್ಯನಲ್ಲದೆ ಮೆಯಿದನೊಲಿಪ[15] ನೆಂಬ ಇನ್ನೊಬ್ಬ ಮಗನಿದ್ದನೆಂಬುದು ತಿಳಿಯುತ್ತದೆ. ಧರ್ಮಪುರಿಯ ಶಾಸನದಿಂದ[16] ಇರುಳಚೋರನು ಆಳ್ವಿಕೆ ಮಾಡುತ್ತಿದ್ದುದು ತಿಳಿಯುತ್ತದೆ. ಇವನು ಚಾಲುಕ್ಯ ರಾಜಕುಮಾರಿ ಅತ್ತಿಯಬ್ಬರಸಿ ಮತ್ತು ಬೀರನೊಳಂಬ ಅಣ್ಣಿಗ ದಂಪತಿಗಳ ಮಗ.

ಶಕ ೮೮೮ ಅಂದರೆ ಕ್ರಿ.ಶ.೯೬೬-೬೭ ರ ಹೇಮಾವತಿಯ ಇನ್ನೊಂದು ಶಾಸನದಲ್ಲಿ[17] ಇಮ್ಮಡಿ ಅಯ್ಯಪದೇವವನ್ನು ಇರಿವ ನೊಳಂಬಾಧಿರಾಜ (ದಿಲೀಪ)ನ ಮಗನೆಂದು ಹೆಸರಿಸಿದೆ. ಇವನು ಒಂದನೆಯ ಇರಿವ ನೊಳಂಬ ಮತ್ತು ರಾಣಿ ಪಿರಿಯಬ್ಬರಸಿಯ ಮಗನೆಂದಿದೆ. ಇಮ್ಮಡಿ ಅಯ್ಯಪದೇವನಿಗೆ ಗನ್ನರಸನೆಂಬ ಮಗನಿದ್ದುದು[18] ಹೊಸಕೋಟೆ ಶಾಸನದಿಂದ ತಿಳಿಯುತ್ತದೆ.

ನೊಳಂಬರು ಬಾದಾಮಿ ಚಲುಕ್ಯರ ಸಾಮಂತರಾಗಿದ್ದ ಗಂಗರ ಕಾಲದಲ್ಲಿ ಆಳ್ವಿಕೆ ಪ್ರಾರಂಭಿಸಿದರು. ಆದರೆ ಇವರ ರಾಜ್ಯ ಸ್ಥಾಪನೆಯಾದದ್ದು ಒಂದನೆಯ ಶಿವಮಾರನ ಕಾಲದಲ್ಲಿ. ಅಂದರೆ ಕ್ರಿ.ಶ.ಸು.೭೦೦ರಲ್ಲಿ ಗಂಗರ ಮಾಂಡಲೀಕರಾಗಿ ಜಯ ಮತ್ತು ವೃದ್ಧಿ ಎಂಬ ಪಲ್ಲವ ರಾಜರು ಆರಂಭಿಸಿದರು. ಅವರೇ ಈ ವಂಶದ ಮೂಲಪುರುಷರಾಗಿರಬಹುದು. ಇದನ್ನು ಒಪ್ಪುವುದಾದರೆ ಇವರ ಕಾಲದ ಹೊಂದಾಣಿಕೆಯಾಗುತ್ತದೆ. ನೊಳಂಬ ವಂಶದ ಆರಂಭದ ಅರಸರ ಬಗ್ಗೆ ಹೆಚ್ಚಿನ ವಿವರಗಳು ತಿಳಿಯುವುದಿಲ್ಲವೆಂದು ಹೇಳಿದೆಯಷ್ಟೆ.

ಪ್ರಭುರಾಮ ಮಂಗಳದ ತಾಮ್ರಶಾಸನದಲ್ಲಿ ಉಕ್ತನಾಗಿರುವ ಮುತ್ತರೇಯನ ಬಗ್ಗೆ ಯಾವ ವಿವರಗಳೂ ದೊರೆಯುವುದಿಲ್ಲ. ಇದು ಇವನ ಹೆಸರಾಗಿತ್ತೆಂಬುದಕ್ಕೆ ಆಧಾರವಾಗಿ ಸಿಂಗಪೋತನ ಶಾಸನವೊಂದರಲ್ಲಿ ಅವನು ಸಿಂಗಮುತ್ತರಸ ಎಂಬ ಹೆಸರನ್ನು ಹೊಂದಿದ್ದುದು ತಿಳಿಯುತ್ತದೆ. ಅಂದರೆ ಇವನ ತಂದೆ ಅಥವಾ ತಾತ ತಮ್ಮ ವಂಶದ ಹಿರಿಯನ ಹೆಸರನ್ನು ಸಿಂಗಪೋತನಿಗೆ ಇಟ್ಟಂತೆ ತಿಳಿಯುತ್ತದೆ. ಹೀಗಾಗಿ ಮುತ್ತರಸ ಎಂಬುವನ ಆಳ್ವಿಕೆಯ ಅಥವಾ ಮತ್ತಾವುದೆ ಪುರಾವೆಗಳು ದೊರೆಕಿಲ್ಲವಾದರೂ ಈತನು ಚಾರಿತ್ರಿಕ ವ್ಯಕ್ತಿ ಎಂಬುವುದರಲ್ಲಿ ಸಂದೇಹವಿಲ್ಲ. ಪಲ್ಲವ ಯುವರಾಜರಲ್ಲಿ ಒಬ್ಬನ ಹೆಸರು 'ವೃದ್ಧಿ'(ವೃದ್ಧ)ಯೆಂದು ಈ ವೃದ್ಧಿಯ ಕನ್ನಡ ರೂಪ 'ಮುತ್ತ' ಎಂದಾಗಿರಬಹುದು. ಇದು ನಿಜವಾದಲ್ಲಿ ಜಯ ಮತ್ತು ವೃದ್ಧಿಯರು ಈ ಶಾಖೆಯ ಮೂಲಪುರುಷರೆಂದು ಗುರುತಿಸಬಹುದು.

ಎರಡನೆಯ ಅರಸ ಪೇರ್ಮುಖರಾಮ, ಇವನ ಇನ್ನೊಂದು ಹೆಸರು ತ್ರಿನಯನ ಪಲ್ಲವ. ಮುಕ್ಕಣ್ಣ ಎಂಬುದಕ್ಕೆ ಸಮಾನಾಂತರವಾಗಿ ಈ ಹೆಸರನ್ನು ಇಟ್ಟುಕೊಂಡಿರಬಹುದು. ಪೇರ್ಮುಖ ಎಂಬುದಕ್ಕೆ ವಿರೂಪ ಎಂಬ ಅರ್ಥವಿದ್ದಲ್ಲಿ ಈ ಪೇರ್ಮುಖರಾಮನೇ ತ್ರಿನಯನನಾಗುತ್ತಾನೆ. ಕಂಬದೂರಿನ ಶಾಸನದಲ್ಲಿ ಇವನನ್ನು ವೀರನೊಳಂಬಾಧಿರಾಜನೆಂದು ಕರೆದಿದೆ. ಇವನ ಕಾಲದ ಯಾವುದೇ ಶಾಸನಗಳು ದೊರೆತಿಲ್ಲ. ಹೀಗಾಗಿ ಇವನ ಬಗ್ಗೆಯೂ ಹೆಚ್ಚಿನ ವಿವರಗಳು ತಿಳಿಯುವುದಿಲ್ಲ. ಇವನ ಮಗ ಶ್ರೀಮುಖರಾಮ.

ಶ್ರೀಮುಖರಾಮನು ಶಿಲಾಶಾಸನಗಳಲ್ಲಿ ಉಕ್ತನಾಗಿರುವ ನೊಳಂಬಾಧಿರಾಜ ಮಂಗಳನೇ ಆಗಿರುತ್ತಾನೆ. ಕಂಬದೂರಿನ ಶಾಸನದಲ್ಲಿ ಇವನನ್ನು ಶ್ರೀಮುಖರಾಮನೆಂದೇ ಕರೆಯಲಾಗಿದೆ. ಈ ಮಂಗಳರಾಜ ಅಥವಾ ಶ್ರೀಮುಖರಾಮನ ಕಾಲವನ್ನು ವಿದ್ವಾಂಸರು ಕ್ರಿ.ಶ.ಸು. ೭೫೦-೭೭೫ ಎಂದು ತೀರ್ಮಾನಿಸಿರುತ್ತಾರೆ. ಇದನ್ನು ಒಪ್ಪುವುದಾದರೆ ಇವನು ಗಂಗರಾಜ ಶ್ರೀಪುರುಷನ ಸಮಕಾಲೀನನಾಗುತ್ತಾನೆ. ಗಂಗರು ರಾಷ್ಟ್ರಕೂಟರ ಮೇಲೆ ನಡೆಸಿದ ಯುದ್ಧದಲ್ಲಿ ಈತ ಸಕ್ರಿಯವಾಗಿ ಭಾಗವಹಿಸಿರಬೇಕು. ಬಳ್ಳಾರಿ ಜಿಲ್ಲೆಯ ಶಾಸನವೊಂದರಲ್ಲಿ ಮಂಗಪರಸನ ಉಲ್ಲೇಖ ಬಂದಿದ್ದು[19]

ಈ ಮಂಗಪರಸ ಇಷ್ಟೊಂದು ಪ್ರಾಚೀನನಾಗಿರಲು ಸಾಧ್ಯವಿಲ್ಲ. ಲಿಪಿಯ ಆಧಾರದ ಮೇಲೆ ಈ ಮಂಗಪರಸನನ್ನು ಒಂಬತ್ತನೆಯ ಶತಮಾನದ ಆರಂಭಕ್ಕೆ ಹಾಕಬಹುದು. ಹೀಗಾಗಿ ಈ ಮಂಗಪರಸನಿಗೂ ಮಂಗಳನಿಗೂ ಕಾಲದ ಅಂತರವಿದ್ದು ಇವನು ಮಂಗಳನೊಳಂಬಾಧಿ ರಾಜನಾಗಿರಲಾರ. ಹೇಮಾವತಿ ಶಾಸನದಲ್ಲಿ ಮಂಗಳನೊಳಂಬಾಧಿರಾಜನು ತ್ರಿನಯನ ವಂಶದಲ್ಲಿ ಹುಟ್ಟಿದವನೆಂದೂ, ಕಿರಾತರನ್ನು ಜಯಿಸಿ ಕರ್ನಾಟರಿಂದ ಹೊಗಳಿಸಿಕೊಂಡನೆಂದು ಹೇಳಿದೆ. ಈ ಕರ್ನಾಟರು ಬಾದಾಮಿ ಚಲುಕ್ಯರಾಗಿರಬಹುದೆಂಬುದರಲ್ಲಿ ಸಂದೇಹವಿಲ್ಲ.[20]

ಮಂಗಳನೊಳಂಬಾಧಿ ರಾಜನ ಮಗ ಸಿಂಹಪೋತನು ಪೆರ್ಮಾನಡಿ ಎಂಬ ಹೆಸರಿನ ಅರಸನ ಸಾಮಂತನಾಗಿ ಪಟ್ಟಕ್ಕೆ ಬಂದ. ಚಿತ್ರದುರ್ಗ ಜಿಲ್ಲೆಯ ದೊಡ್ಡ ಉಳ್ಳರ್ತಿಯ ಒಂದು ಶಾಸನದಲ್ಲಿ ಸಿಂಗಪೋತ ಕಲಿ ನೊಳಂಬಾಧಿರಾಜನು ಪೆರ್ಮಾನಡಿಗಳ್ ನವರಾಜ್ಯಂಗೆಯೆ ದುಗ್ಗಮಾರೆಜ್ ಅಪ್ಪೊಮ್ಮಿಗೆ ಎಟ್ಟಿರೆ ಮುನಿದು ಪ್ರಾಪ್ತ ... ಸಿಂಗಪೋತ್ತರ ಕಲಿನೊಜಿಮ್ಬದಿ ಅರಸರಾ ಪೆರ್ಮ್ಮನಡಿಗಳ್ಬೆ ಸಸೆಬೆಸಬೆತ್ತು ಪೊತ್ತನ್ದು ಎಂದಿದೆ?[21] ಅದೇ ಗ್ರಾಮದ ಇನ್ನೊಂದು ಶಾಸನದಲ್ಲಿ ಸಿಂಗಪೋತ್ತನನ್ನು ಪೃಥ್ವೀವಲ್ಲಭನೆಂದು ಕರೆದಿದೆ. ಅಲ್ಲಿ ನಡೆದ ಯುದ್ಧವೊಂದರಲ್ಲಿ ವೀರನೊಬ್ಬ ಸಾವನ್ನಪ್ಪಿದಂತೆ ತಿಳಿಸುತ್ತದೆ.[22] ಈ ಶಾಸನದಲ್ಲಿ ಉಕ್ತನಾದ ಪೆರ್ಮಾನಡಿಯ ಶಾಸನೋಕ್ತ ದುಗ್ಗಮಾರನು ತಲಕಾಡಿನ ಗಂಗರ ದೊರೆಯಾದ ಎರಡನೆಯ ಶ್ರೀಪುರುಷನ ಮಗ. ಇವನು ತನ್ನ ತಂದೆಯಾದ ಶ್ರೀಪುರುಷನ ಕೈಕೆಳಗೆ ಗಂಗ-೬೦೦೦ ಮತ್ತು ತರೀಕೆರೆ ತಾಲೂಕಿನ ಅಸಂದಿನಾಡನ್ನು[23] ಆಳುತ್ತಿದ್ದ. ಬಿ.ಎಲ್. ರೈಸರು ದೊಡ್ಡಉಳ್ಳರ್ತಿ ಶಾಸನದಲ್ಲಿ ಹೇಳಿರುವ ಪೆರ್ಮಾನಡಿಯು ಶ್ರೀಪುರುಷನ ಮತ್ತೊಬ್ಬ ಮಗ ಎರಡನೆಯ ಶಿವಮಾರನೆಂದು ಹೇಳಿದ್ದು, ಶ್ರೀಪುರುಷನ ನಂತರ ಸಿಂಹಾಸನಕ್ಕಾಗಿ ನಡೆದ ಸ್ಪರ್ಧೆಯಲ್ಲಿ ಸಿಂಗಪೋತ ಕಲಿನೊಳಂಬಾಧಿ ಅರಸ ಶಿವಮಾರನ ಪಕ್ಷ ವಹಿಸಿ ದುಗ್ಗಮಾರನ ವಿರುದ್ಧ ದಂಡೆತ್ತಿ ಹೋಗಿರಬೇಕೆಂದು ಹೇಳುತ್ತಾರೆ.

ಆದರೆ ಪೆರ್ಮಾನಡಿ ಯಾರು, ಸಿಂಗಪೋತನ ಮಾಂಡಲೇಶ್ವರ ಯಾರೆಂದು ಇದುವರೆಗೆ ತೃಪ್ತಿಕರವಾದ ವರದಿ ಬಂದಿರುವುದಿಲ್ಲ. ೧೧ನೆಯ ಶತಮಾನದಲ್ಲಿ ರಚಿತವಾದ ಹುಂಚದ [24] ಶಾಸನದ ಪ್ರಕಾರ ಶ್ರೀಪುರುಷನ ಇನ್ನೊಬ್ಬ ಮಗನೇ ಶಿವಮಾರನೆಂದು ತಿಳಿದುಬರುತ್ತದೆ. ಈ ಶಾಸನದ ಪ್ರಕಾರ ಶ್ರೀಪುರುಷನು ಕಂಚಿಯ ಕಾಡುವೆಟ್ಟಿಯನ್ನು ಸೋಲಿಸಿದ ನಂತರ ಪಲ್ಲವರಿಂದ 'ಪೆರ್ಮಾನಡಿ' ಎಂಬ ಬಿರುದನ್ನು ಗಂಗರು ಧರಿಸಿದನೆಂದು ಹೇಳಿದೆ.[25] ಮಹಾಲಿಂಗಂ ಅವರು ದೊಡ್ಡಉಳ್ಳರ್ತಿ ಶಾಸನದಲ್ಲಿ ಉಕ್ತವಾಗಿರುವ ಪೆರ್ಮಾನಡಿಯು ಗಂಗ ದೊರೆ ಎರಡನೆಯ ಶಿವಮಾರನಲ್ಲ. ಅವನು ನವರಾಜ್ಯವನ್ನು ಆಳ್ವಿಕೆ ಮಾಡುತ್ತಿದ್ದ ಪಲ್ಲವರಾಜ ನಂದಿವರ್ಮ, ಎರಡನೆಯ ಪಲ್ಲವಮಲ್ಲ ಮತ್ತು ಅವನ ಸಾಮಂತನಾಗಿ ಆಳುತ್ತಿದ್ದವನು ಸಿಂಹಪೋತ ಎಂಬ ಅಭಿಪ್ರಾಯಪಟ್ಟಿದ್ದಾರೆ.

ಹೆಮ್ಮಿಗೆ ಶಾಸನದಲ್ಲಿ[26] ಪೆರ್ಮಾನಡಿಗಳ್ ಎಂಬ ಬಿರುದನ್ನು ಧರಿಸಿ ಗಂಗ ದೊರೆ ಕೊಂಗುಣಿ ಮಹಾರಾಜ ಪೆರ್ಮಾನಡಿ ಎಂಬ ಹೆಸರಿನಲ್ಲಿ ಗಂಗರಾಜನೊಬ್ಬ ಆಳ್ವಿಕೆ ಮಾಡುತ್ತಿದ್ದುದನ್ನು ಸೂಚಿಸಿದೆ. ತಲಕಾಡಿನ ಶಾಸನವೊಂದರಲ್ಲಿ[27] ನೊಳಂಬರಾಜನ ಉಲ್ಲೇಖ ಬಂದಿದ್ದು, ಅದರಲ್ಲಿ ಉಕ್ತವಾಗಿರುವ ಶಿವ ಎಂಬುವವನು ಶಿವಮಾರನಿರಬೇಕು. ಆದ್ದರಿಂದ ಶ್ರೀಪುರುಷ ಮತ್ತು ಅವನ ಮಗ ಶಿವಮಾರನಿಗೆ ಪೆರ್ಮಾನಡಿ ಎಂಬ ವಿಶೇಷಣವಿದ್ದದ್ದು ತಿಳಿಯುತ್ತದೆ. ಮಹಾಲಿಂಗಂ ಅವರ ಈ ಪೆರ್ಮಾನಡಿ ಬಿರುದನ್ನು ಹೊಂದಿದ್ದ ಇನ್ನೊಬ್ಬ ಗಂಗ ರಾಜನಾಗಿರಬೇಕೆಂಬ ಸೂಚನೆಯನ್ನು ಇಲ್ಲಿ ಒಪ್ಪಬೇಕಿಲ್ಲ.

ದೊಡ್ಡಉಳ್ಳರ್ತಿ ಶಾಸನದಲ್ಲಿ ನವರಾಜ್ಯಂಗೆಯ್ಯೆ ಎಂಬ ಪದ ಪಲ್ಲವ ನಂದಿವರ್ಮನಿಗೆ ಅನ್ವಯಿಸುತ್ತದೆ ಎಂದರೆ; ಡಾ॥ ಫ್ಲೀಟ್ ಅವರು ಐಹೊಳೆಯ ಅಪೂರ್ಣ ಶಾಸನದ ಆಧಾರದ ಮೇಲೆ ಪೆರ್ಮಾನಡಿಗಳ್ ನವರಾಜ್ಯಂಗೆಯ್ಯೆ ಎಂದಿರುವುದನ್ನು 'ಅಮೋಘವರ್ಷಂ ನವರಾಜ್ಯಂಗೆಯ್ಯುತ್ತಿರೆ' ಎಂದು ಅರ್ಥೈಸಿರುತ್ತಾರೆ.[28]

ಪೆರ್ಮಾನಡಿಯೆಂಬ ವಿಶೇಷಣವು ಗಂಗರಲ್ಲಿಯೇ ಹೆಚ್ಚು ಬಳಕೆಯಾಗಿದೆ. ಬಾಣ ವಿದ್ಯಾಧರನ ಪತ್ನಿ ವಾಣಮಹಾದೇವಿಯನ್ನು ಹೆಸರಿಸುವಾಗ ಪೃಥ್ವೀಪತಿಯನ್ನು ಶಿವಮಾರ ಪೆರುಮಾನಡಿಗಳ ಮಗನೆಂದು ಕರೆದಿದೆ.[29] ನವರಾಜ್ಯವೆಂದಿರುವುದನ್ನು ಹೊಸದಾಗಿ ಪಡೆದ ರಾಜ್ಯ ಎಂದು ಅರ್ಥೈಸುವುದು ಸೂಕ್ತ. ಏಕೆಂದರೆ ಶಿವಮಾರನು ರಾಜ್ಯವನ್ನು ನಡುವೆ ಕೆಲವು ಕಾಲ ಕಳೆದುಕೊಂಡು ನಂತರ ಪಡೆದಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ನೊಳಂಬರ ಆರಂಭದ ಶಾಸನಗಳು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲೂಕಿನಲ್ಲಿ ದೊರೆಯುತ್ತವೆ. ಇವುಗಳಲ್ಲಿ ನೊಳಂಬಾಧಿರಾಜ ಎಂದು ಸ್ಪಷ್ಟವಾಗಿ ಕರೆಯಲಾಗಿದೆ. ಸಿಂಹಪೋತನ ಮುಂದಿನ ರಾಜನನ್ನು ಶಾಸನಗಳು ಹೆಸರಿಸುತ್ತವೆಯೇ ಹೊರತು ಅವರ ಹಿಂದಿನ ಶಾಸನಗಳು ದೊರೆತಿಲ್ಲ. ಹೀಗಾಗಿ ಸಿಂಹಪೋತನ ಕಾಲಕ್ಕೆ ನೊಳಂಬರ ಆಡಳಿತವು ಸ್ಥಿರತೆಯ ಹಂತ ತಲುಪಿತ್ತು. ಈ ಕಾಲವು ಬಹು ಸಂಕೀರ್ಣ ಕಾಲವೂ ಆಗಿತ್ತು. ಗಂಗರು ರಾಷ್ಟ್ರಕೂಟರೊಡನೆ ನಡೆಯುತ್ತಿದ್ದ ಯುದ್ಧಗಳಲ್ಲಿ ನಿರತರಾಗಿದ್ದರು. ಇಂತಹ ಸನ್ನಿವೇಶವನ್ನು ಬಳಸಿಕೊಂಡ ನೊಳಂಬರು ತಮ್ಮ ಶಕ್ತಿಯನ್ನು ವೃದ್ಧಿಸಿಕೊಂಡರು.

ಶಿವಮಾರನ ಸೋದರ ದುಗ್ಗಮಾರನು ಶಿವಮಾರನ ವಿರುದ್ಧ ನಿಂತಾಗ ಅವನನ್ನು ಶಿವಮಾರನ ಪರವಾಗಿ ಸಿಂಹಪೋತನು ಎದುರಿಸಿದಂತೆ ಕೆಲವು ಶಾಸನಗಳು ಸೂಚಿಸುತ್ತವೆ.[30]

**ಸಿಂಹಪೋತ ಕಲಿನೊಳಂಬಾಧಿರಾಜ ಕೊಲ್ಲಿಯರಸ**

ಕೋಲಾರ ಜಿಲ್ಲೆ ಮದಿಗೆರೆ ಶಾಸನವೊಂದರಲ್ಲಿ ಪಲ್ಲವ ದೊರೆಯೊಬ್ಬ ಕೊಂಗು ಶಿವಮಹಾರಾಜಾಧಿರಾಜ ಶಿವಮಾರಬಟಾರನ ಕೈಕೆಳಗೆ ಆಳುತ್ತಿದ್ದಂತೆ ತಿಳಿಸುತ್ತದೆ.[31] ಈ ಪಲ್ಲವ ರಾಜನನ್ನು ಗುರುತಿಸುವುದು ಕಷ್ಟವೆಂದು ಕೃಷ್ಣಮೂರ್ತಿಯವರು ತಿಳಿಸುತ್ತಾರೆ. ಆದರೆ ಈ ಪಲ್ಲವನು ನೊಳಂಬ ವಂಶದವನಾಗಿದ್ದು ಇಮ್ಮಡಿ ಶಿವಮಾರನ ಸಮಕಾಲೀನನಾದ ಸಿಂಗಪೋತನೇ ಆಗಿರುತ್ತಾನೆ.

ಸಿಂಹಪೋತನಿಗೆ 'ಕಲಿನೊಳಂಬ' ಎಂಬ ವಿಶೇಷಣವಿತ್ತು. ಒಂದನೆಯ ಮಾರಸಿಂಹನ ಗಂಜಾಂ ಶಾಸನದಲ್ಲಿ ನೊಳಂಬರಾಜ, ಕಲಿ ನೊಳಂಬಾಧಿರಾಜ ಕೊಲ್ಲಿಯರಸ ಮತ್ತು ಅವನ ಮಕ್ಕಳಾದ ನಿಜರಾಮ ಮತ್ತು ನಯಧೀರರನ್ನು ಹೆಸರಿಸಿದೆ. ಈ ಕಲಿ ನೊಳಂಬಾಧಿರಾಜನೇ ಸಿಂಹಪೋತ ಕಲಿನೊಳಂಬಾಧಿರಾಜ. ಹೊಸಕೋಟೆ ತಾಲೂಕು ದೊಡ್ಡಹುಲ್ಲೂರಿನ ಶಾಸನದಲ್ಲಿ ಈ ಕಲಿನೊಳಂಬನ ಹೆಸರು ಉಕ್ತವಾಗಿದೆ.[32] ಈತನು ಗಂಗ ರಾಜ ಶಿವಮಾರನೊಡನೆ ಕೂಡಿಕೊಂಡು ರಾಷ್ಟ್ರಕೂಟ ಗೋವಿಂದನ ಮೇಲೆ ಯುದ್ಧ ಮಾಡಿದ. ಇವನನ್ನು ಇಲ್ಲಿ ಕಲಿಯೆಂದು ಕರೆಯಲಾಗಿದೆ. ಈ ಕಲಿಯನ್ನು ಸಿಂಗಪೋತನೆಂದು ಗುರುತಿಸಬಹುದು.

ಆದರೆ ಮಾವಳಿ ಶಾಸನದ ಪ್ರಕಾರ ಮೂರನೆಯ ಗೋವಿಂದನು ಅಳುಪರ ಮೇಲೆ ಯುದ್ಧ ಮಾಡುವಾಗ ಈ ಕೊಲ್ಲಿ ಪಲ್ಲವ ನೊಳಂಬನು ಅವನ ಸಹಾಯಕ್ಕೆ ಹೋಗಿರುತ್ತಾನೆ. ಹೀಗಾಗಿ ಆರಂಭದಲ್ಲಿ ರಾಷ್ಟ್ರಕೂಟರ ಆಳ್ವಿಕೆಯನ್ನು ಗಂಗರೊಡನೆ ಸೇರಿ ಧಿಕ್ಕರಿಸಿದರೂ ಮುಂದೆ ಮುಮ್ಮಡಿ ಗೋವಿಂದನ ಕಾಲಕ್ಕೆ ರಾಜೀಸೂತ್ರಕ್ಕೆ ಬಂದು ಅವರ ಮಾಂಡಲೀಕತ್ವವನ್ನು ಒಪ್ಪಿಕೊಂಡಿರಬಹುದು. ಈ ಕೊಲ್ಲಿ ಪಲ್ಲವ ನೊಳಂಬನನ್ನು ಸಿಂಹಪೋತನೆಂದು ಗುರುತಿಸಬಹುದಾಗಿದೆ. ಹೀಗಾಗಿ ಈತನು ಕ್ರಿ.ಶ.ಸು.೮೦೦ ರ ವೇಳೆಗೆ ಪ್ರಭಾವಶಾಲಿ ರಾಜನಾಗಿದ್ದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಚಿಕ್ಕಮಧುರೆಯ ಶಾಸನದಲ್ಲಿ ಸಿಂಘಮುತ್ತರನು (ಸಿಂಗಪೋತ) ತನ್ನ ಮಗಳನ್ನು ಗಂಗ ಅರಸರಿಗೆ ಕೊಟ್ಟಿದ್ದಂತೆ ಹೇಳಿದೆ. ಶಾಸನೋಕ್ತ ಮಾದವೆಯನ್ನು ಪೆರ್ಮಾನಡಿಯ ಪತ್ನಿಯ ತಾಯಿ ಎಂದು ಹೇಳಿಕೊಂಡಿರುವುದರಿಂದ ಈ ಮಾದವೆಯು ಸಿಂಗಪೋತನ ಪತ್ನಿಯಾಗಿದ್ದು ಒಂದನೆಯ ರಾಚಮಲ್ಲ ಪೆರ್ಮಾನಡಿಯ ಪತ್ನಿಯನ್ನು ನೊಳಮ್ಬ ಮಹಾದೇವಿ ಎಂದು ಕರೆಯಲಾಗಿದೆ. ಇದೇ ಶಾಸನ ಮುಂದುವರಿದು ಜಗತುಂಗ ಪ್ರಭೂತವರ್ಷನು ಆಳುತ್ತಿದ್ದಾಗ ಅವನ ಸಾಮಂತನಾಗಿ ಸಿಂಗ[ಪೋ]ತ್ತರಸನ ಮಗನಾದ ಭುವನವಿಖ್ಯಾತ ಪಂಚಮಹಾಶಬ್ದ ಶ್ರೀ ಪ್ರಿಥುವೀವಲ್ಲಭ ಪರಮೇಶ್ವರ ಪಲ್ಲವಾದಿಯರಸನನ್ನು ಹೆಸರಿಸಿದೆ. ಇವನು ನೊಳಂಬಳಿಗೆ-೧೦೦೦, ನೀರ್ಗುಂದ-೩೦೦ ನ್ನು

ಆಳುತ್ತಿದ್ದಂತೆ ಹೇಳಿದೆ. ಇವನ ಪತ್ನಿ ಗವಣಬ್ಬೆ. ಈ ನೊಳಂಬ ರಾಜನನ್ನು ಚಾರುಪೊನ್ನೇರನೆಂದು ಗುರುತಿಸಬಹುದು.[33] ಈ ಶಾಸನದಲ್ಲಿ ಕೆಲವು ವಿಷಯಗಳು ಸ್ಪಷ್ಟವಾಗಿವೆ.

(೧) ಸಿಂಗಪೋತ್ತ ಅರಸನು ಗಂಗರೊಂದಿಗೆ ಸಂಬಂಧವನ್ನು ಬೆಳೆಸಿದ್ದು.

(೨) ಸಿಂಗಪೋತ್ತನ ಮಗನ ಕಾಲಕ್ಕೆ ಅಂದರೆ ಚಾರುಪೊನ್ನೇರನ ಕಾಲಕ್ಕೆ ಗಂಗರ ಮತ್ತು ರಾಷ್ಟ್ರಕೂಟರ ನಡುವಿನ ತಿಕ್ಕಾಟ ಕಡಿಮೆಯಾಗಿತ್ತು.

(೩) ರಾಷ್ಟ್ರಕೂಟರ ಸಾರ್ವಭೌಮತೆಯನ್ನು ನೊಳಂಬರು ಒಪ್ಪಿಕೊಂಡಿದ್ದರು.

(೪) ಕರ್ನಾಟಕದ ಪೂರ್ವ ಭಾಗ ಮತ್ತು ಆಂಧ್ರದ ಪಶ್ಚಿಮ ಭಾಗಗಳಿಗೆ ಇವರು ಅಧಿಪತಿಗಳಾಗಿದ್ದರು.

## ಚಾರುಪೊನ್ನೇರ

ಸಿಂಹಪೋತನ ನಂತರ ಅವನ ಮಗ ಚಾರುಪೊನ್ನೇರನು ಅವನ ಉತ್ತರಾಧಿಕಾರಿಯಾದ. ಚಿಕ್ಕಮಧುರೆಯ ಶಾಸನವು ಪರಮೇಶ್ವರ ಪಲ್ಲವಾಧಿರಾಜನನ್ನು ಉಲ್ಲೇಖಿಸುತ್ತದೆ. [34] ಪರಮೇಶ್ವರ ಪಲ್ಲವಾಧಿರಾಜನು ನೊಳಂಬಳಿಗೆ-೧೦೦೦ ಮತ್ತು ನೀರ್ಗುಂದ ನಾಡು-೩೦೦ ಪ್ರದೇಶಗಳನ್ನು ಆಳುತ್ತಿದ್ದಂತೆ ಹೇಳಿದೆ. ಇವನ ಪತ್ನಿ ಗವಣಬ್ಬೆ. ಈ ನೊಳಂಬರಾಜನನ್ನು ಚಾರುಪೊನ್ನೇರನೆಂದು ಗುರುತಿಸಬಹುದು. ಜಗತ್ತುಂಗ ಪ್ರಭೂತವರ್ಷ ಪ್ರತಾಪವಲೋಕ ಶ್ರೀವಲ್ಲಭನ ಕೈಕೆಳಗೆ ಈತನು ಆಳುತ್ತಿದ್ದ. ಈ ವಲ್ಲಭನೇ ಕ್ರಿ.ಶ. ೭೯೨ ರಿಂದ ೮೧೪ ರ ವರಗೆ ಆಳಿದ ಮೂರನೆಯ ಗೋವಿಂದ. ಆದರೆ ಚಾರುಪೊನ್ನೇರನು ಗಂಗ ರಾಚಮಲ್ಲನ ಸಮಕಾಲೀನನಾದುದರಿಂದ ಇವನ ಕಾಲವೂ ಅವನ ಕಾಲಕ್ಕೆ ಸರಿಸುಮಾರಾಗಿ ಸರಿಹೊಂದುತ್ತದೆ. ಆದರೂ ಇವನಿಗಿಂತ ಮೊದಲು ರಾಚಮಲ್ಲನು ಪಟ್ಟಕ್ಕೆ ಬಂದನೆಂದು ಪರಿಗಣಿಸಿದಲ್ಲಿ ಹಾಗೂ ಚಿಕ್ಕಮಧುರೆ ಶಾಸನದಲ್ಲಿ ಪ್ರಭೂತವರ್ಷನ ಸಾಮಂತನಂತೆ ಹೇಳಿಕೊಂಡಿರುವುದರಿಂದ ಬಹುಶಃ ಚಾರುಪೊನ್ನೇರನು ಕ್ರಿ.ಶ.೮೧೦ ಕ್ಕೆ ಪಟ್ಟಕ್ಕೆ ಬಂದಿರಬಹುದು.

ಚಾರುಪೊನ್ನೇರನ ಆಳ್ವಿಕೆಯ ಆರಂಭದ ಕಾಲದಂತೆ ಕಡೆಯ ಕಾಲವೂ ತಿಳಿದಿಲ್ಲ. ಆದರೆ ಧರ್ಮಪುರಿ ಜಿಲ್ಲೆ, ರಾಯಕೋಟ ಶಾಸನದಿಂದ ಚಾರುಪೊನ್ನೇರನು ಕ್ರಿ.ಶ.೮೨೬ ರ ವರೆಗೆ ಜೀವಿಸಿದ್ದನೆಂದು ತಿಳಿಯಬಹುದು. ಈ ಶಾಸನ ಮಹಾಬಲಿ ಬಾಣರಸನು ತನ್ನ ಆಳ್ವಿಕೆಯ ೪ನೇ ವರ್ಷದಲ್ಲಿ ಹಾಕಿಸಿದ ಈ ಶಾಸನದಿಂದ ಗಂಗನಾಡು ಮತ್ತು ಇತರ ಪ್ರದೇಶಗಳನ್ನು ಆಳುತ್ತಿದ್ದುದು ತಿಳಿಯುತ್ತದೆ. ಅದು ಗಂಗದೊರೆ ರಾಚಮಲ್ಲನ ವಿರುದ್ಧ ಬಾಣರಸ ಮಣ್ಣೆಯ ಬಳಿ ಹೋರಾಟಕ್ಕೆ ಬಂದಾಗ[35] ಪೊನ್ನೇರ ಮತ್ತು ವೈದುಂಬರು ಬಾಣರಸನ ವಿರುದ್ಧ ಹೋರಾಡಲು ಮಣ್ಣೆಗೆ ಬಂದುದನ್ನು ತಿಳಿಸುತ್ತದೆ. ಇಲ್ಲಿ ಉಕ್ತನಾಗಿರುವ ಪೊನ್ನೇರ ನೊಳಂಬರಾಜ ಚಾರುಪೊನ್ನೇರನಾಗಿದ್ದಾನೆ.

ಕೋಲಾರ ಜಿಲ್ಲೆ ಮಡಿವಾಳ ಶಾಸನದಲ್ಲಿ[36]ನೊಳಂಬಾಧಿರಾಜನು ಗಂಗ-೬೦೦೦ ಪ್ರದೇಶವನ್ನು ಆಳುತ್ತಿದ್ದಂತೆ ಹೇಳಲಾಗಿದೆ. ಈ ನೊಳಂಬಾಧಿರಾಜನನ್ನು ಎಂ.ವಿ. ಕೃಷ್ಣರಾಯರು ಪೊಳಲ್ಚೋರನೆಂದು ಗುರುತಿಸಿದ್ದಾರೆ. ಈ ಪೊಳಲ್ಚೋರನು ಗಂಗ ಒಂದನೆಯ ನೀತಿಮಾರ್ಗನ ಕೈಕೆಳಗೆ ಆಳುತ್ತಿದ್ದಂತೆ ಹೇಳಿದ್ದಾರೆ.[37] ಹೀಗಾಗಿ ಈ ಕಾಲಕ್ಕೆ ಚಾರುಪೊನ್ನೇರನ ಆಳ್ವಿಕೆ ಅಂತ್ಯವಾಗಿರಬೇಕು.

ಚಳ್ಳಕೆರೆ ತಾಲೂಕು ಚಿಕ್ಕಮಧುರೆ ಶಾಸನದ ಆಧಾರದಿಂದ ಸಿಂಗಪೋತನಿಗೆ ಮಹಾದೇವಿಯೆಂಬ ಮಗಳಿದ್ದಂತೆ ಹೇಳಿದೆ. ಇವಳನ್ನು ಪೆರ್ಮಾನಡಿಗೆ ಕೊಟ್ಟಿದಂತೆ ಹೇಳಿದೆ. ಈ ಪೆರ್ಮಾನಡಿ ಒಂದನೆಯ ರಾಚಮಲ್ಲನಾಗಿರುತ್ತಾನೆ. ಸಿಂಹಪೋತನ ಹೆಂಡತಿ ಮಾದವೆಯೆಂಬುವವಳು ಆಳುತ್ತಿದ್ದಾಗ ಬಿಸಮನೆಂಬ ಮನೆಮಗನಿರುತ್ತಾನೆ. ಬಹುಶಃ ಈ ವಿಸಮೆರಸ ದೇಗುಲವೊಂದನ್ನು ಕಟ್ಟಿಸಿದಂತೆ ಹೇಳಲಾಗಿದೆ. ಇದೇ ಶಾಸನದ ಮುಂದುವರಿದ ಭಾಗದಲ್ಲಿ ಸಿಂಹಪೋತನ ಪ್ರಿಯಾತ್ಮಜ ಸಮಸ್ತ ಭುವನವಿಖ್ಯಾತ ಪಂಚಮಹಾಶಬ್ದ ಪ್ರಿಥುವೀವಲ್ಲಭ ಪರಮೇಶ್ವರ ಪಲ್ಲವಾದಿರಾಯನನ್ನು ಹೆಸರಿಸಿದೆ. ಈತನು ಚಾರುಪೊನ್ನೇನನಿರಬೇಕು. ಇವನ ಪತ್ನಿ ಗವಣಬ್ಬೆಯೆಂದಿದೆ. ಈಕೆ ಮದರಿಕಲ್ಲನ್ನು ಆಳುತ್ತಿದ್ದಳು. ಕಂಬದೂರಿನ ಶಾಸನವು ಚಾರುಪೊನ್ನೇರನವರೆಗೆ ವಂಶಾವಳಿಯನ್ನು ನೀಡಿದ್ದು, ಇದರಲ್ಲಿ ಬೆದ್ದುಗೊಂದೆಯ ಕೆರೆಯನ್ನು ಕಟ್ಟುವಾಗ (ಕೆರೆ ಕಟ್ಟಿದ ವ್ಯಕ್ತಿಗೆ) ತಮ್ಮ ಹಿರಿಯರ ಹೆಸರಿನಲ್ಲಿ ಅವರವರ ಹೆಸರಿನಲ್ಲಿ ಅಂದರೆ ಪೇರ್ಮುಖರಾಮನ ಹೆಸರಿನಲ್ಲಿ ನೊಳಂಬ ದೊಡ್ಡನೆಂದು, ಶ್ರೀಮುಖರಾಮನ ಹೆಸರಿನಲ್ಲಿ ಶ್ರೀಮುಖದೊಡ್ಡನೆಂದು, ಸಿಂಙ್ಗಪೋತರಸ ಅವನ ಮಗ ಪೊನ್ನೇಱರಸನು, ಅವನ ತಂಗಿ ಧರ್ಮಮಹಾದೇವಿಯರು ಕೂಡಿ ಪೊನ್ನೇರ ದೊಡ್ಡನೆಂದು ಕಡಗವಿಟ್ಟು ಮರ್ಯಾದೆ ಮಾಡಿದ ಉಲ್ಲೇಖವಿದೆ.[38]

ಒಂದನೆಯ ಮಾರಸಿಂಹನ ಗಂಜಾಂ ಶಾಸನದಲ್ಲಿ ಕಲಿನೊಳಂಬರಾಜನಿಗೆ (ಸಿಂಹಪೋತ) ನಿಜರಾಮ ಮತ್ತು ನಯಧೀರರೆಂಬ ಮಕ್ಕಳಿದ್ದರೆಂದು ತಿಳಿಸುತ್ತದೆ. ಆದರೆ ಈ ನೊಳಂಬ ರಾಜಕುಮಾರರ ಬಗ್ಗೆ ಮುಂದಿನ ಶಾಸನಗಳು ಮೌನವಹಿಸಿವೆ. ಮಧುಗಿರಿ ತಾಲೂಕಿನ ಕೊಡಗೇನಹಳ್ಳಿ ಶಾಸನವು ಈ ಪೊನ್ನೇರನನ್ನು ಹೆಸರಿಸಿದೆ.[39] ದೊಡ್ಡಉಳ್ವರ್ತಿಯ ಶಾಸನದಲ್ಲಿ ಉಕ್ತನಾಗಿರುವ ನೊಳಂಬಾಧಿ ಅರಸನು ಪೊನ್ನೇರನೇ ಆಗಿರುತ್ತಾನೆ.[40] ಈ ಪೊನ್ನೇರನ ಸಮಕಾಲೀನಾಗಿ ಬಾಣ ದೊರೆ ಒಂದನೆಯ ವಿಜಯಾದಿತ್ಯ ಮತ್ತು ಅವನ ಮಗ ಮಲ್ಲದೇವನಿರುತ್ತಾನೆ. ಇವನನ್ನು ಹೆಸರಿಸಿರುವ ಶಾಸನಗಳಲ್ಲಿ ಕಾಲದ ಉಲ್ಲೇಖವಿಲ್ಲದಿರುವುದರಿಂದ ಇವನ ಕಾಲವನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗಿರುವುದಿಲ್ಲ. ಆದರೂ ಗಂಗ ಅರಸ ಒಂದನೆಯ

ರಾಚಮಲ್ಲ ಸಮಕಾಲೀನನಾದುದರಿಂದ ಇವನ ಕಾಲವನ್ನು ಕ್ರಿ.ಶ.ಸು. ೮೧೦ ರಿಂದ ೮೩೦ ಎನ್ನಬಹುದು. ಒಂದನೆಯ ಪೊಳಲ್ಚೋರನು ಕ್ರಿ.ಶ. ೮೩೦ರ ಸುಮಾರಿಗೆ ಪಟ್ಟಕ್ಕೆ ಬಂದಿರಬೇಕು. ಸಿಂಗಪೋತನ ಇನ್ನಿಬ್ಬರು ಮಕ್ಕಳಾದ ನಿಜರಾಮ ಮತ್ತು ನಯಧೀರರ ಸಂಗತಿ ಮತ್ತು ಅವರ ಸಂತತಿ ಮುಂದುವರಿದ ಬಗ್ಗೆ ನಮಗೆ ಏನೂ ತಿಳಿಯುವುದಿಲ್ಲ. ಅಥವಾ ಇವರನ್ನು ಮುಂದಿನ ರಾಜರೊಡನೆ ಸಮೀಕರಿಸಲು ಆಧಾರಗಳು ಸಾಲವು.

**ಪೊಳಲ್ಚೋರ (ಪಲ್ಲವಮಲ್ಲ)**

ಒಂದನೆಯ ರಾಚಮಲ್ಲನು ಪಲ್ಲವ ರಾಜ್ಯದ ಮೇಲೆ ದಂಡೆತ್ತಿ ಹೋಗುವ ಮೊದಲೇ ನೊಳಂಬಾಧಿರಾಜ ಪೊಳಲ್ಚೋರನು ಚಾರುಪೊನ್ನೇರನ ಉತ್ತರಾಧಿಕಾರಿಯಾಗಿದ್ದಾನೆ. ಕ್ರಿ.ಶ.೮೨೮ರಲ್ಲಿ ಗಂಗ ರಾಚಮಲ್ಲನು ಮಣ್ಣೆಯನ್ನು ರಾಷ್ಟ್ರಕೂಟರಿಂದ ವಶಪಡಿಸಿಕೊಂಡ. ಆಗ ಸಾಮಂತ ಚಾರುಪೊನ್ನೇರ ಅವನಿಗೆ ಸಹಾಯ ಮಾಡಿದ. ಮಣ್ಣೆ ಮತ್ತು ಇತರ ಪ್ರದೇಶಗಳನ್ನು ವಶಪಡಿಸಿಕೊಂಡ ನಂತರ ಒಂದನೆಯ ರಾಚಮಲ್ಲ ಪಲ್ಲವ ರಾಜ್ಯದ ಮೇಲೆ ದಂಡಯಾತ್ರೆ ಕೈಗೊಂಡ. ಪಲ್ಲವರ ಸಾಮಂತರಾಗಿದ್ದ ಬಾಣರನ್ನು ಎದುರಿಸಿ ಅವರಿಂದ ಗಂಗ-೬೦೦೦ ಪ್ರದೇಶವನ್ನು ವಶಪಡಿಸಿಕೊಂಡ. ಬೂದಿಕೋಟೆ ಶಾಸನವೂ[41] ಈ ಬಗ್ಗೆ ಸೂಚನೆ ನೀಡುತ್ತದೆ. ಈ ಯುದ್ಧದಲ್ಲಿ ಗಂಗ ಸೈನಿಕರಂದ ಅಗ್ಗಲರಸ ಎಂಬುವವನು ಮೃತಪಟ್ಟಂತೆ ತಿಳಿಯುತ್ತದೆ. ಹೆಬ್ಬಟ ಶಾಸನದಲ್ಲಿ[42] ನೊಳಂಬಾಧಿರಾಜ ಒಂದನೆಯ ಪೊಳಲ್ಚೋರನು ಆಳುತ್ತಿದ್ದಾಗ ಬಿದಿರೂರಿನ ಅಗ್ಗಲನ ಜೊತೆಯಲ್ಲಿ ನಡೆದ ಕಾಳಗದಲ್ಲಿ ಬಿಜೆಯಿತ್ತ ಸತ್ತದ್ದನ್ನು ಉಲ್ಲೇಖಿಸಿದೆ. ಬೂದಿಕೋಟೆ ಶಾಸನದಲ್ಲಿ ಹೇಳಿರುವ ಅಗ್ಗಲರಸ ಈ ಅಗ್ಗಲ ಇಬ್ಬರು ಒಂದೇ ಎಂದು ಗುರುತಿಸಬಹುದು.

ಒಂದನೆಯ ನೀತಿಮಾರ್ಗನ ಹಿಂದೂಪುರದ ಶಾಸನದ ಕಾಲ ಶಕ ೭೭೫ ಅಂದರೆ ಕ್ರಿ.ಶ ೮೫೩ ರಲ್ಲಿ[43] ನೊಳಂಬರಾಜನೊಬ್ಬನು ಕಂಚಿಯವರೆಗೆ ವಿಸ್ತರಿಸಿದ ರಾಜ್ಯವನ್ನಾಳುತ್ತಿದ್ದನೆಂದು ಹೇಳಿದೆ. ಈ ಕಾಲಕ್ಕೆ ರಾಜ್ಯವಾಳುತ್ತಿದ್ದ ನೊಳಂಬರಾಜನು ಒಂದನೆಯ ಪೊಳಲ್ಚೋರ. ಈ ಪೊಳಲ್ಚೋರನು ಹಿಂದೂಪುರ ಶಾಸನದಲ್ಲಿ ಹೇಳಿರುವಂತೆ ಗಂಗ ದೊರೆ ನೀತಿಮಾರ್ಗನ ಕೈಕೆಳಗೆ ಗಂಗ-೬೦೦೦ ಪ್ರಾಂತ್ಯವನ್ನು ಆಳುತ್ತಿದ್ದ. ಇದೇ ವಿಷಯವನ್ನು ಮಡಿವಾಳ ಶಾಸನವೂ[44] ತಿಳಿಸುತ್ತದೆ. ಮಡಿವಾಳ ಶಾಸನವು ನೊಳಂಬನ ಬಿನ್ನಪದಂತೆ ನೀತಿಮಾರ್ಗನು ಬಾಣರ ಮೇಲೆ ಯುದ್ಧ ಮಾಡಿ ಮಡಿದ ವೀರನಿಗೆ 'ಬಾಳ್ಗಚ್ಚು' ನೀಡಿದ ಉಲ್ಲೇಖವಿದೆ.

ಒಂದನೆಯ ರಾಚಮಲ್ಲನ ವಳ್ಳಿಮಲೆ ಶಾಸನಗಳು ಉತ್ತರ ಆರ್ಕಾಟ್ ಜಿಲ್ಲೆಯ ವಳ್ಳಿಮಲೈವರೆಗಿನ ಭಾಗಗಳನ್ನು ಆಳುತ್ತಿದ್ದ ಸೂಚನೆ ನೀಡುತ್ತದೆ. ತುರುವೇಕೆರೆ ತಾಲೂಕು ಆಲ್ಬೂರು ಶಾಸನದ ಪ್ರಕಾರ[45] ರಾಚಮಲ್ಲ ಪೆರ್ಮಾನಡಿಯ ಸಾಮಂತನಾಗಿ ಪೊಳಲ್ಚೋರನು

ಆಳ್ವಿಕೆ ಮಾಡುತ್ತಿದ್ದ. ಆದರೆ ಬಿ.ಎಲ್. ರೈಸರು ಈ ಶಾಸನದ ಲಿಪಿ ಮತ್ತು ಭಾಷೆಯನ್ನು ಗಮನಿಸಿ ಇದು ಕ್ರಿ.ಶ.ಸು. ೮೮೦ಕ್ಕೆ ಸೇರುತ್ತದೆ ಎನ್ನುತ್ತಾರೆ. ಆದರೆ ಈ ಶಾಸನವು ಒಂದನೆಯ ರಾಚಮಲ್ಲನ ಆಳ್ವಿಕೆಯ ಅಂತ್ಯಕಾಲಕ್ಕೆ ಅಂದರೆ ಕ್ರಿ.ಶ. ೮೪೦ಕ್ಕೆ ಸೇರುತ್ತದೆ. ಕೃಷ್ಣಮೂರ್ತಿಯವರು ಒಂದನೆಯ ನೀತಿಮಾರ್ಗನ ಮರಣಾನಂತರ ೨ನೆಯ ರಾಚಮಲ್ಲನ ಕೈಕೆಳಗೆ ಒಂದನೆಯ ಪೊಳಲ್ಚೋರನು ಮಹಾಸಾಮಂತನಾಗಿ ಮುಂದುವರಿದಿರುವ ಸಾಧ್ಯತೆ ಇದೆ ಎಂದಿದ್ದಾರೆ. ರೈಸರ ಕಾಲ ನಿರ್ಣಯದ ಆಧಾರದ ಮೇಲೆ ಇವರು ಈ ಅಭಿಪ್ರಾಯಕ್ಕೆ ಬಂದಿರುವಂತೆ ತೋರುತ್ತದೆ. ಒಂದನೆಯ ಪೊಳಲ್ಚೋರನ ಕಾಲಕ್ಕೂ ಇಮ್ಮಡಿ ರಾಚಮಲ್ಲನ ಕಾಲಕ್ಕೂ ಕಾಲದ ಹೊಂದಾಣಿಕೆಯಾಗುತ್ತಿಲ್ಲ. ಹೀಗಾಗಿ ಕೃಷ್ಣಮೂರ್ತಿಯವರ ಹೇಳಿಕೆಯನ್ನು ಇಲ್ಲಿ ಒಪ್ಪಲು ಸಾಧ್ಯವಿಲ್ಲ. ಎಸ್. ಲಕ್ಷ್ಮೀನಾರಾಯಣರಾವ್ ಅವರು ಪೊಳಲ್ಚೋರನ ಆಳ್ವಿಕೆ ಕ್ರಿ.ಶ. ೮೬೦ಕ್ಕೆ ಮುಗಿಯುತ್ತದೆ ಎಂದಿದ್ದಾರೆ. ಆದರೆ ಮಹೇಂದ್ರನ ಶಾಸನಗಳು ಕ್ರಿ.ಶ.ಸು. ೮೭೭ ಕ್ಕೆ ಮೊದಲು ದೊರೆಯುವುದಿಲ್ಲವಾದ್ದರಿಂದ ಕ್ರಿ.ಶ.ಸು. ೮೭೦ ರವರೆಗೂ ಪೊಳಲ್ಚೋರನು ರಾಜ್ಯವಾಳಿರಬೇಕು ಎಂದು ತರ್ಕಿಸಿದಲ್ಲಿ ತಪ್ಪಾಗಲಾರದು. ನೊಳಂಬರ ಬಹಳಷ್ಟು ಶಾಸನಗಳಲ್ಲಿ ಕಾಲದ ಉಲ್ಲೇಖವಿಲ್ಲದಿರುವುದರಿಂದ ಈ ತೀರ್ಮಾನಕ್ಕೆ ಬರಲಾಗಿದೆ.

ಮಂಗಪರಸನ ಶಾಸನವೊಂದು ಬಳ್ಳಾರಿ ಜಿಲ್ಲೆಯ ಕೋಳೂರಿನಲ್ಲಿ ದೊರೆತಿದ್ದು, ಇವನನ್ನು ಸಮಸ್ತ ಭುವನವಿಖ್ಯಾತ ಪಂಚಮಹಾಶಬ್ದ ಪಲ್ಲವಾನ್ವಯ ಪರಮೇಶ್ವರ ಎಂಬ ವಿಶೇಷಣಗಳಿಂದ ಕರೆದಿದೆ. ಇವನು ಬಳ್ಳಾರೆ ೩೦ ರ ಪೊಲಯರಿಗೆ ಸತ್ತಿವಡಿಗೆಯನ್ನು ಬಿಟ್ಟ ಉಲ್ಲೇಖವಿದೆ.[46] ಈ ಮಂಗಪರಸನನ್ನು ಶಾಸನದಲ್ಲಿ ನೊಳಂಬ ವಂಶದವನೆಂದು ಕರೆಯದೆ ಪಲ್ಲವಾನ್ವಯನೆಂದು ಕರೆಯಲಾಗಿದೆ. ಆದರೂ ಈ ಪ್ರದೇಶದಲ್ಲಿದ್ದವರು ನೊಳಂಬರೇ ಆಗಿದ್ದರಿಂದ ಈ ಮಂಗಿರಾಜನೂ ನೊಳಂಬ ಅರಸನೇ ಆಗಿದ್ದಿರಬೇಕು. ಶಾಸನದಲ್ಲಿ ಇವನ ವಂಶಾವಳಿ ನೀಡಿಲ್ಲ. ಆದರೂ ಲಿಪಿಯ ಆಧಾರದಿಂದ ೯ನೆಯ ಶತಮಾನದ ಮಧ್ಯಭಾಗಕ್ಕೆ ಈ ಶಾಸನ ಸೇರುತ್ತದೆ.

ಎಪಿಗ್ರಾಫಿಯಾ ಇಂಡಿಕಾದಲ್ಲಿ ವೆಂಗಿಯ ಚಾಳುಕ್ಯರ ಬಗ್ಗೆ ಬರೆಯುವಾಗ ಗುಣಗ ವಿಜಯಾದಿತ್ಯನು ನೊಳಂಬ ರಾಷ್ಟ್ರದ ರಾಜ ಮಂಗಿಯನ್ನು ಕೊಂದಂತೆ ಹೇಳಿದೆ.[47] ಎರಡನೆಯ ಅಮ್ಮರಾಜನ ಶಾಸನದಲ್ಲಿ ವಿಜಯಾದಿತ್ಯನು ಮಂಗಿರಾಜನ ತಲೆಯನ್ನು ಯುದ್ಧದಲ್ಲಿ ಛೇದಿಸಿದಂತೆ ಉಲ್ಲೇಖಿಸಿದೆ.[48] ಪೀಠಾಪುರಂ ಶಾಸನದಲ್ಲಿ ಮುಮ್ಮಡಿ ವಿಜಯಾದಿತ್ಯನು ಯುದ್ಧಭೂಮಿಯಲ್ಲಿ ಮಂಗಿರಾಜನ ತಲೆಯನ್ನು ಚಂಡಾಡಿದಂತೆ ಹೇಳಿದೆ.[49] ಈ ಶಾಸನಗಳ ಆಧಾರದಿಂದ ಈ ಶಾಸನದಲ್ಲಿ ಉಕ್ತನಾಗಿರುವ ಗುಣಗ ವಿಜಯಾದಿತ್ಯನು ಪೂರ್ವ ಚಾಳುಕ್ಯ ಅರಸನಾಗಿದ್ದು ಕ್ರಿ.ಶ.೮೪೮ ರಿಂದ ೮೯೨ ಮಧ್ಯೆ ಆಳುತ್ತಿದ್ದ ರಾಜ. ಈ ಕಾಲಕ್ಕೆ ನೊಳಂಬರಲ್ಲಿ ರಾಜನಾಗಿದ್ದವನು ಒಂದನೆಯ ಪೊಳಲ್ಚೋರ. ಆದರೆ ಇವನಿಗೆ ಮಂಗಿ ಎಂಬ ಹೆಸರಿದ್ದ ಬಗ್ಗೆ ಯಾವ ಆಧಾರಗಳೂ ದೊರೆತಿಲ್ಲ.

ಇವನ ಮಗ ಒಂದನೆಯ ಮಹೇಂದ್ರನಿಗೂ ಈ ಅಡ್ಡ ಹೆಸರಿದ್ದ ಬಗ್ಗೆ ಯಾವ ಉಲ್ಲೇಖಗಳೂ ದೊರೆತಿಲ್ಲ. ಅಲ್ಟೇಕರರು ಕ್ರಿ.ಶ.೮೭೫-೮೭೮ರ ಮಧ್ಯೆ ಈ ಯುದ್ಧ ನಡೆದಿರಬೇಕೆಂಬ ಅಭಿಪ್ರಾಯಪಡುತ್ತಾರೆ.[50] ಮಚಲಿಪಟ್ಟಣದ ಶಾಸನದಲ್ಲಿ ಗುಣಗ ವಿಜಯಾದಿತ್ಯನು ಮಂಗಿಯನ್ನು ಕೊಲ್ಲುವ ಉಪಾಯವನ್ನು 'ವಿನಯಾಧಿಶರ್ಮ' ಎಂಬ ಬ್ರಾಹ್ಮಣನಿಂದ ತಿಳಿದುಕೊಂಡಂತೆ ಉಕ್ತವಾಗಿದೆ.[51]

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಈ ಯುದ್ಧದಲ್ಲಿ ಸತ್ತ ಮಂಗಿ ಅಥವಾ ಮಂಗಿರಾಜನು ಕಾಲದ ದೃಷ್ಟಿಯಿಂದ ಒಂದನೆಯ ಪೊಳಲ್ಚೋರನ ತಮ್ಮನಾಗಿದ್ದಿರಬೇಕು. ಈಗಿನ ಬಳ್ಳಾರಿಯ ಸುತ್ತಮುತ್ತಲ ಪ್ರದೇಶವನ್ನು ಈತ ಆಳ್ವಿಕೆ ಮಾಡಿಕೊಂಡಿದ್ದಿರಬೇಕು. ನೊಳಂಬ ವಂಶದಲ್ಲಿ ಸಿಂಹಪೋತನ ತಂದೆಯ ಹೆಸರು ಮಂಗಳ ನೊಳಂಬಾಧಿರಾಜ. ಚಾರುಪೊನ್ನೇರನು ತನ್ನ ಮಗನಿಗೆ ತನ್ನ ತಾತನ ಹೆಸರನ್ನು ಇಟ್ಟಿರಬಹುದು. ಬಹುಶ: ಯುದ್ಧದಲ್ಲಿ ಈತ ಮರಣಾನಂತರ ಇವನ ಪೀಳಿಗೆ ಕೊನೆಯಾಗಿರಬೇಕು. ಮುಂದಿನ ಶಾಸನಗಳು ಇವನ ಬಗ್ಗೆ ಮೌನ ವಹಿಸಿದವು.

ಒಂದನೆಯ ಪೊಳಲ್ಚೋರನಿಗೆ ಒಂದನೆಯ ರಾಚಮಲ್ಲನ ಮಗಳು ನೀತಿಮಾರ್ಗನ ತಂಗಿಯಾದ ಜಾಯಬ್ಬೆಯನ್ನು ಮದುವೆ ಮಾಡಿಕೊಡಲಾಗಿತ್ತು. ರಾಚಮಲ್ಲನ ಮಗಳಾದ ಜಾಯಬ್ಬೆಯ ತಾಯಿ ನೊಳಂಬ ಸಿಂಹಪೋತನ ಮಗಳಾಗಿದ್ದುದರಿಂದ ತನ್ನ ತವರಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟಿದ್ದಳು. ಈ ಸಂಬಂಧದಿಂದ ನೊಳಂಬ ಮತ್ತು ಗಂಗರ ಸಂಬಂಧಗಳು ಮಧುರವಾಗಿದ್ದವು. ಗಂಗರ ರಾಜ್ಯ ವಿಸ್ತಾರ, ಆಡಳಿತ ಮುಂತಾದವುಗಳಲ್ಲಿ ಇಲ್ಲಿಯವರೆಗೆ ನೊಳಂಬರು ಸಹಕರಿಸುತ್ತ ಬಂದಿದ್ದರು.

ಪೊಳಲ್ಚೋರನ ನಂತರ ಅಂದರೆ ಕ್ರಿ.ಶ.೮೭೦ ರ ಸುಮಾರಿನಲ್ಲಿ ಮಹೇಂದ್ರ ಉತ್ತರಾಧಿಕಾರಿಯಾಗಿದ್ದಾನೆ. ಮಹೇಂದ್ರನ ಎರಡು ಶಾಸನಗಳು ಅವನು ಗಂಗ-೬೦೦೦ ಪ್ರಾಂತ್ಯವನ್ನು ಆಳುತ್ತಿದ್ದನೆಂದು ತಿಳಿಸುತ್ತವೆ.[52] ಶಾಸನಗಳಲ್ಲಿ ಇವನನ್ನು ಮಹೇಂದ್ರ, ಮಯಿಂದ್ದ ಮುಂತಾಗಿ ಕರೆದಿವೆ. ಶಾಸನವೊಂದು ಸಮಧಿಗತ ಪಂಚಮಹಾಶಬ್ದ, ಪಲ್ಲವಕುಲತಿಲಕ, ಪ್ರಿಥುವಿವಲ್ಲಭ ಮಹೇಂದ್ರ ತ್ರಿಭುವನಧೀರ ಎಂದು ಹೇಳಿದೆ. ಕ್ರಿ.ಶ.೮೭೮ ರ ಶಾಸನದಲ್ಲಿ ಇವನು ಚೋರ ಮೊದಲಾದ ದಾಯಿಗರನ್ನು ನಿರ್ಮೂಲನ ಮಾಡಿ ರಾಜ್ಯವಾಳುತ್ತಿದ್ದಂತೆ ತಿಳಿಸುತ್ತದೆ.[53]

### ಒಂದನೆಯ ಮಹೇಂದ್ರ

ಬರಗೂರಿನ ಕ್ರಿ.ಶ.೮೭೮ ರ ಶಾಸನದಲ್ಲಿ ತನ್ನನ್ನು ರಾಜಮಲ್ಲ ಪೆರ್ಮಾಡಿಯ ಮಗಳ ಮಗನೆಂದೂ, ಚೋರ ಮೊದಲಾದ ದಾಯಿಗರಂ ನಿರ್ಮೂಲ ಮಾಡಿ ಬರಗೂರಲ್ಲಿ ಬೀಡು ಬಿಟ್ಟಿದ್ದಂತೆ ಹೇಳಲಾಗಿದೆ. ಅಲ್ಲಿ ತನಗೆ ಬಾಹ್ಯಾಭ್ಯಂತರ ಸಿದ್ಧಿಯಾಗಬೇಕೆಂದು ಮಹೇಂದ್ರೇಶ್ವರ

ದೇವಾಲಯವನ್ನು ಕಟ್ಟಿಸಿದ.[54] ಇನ್ನು ಒಂದೆರಡು ಶಾಸನಗಳು[55] ಈತನು ಬರಗೂರಿನಲ್ಲಿ ಬೀಡು ಬಿಟ್ಟಿದ್ದನ್ನು ಹೇಳುತ್ತವೆ. ಹುಲಿಕುಂಟೆ ಶಾಸನದಲ್ಲಿ ಮಹೇಂದ್ರನ ನಾಲ್ಕು ಜನ ರಾಣಿಯರ ಹೆಸರನ್ನು ಹೇಳಿ, ಅವರು ಕೆಲವು ಸೀಮೆಗಳನ್ನು ಆಳುತ್ತಿದ್ದುದನ್ನು ಉಲ್ಲೇಖಿಸಿದೆ.[56] ಈತನು ಜಯಿಸಿದ ಚೋರ ಅಥವಾ ಚೋಳ ರಾಜರೆಂದರೆ ಏರಿಗಲ್ವಾಡಿ ಚೋಳರು ಅಥವಾ ನಿಡುಗಲ್ಲ ಚೋಳರು. ಇವರನ್ನು ದಾಯಾದಿಗಳೆಂದು ಕರೆದಿರುವುದು ಗಮನಿಸಬೇಕಾದ ಸಂಗತಿ. ಈ ಚೋಳರು ತಮ್ಮನ್ನು ಉರೈಯೂರ ಮೂಲದವರೆಂದು ಶಾಸನಗಳಲ್ಲಿ ಹೇಳಿಕೊಡಿದ್ದಾರೆ. ಆದರೆ ತಂಜಾವೂರಿನ ಚೋಳರಿಗೂ ಇವರಿಗೂ ಇದ್ದ ಸಂಬಂಧ ತಿಳಿಯುವುದಿಲ್ಲ. ಏರಿಗಲ್ವಾಡಿ ಚೋಳರು ಶ್ರೀಪುರುಷನ ಕಾಲದಲ್ಲಿ ಬಲಿಷ್ಠರಾಗಿದ್ದರು. ಗಂಗ-ರಾಷ್ಟ್ರಕೂಟರ ಯುದ್ಧಗಳಲ್ಲಿ ಗಂಗರ ಪರವಾಗಿ ಭಾಗವಹಿಸಿದ್ದವರು. ರಾಷ್ಟ್ರಕೂಟರ ಮೇಲೆ ಯುದ್ಧ ಸಾರಿದ್ದ ಗಂಗರ 'ಪನ್ನಿರ್ವ್ವರ ದಂಡಿ'ನಲ್ಲಿದ್ದವರು. ನೊಳಂಬರಿಗೆ ಅಥವಾ ಗಂಗರಿಗೆ ದೊರೆತಂತೆ ಇವರಿಗೆ ರಾಜಶ್ರಯ ದೊರೆಯಲಿಲ್ಲ. ನೊಳಂಬರ ನೆರೆಯವರಾದ ಇವರನ್ನು ಮಹೇಂದ್ರ ಸುಲಭವಾಗಿ ಸೋಲಿಸಿದುದರಲ್ಲಿ ವಿಶೇಷವೇನೂ ಇಲ್ಲ. ಈ ಚೋಳರನ್ನು ತೆಲುಗು ಚೋಳರೆಂದು ವಿದ್ವಾಂಸರು ತಪ್ಪಾಗಿ ಕರೆದಿದ್ದಾರೆ. ಇವರು ವಾಸ್ತವವಾಗಿ ಏರಿಗಲ್ವಾಡಿ ಚೋಳರಾಗಿದ್ದಾರೆ. ಧರ್ಮಪುರಿಯ ಕ್ರಿ.ಶ. ೮೭೮ ರ ಶಾಸನದಲ್ಲಿ[57] ಅನೇಕ ವ್ಯಾಪಾರಿಗಳು ಸೇರಿ ದೇವದಾನವನ್ನು ನೀಡುತ್ತಾರೆ. ಈ ದೇವದಾನವನ್ನು ಪೊನ್ನೇಱ ಗೊರವನು ದಾನ ಪಡೆಯುತ್ತಾನೆ. ಈ ಶಾಸನದಲ್ಲಿ ಉಕ್ತವಾಗಿರುವ ವ್ಯಾಪಾರಿಗಳ ಪಟ್ಟಿಯಲ್ಲಿ ಚಂದಿಯಣ್ಣನೂ ಇದ್ದು ಮುಂದೆ ಇವನು ತಗಡೂರಿನಲ್ಲಿ ಬಸದಿ ಕಟ್ಟಿಸುತ್ತಾನೆ.

ಕ್ರಿ.ಶ.ಸು.೮೮೦ ರ ಮಡಿವಾಳದ ಶಾಸನದಲ್ಲಿ[58] ಮಹೇಂದ್ರನು ಗಂಗ ಪೆರ್ಮಾನಡಿ ಅಥವಾ ಎರಡನೆಯ ರಾಚಮಲ್ಲನ ಸಾಮಂತನಾಗಿದ್ದ ಹಾಗೂ ಅವನ ಕೈಕೆಳಗೆ ಗಂಗ-೬೦೦೦ ವನ್ನು ಆಳುತ್ತಿದ್ದಂತೆ ಹೇಳಿದೆ. ಬಾಣರ ಮೇಲೆ ನಡೆದ ಯುದ್ಧದಲ್ಲಿ ಈ ಅರಸರ ಪರವಾಗಿ ಹೋರಾಡಿ ಮಡಿದ ವೀರನಿಗೆ ನೊಳಂಬರಾಜನ ಬಿನ್ನಪದಂತೆ ಇಮ್ಮಡಿ ನೀತಿಮಾರ್ಗನು ಸೂರೂರನ್ನು ಬಾಳ್ಗಚ್ಚು ನೀಡಿದ. ಹುಲದೇವನಹಳ್ಳಿ, ಕಾರಬೆಲೆ, ಜೋಡಿದಳಸಿಗೆರೆ ಶಾಸನದಲ್ಲಿಯೂ ನೊಳಂಬಾಧಿಯರಸ ಗಂಗ-೬೦೦೦ ವನ್ನು ಆಳುತ್ತಿದ್ದಂತೆ ಹೇಳಿದೆ.[59] ಕ್ರಿ.ಶ.೮೭೫ ರ ಸುಮಾರಿಗೆ ಬಾಣರ ವಶದಲ್ಲಿದ್ದ ತಗಡೂರು ಪ್ರದೇಶ ನೊಳಂಬರ ವಶಕ್ಕೆ ಬಂದದ್ದರಿಂದ ಈ ಕಾಲದಲ್ಲಿ ಗಂಗ-೬೦೦೦ ಪ್ರದೇಶ ನೊಳಂಬರ ವಶಕ್ಕೆ ಬಂದಿರಬೇಕು.

ಕ್ರಿ.ಶ. ೮೮೩ ರ ಕಂಬದೂರು ಶಾಸನದಲ್ಲಿ ನೊಳಂಬರಾಜ ಮಹೇಂದ್ರ ತ್ರಿಭುವನ ಧೀರನ ಕಾಲದಲ್ಲಿ ಬೆಳ್ದುಗೊನ್ಡೆಯ ಗಾಮುಣ್ಡರು ಪಾರ್ವರು ಸೇರಿ ಆದಿತ್ಯ ಗೃಹಕ್ಕೆ ಕೆಲವು ದತ್ತಿಗಳನ್ನು ಬಿಟ್ಟ ಉಲ್ಲೇಖವಿದೆ. ಇದಕ್ಕೆ ಸಾಕ್ಷಿಗಳಾಗಿ ನೊಳಂಬದೊಡ್ಡನ ಹೆಸರೂ ಬಂದಿದೆ. ಅಲ್ಲದೆ ಅನೇಕ ಬ್ರಾಹ್ಮಣರನ್ನು ಹೆಸರಿಸಲಾಗಿದೆ.[60] ಕ್ರಿ.ಶ.ಸು. ೮೮೫ ರ ಬಂಗವಾಡಿ ಶಾಸನದಲ್ಲಿ ಮಹಾಬಲಿ

ಬಾಣರಸರ ಮೇಲೆ ನೊಳಂಬ, ರಾಚಮಲ್ಲ ಮತ್ತು ದಡಿಗ ಎಂಬುವವನು ಮಾಸ್ದಾವ್ಪೂರ ಎಂಬಲ್ಲಿ ಯುದ್ಧ ಮಾಡಿದಂತೆ ಹೇಳಿದೆ. ಈ ಯುದ್ಧದಲ್ಲಿ ಬಾಣರು ಹಿಮ್ಮೆಟ್ಟಿರ ಬೇಕು.[61] ದೊಡ್ಡ ಬೆಳವಂಗಲದ ಶಾಸನದಲ್ಲಿ ಮಹೇನ್ದ್ರನು [ಮಾಸ್ದಾ]ವಿಯ ಕಾಳಗದಲ್ಲಿ ಭಾಗವಹಿಸಿದ್ದಂತೆ ತಿಳಿಯುತ್ತದೆ.[62] ಕ್ರಿ.ಶ.ಸು. ೮೮೫ ರ ಕಾಲದ ಧರ್ಮಪುರಿಯ ಶಾಸನವೊಂದರಲ್ಲಿ ನೊಳಂಬನ ಉಲ್ಲೇಖ ಬಂದಿದ್ದು, ಭೈರವಶಕ್ತಿಭಟಾರನ ಕಾಲನ್ನು ತೊಳೆದು ದಾನ ನೀಡಿದ ಉಲ್ಲೇಖವಿದೆ.

ಕ್ರಿ.ಶ.೮೮೭ರ ಸೀಗೆಯ ವೀರಗಲ್ಲಿನಲ್ಲಿ ರಾಚಮಲ್ಲನ ೧೭ನೆಯ ವರ್ಷದಲ್ಲಿ ಬಹುಶ: ನೊಳಂಬರಾಜನೊಬ್ಬ ಬಂದಂತೆ ತಿಳಿಯುತ್ತದೆ. ಇದು ತ್ರುಟಿತವಾಗಿರುವುದರಿಂದ ನೊಳಂಬರ ಮೇಲೆ ಯುದ್ಧ ಮಾಡಿದ ಸಂಗತಿಯನ್ನು ತಿಳಿಸುತ್ತದೆಯೇ ಎಂಬುದು ಸ್ಪಷ್ಟವಾಗಿಲ್ಲ.[63]

ಕ್ರಿ.ಶ.ಸು.೮೯೦ ರ ಕಲಕತ್ತೂರು ಶಾಸನದಲ್ಲಿ ನೊಳಂಬ ರಾಜನು ತಲಕಾಡ ಮೇಲೆ ದಂಡೆತ್ತಿ ಹೋದಂತೆಯೂ ಆ ಸಂದರ್ಭದಲ್ಲಿ ಪೆರ್ಮಾನಡಿಯ ಬಿನ್ನಪದಂತೆ ಮಹಾರಾಜನು (ವೈದುಂಬ)? ಪುಲಿನಾಡ ಮೇಲೆ ಬಂದು ಪೆರ್ಮಾವಿ ಎಂಬ ಊರನ್ನು ಸುಟ್ಟಂತೆಯೂ ಮುಂದೆ ಸತ್ತ ವೀರನ ವಂಶಸ್ಥರಿಗೆ ದಾನವನ್ನು ನೀಡಿದಂತೆ ಹೇಳಿದೆ. ಇದರಲ್ಲಿ ಗಂಗ-೬೦೦೦ವನ್ನು ನೊಳಂಬಾಧಿಯರಸ ಆಳುತ್ತಿದ್ದಂತೆ ಹೇಳಿದೆ.

ಇಲ್ಲಿಂದ ಮುಂದೆ ಮಹೇಂದ್ರ ಪ್ರಬಲನಾಗುತ್ತಾ ಬರುತ್ತಾನೆ. ಪಾರಂಪರಿಕ ನೊಳಂಬವಾಡಿ-೧೦೦೦ ಅಲ್ಲದೆ ಗಂಗರ ಪಾರಂಪರಿಕ ರಾಜ್ಯ ಗಂಗ-೬೦೦೦ಕ್ಕೆ ಅಧಿಪತಿಯಾಗಿರುತ್ತಾನೆ. ಇದಲ್ಲದೆ ತಗಡೂರಿನ (ಧರ್ಮಪುರಿ)ವರೆಗೂ ತನ್ನ ರಾಜ್ಯವನ್ನು ವಿಸ್ತರಿಸಿದ್ದ. ಈ ವಿಸ್ತಾರ ಮಹೇಂದ್ರನ ಮಹತ್ವಾಕಾಂಕ್ಷೆ ಗರಿಗೆದರಿದ್ದು ಇಮ್ಮಡಿ ರಾಚಮಲ್ಲನಿಗೆ ಮಕ್ಕಳಿಲ್ಲದಾಗ ಬಹುಶಃ ಗಂಗ ಸಾಮ್ರಾಜ್ಯಕ್ಕೆ ತನ್ನ ಉತ್ತರಾಧಿಕಾರತ್ವವನ್ನು ತೋರಿಸಲು ಈತ ಗಂಗವಾಡಿಯ ಮೇಲೆ ಧಾಳಿ ಮಾಡಿರಬಹುದು. ಏಕೆಂದರೆ ಇಮ್ಮಡಿ ರಾಚಮಲ್ಲನ ತಮ್ಮ ಒಂದನೆಯ ಬೂತುಗನ ಮಗನಿಗೆ ರಾಜ್ಯ ಹೋಗುತ್ತಿತ್ತು. ಈ ಕಾರಣದಿಂದ ಮಹೇಂದ್ರನು ತಾನೂ ಗಂಗ ರಾಜ್ಯದ ಉತ್ತರಾಧಿಕಾರಿಯಾಗಲು ಅರ್ಹ ಎಂಬುದನ್ನು ತೋರಿಸಿಕೊಂಡಿರಬೇಕು. ಶೆಟ್ಟಿಹಳ್ಳಿ ಶಾಸನದಲ್ಲಿ ಇವನನ್ನು 'ಮಯಿನ್ದರ್ಮ' ಎಂದು ಕರೆಯಲಾಗಿದೆ.[64] ಮುತ್ತುಗದಹಳ್ಳಿಯ ಕ್ರಿ.ಶ.ಸು. ೮೯೦ ರ ಶಾಸನದಲ್ಲಿ ಮಹೇಂದ್ರನು ಗಂಗರ ಮೇಲೆ ದಂಡೆತ್ತಿ ಹೋದಂತೆ ತಿಳಿಯುತ್ತದೆ.[65] ಕ್ರಿ.ಶ. ೮೯೨ ರ ಶಾಸನದಲ್ಲಿ ರಾಚಮಲ್ಲ ಪೆರ್ಮಾನಡಿಯ ೨೨ ನೆಯ ವರ್ಷದಲ್ಲಿ ಉತ್ತರಳ್ಳಿಗರ ಕೋಟೆಯಲ್ಲಿ ನೊಳಂಬನೊಡನೆ ನಡೆದ ಯುದ್ಧದಲ್ಲಿ ರಾಚೆಯಗಂಗ ಸತ್ತಾಗ ಪೆರ್ಮಾನಡಿ ಮತ್ತು ಎರೆಯಪ್ಪ ಇವರಿಬ್ಬರೂ ಇದ್ದು ಕಲ್ನಾಡು ನೀಡುತ್ತಾರೆ.[66] ಕ್ರಿ.ಶ.೮೯೨ ಶಾಸನದಲ್ಲಿ ಉಲ್ಲೇಖಿಸಿರುವಂತೆ ತಗಡೂರುನಾಡು ಮಹೇಂದ್ರನ ವಶದಲ್ಲಿಯೇ ಇತ್ತು. ಈ ಶಾಸನದಲ್ಲಿ ಆತನು ಮಹಾಬಲಿ ಕುಲವನ್ನು ವಿದ್ವಂಸನ ಮಾಡಿದಂತೆ

ಹೇಳಿಕೊಂಡಿದ್ದಾನೆ. ಚಂಡಿಯಣ್ಣ ಮತ್ತು ನಿಧಿಯಣ್ಣ ಎಂಬುವವರು ತಗಡೂರಿನಲ್ಲಿ ಬಸದಿಯನ್ನು ಮಾಡಿಸಿದಂತೆ ಉಲ್ಲೇಖವಿದೆ. ಕ್ರಿ.ಶ. ೮೯೫ರ ಅಂಬೂರು ಶಾಸನದಲ್ಲಿ ಪಲ್ಲವ ನೃಪತುಂಗ ವಿಕ್ರಮವರ್ಮನು ಆಳುತ್ತಿದ್ದಾಗ ನೊಳಂಬರು ಪಲ್ಲವರ ರಾಜ್ಯದ ಪಡುವ್ರೂರ್ ಕೋಟ್ಟತ್ತು ಮೇಲೆ ಅಡೈಯೂರು ನಾಡಿನ ಆಮ್ಮೆಯೂರಿನ ಮೇಲೆ ನುಳಂಬನ ಪಡೆ ಬಂದಾಗ ಪ್ರಿಥ್ವೀಗಂಗರಾಯನ ಕಡೆಯವರು ತಡೆದಂತೆ ಉಲ್ಲೇಖವಿದೆ.

ಈ ಘಟನೆಯು, ನೊಳಂಬರು ಪಲ್ಲವರ ರಾಜ್ಯದ ಮೇಲೆ ಮತ್ತೆ ಧಾಳಿ ಮಾಡಿದ ವಿವರವನ್ನು ನೀಡುತ್ತದೆ. ಇದಲ್ಲದೆ ಗಂಗರ ಇನ್ನೊಂದು ಶಾಖೆಯಾದ ಪೃಥ್ವೀಗಂಗನ ಶಾಖೆಯು ಪಲ್ಲವರ ಮಾಂಡಳೀಕರಾಗಿದ್ದರೆಂದು ಇದರಿಂದ ತಿಳಿಯುತ್ತದೆ.[67] ಕ್ರಿ.ಶ. ೮೯೫ ರ ತಾಯಲೂರು ಶಾಸನವು ನೊಳಂಬನು ತೈರೂರಿನಲ್ಲಿ ದೇವಾಲಯವೊಂದನ್ನು ಕಟ್ಟಿಸಿದಂತೆ ಹೇಳಿದೆ. ಕಾಲದ ವಿವರ ಹೇಳುವಾಗ ಸತ್ಯವಾಕ್ಯ ಪೆರ್ಮಾನಡಿಯ ಆಳ್ವಿಕೆಯ ಕಾಲದಲ್ಲಿ ನಡೆದ ಘಟನೆ ಎಂದು ಹೇಳಿದೆ. ಈ ಕಾಲಕ್ಕೆ ಈ ಪ್ರದೇಶವೂ ಮಹೇಂದ್ರನಿಗೆ ಸೇರಿತ್ತೆಂಬುದು ಇದರಿಂದ ತಿಳಿಯಬಹುದು.[68]

ಕ್ರಿ.ಶ.೮೯೯ ರ ಶಾಸನದಲ್ಲಿ ಮಹೇಂದ್ರನ ಕಾಲದಲ್ಲಿಯೇ ಅಯ್ಯಪನೂ ರಾಜ್ಯಭಾರ ಮಾಡುತ್ತಿದ್ದಂತೆ ತಿಳಿಯಬಹುದು.[69] ಇದರಲ್ಲಿ ಇವನನ್ನು [ಪಂಚ] ಮಹಾಶಬ್ದ ಪಲ್ಲವಾನ್ವಯ ಕುಲತಿಲಕ ಕಾಞ್ಚೀಪುರವರೇಶ್ವರ... ಪ್ರಚಂಡ ದಕ್ಷಿಣ ದಂಡ ದಂಡಿತಾರಾತಿ ಮಂಡಳ .. ನಾರಾಯಣ ಮುಂತಾಗಿ ಹೊಗಳಿದೆ. ಕ್ರಿ.ಶ.ಸು.೯೦೦ರ ಶಾಸನದಲ್ಲಿ ಮಹೇಂದ್ರನು ತಗಡೂರನ್ನು ಆಳುತ್ತಿದ್ದ.[70] ಸುಮಾರು ಇದೇ ಕಾಲದ ಮಾದಿಗೆರೆ ಶಾಸನದಲ್ಲಿ ಮಹೇಂದ್ರನು ರಾಜ್ಯಭಾರ ಮಾಡುತ್ತಿದ್ದಾಗ ಇಂದ್ರನೆಂಬುವನು ನೊಳಂಬನಾಡನ್ನು ಆಳುತ್ತಿದ್ದಂತೆ ಹೇಳಿದೆ. ಈ ಇಂದ್ರ ಯಾರೆಂದು ಗುರುತಿಸುವುದು ಕಷ್ಟ. ಇಲ್ಲಿಂದಾಚೆಗೆ ಮಹೇಂದ್ರನ ಶಾಸನಗಳು ದೊರೆಯುವುದಿಲ್ಲ. ಕೆಲವು ಕಾಲರಹಿತ ಶಾಸನಗಳನ್ನು ಈ ಕಾಲಕ್ಕೆ ಸೇರಿಸಬಹುದು.

ಒಂದನೆಯ ಮಹೇಂದ್ರನು ನೊಳಂಬರ ಪ್ರಖ್ಯಾತ ಹಾಗೂ ಮಹತ್ವಾಕಾಂಕ್ಷಿಯಾದ ದೊರೆ. ತನ್ನ ರಾಜ್ಯದ ಪಕ್ಕದಲ್ಲಿದ್ದ ಬಾಣ, ಏರಿಗಲ್ವಾಡಿ ಚೋಳ, ವೈದುಂಬ ಮುಂತಾದ ಸಣ್ಣ ರಾಜ್ಯಗಳ ವಿಸ್ತಾರವನ್ನು ಕುಗ್ಗಿಸುತ್ತಾನೆ. ಹೆಂಜೇರಿನ ಸುತ್ತ ಮುತ್ತ ಇದ್ದ ನೊಳಂಬಳಿಗೆ–೧೦೦೦ ರಾಜ್ಯವನ್ನು ಉತ್ತರದಲ್ಲಿ ಚಿತ್ರದುರ್ಗ ಜಿಲ್ಲೆ, ದಕ್ಷಿಣದಲ್ಲಿ ಈಗಿನ ಧರ್ಮಪುರಿಯವರೆಗೂ ವಿಸ್ತರಿಸುತ್ತಾನೆ. ಗಂಗ ರಾಜಕುಮಾರಿಯ ಮಗನಾಗಿ, ಗಂಗ ರಾಜಕುಮಾರಿ ಗಾಮಬ್ಬೆಯನ್ನು ಮದುವೆಯಾದ ನೆಪವನ್ನು ಮುಂದಿಟ್ಟುಕೊಂಡು ಗಂಗ ಸಾಮ್ರಾಜ್ಯದ ಉತ್ತರಾಧಿಕಾರಿಯಾಗಲು ಹವಣಿಸಿದ, ತಲಕಾಡಿನ ಮೇಲೆಯೂ ಸೈನ್ಯವನ್ನು ನಡೆಸುತ್ತಾನೆ (ನುಗ್ಗಿಸುತ್ತಾನೆ). ಆದರೆ ಮುಂದೆ ಇದೇ ಘಟನೆ ಗಂಗ ಮತ್ತು ನೊಳಂಬರ ದ್ವೇಷಕ್ಕೂ ಕಾರಣವಾಗುತ್ತದೆ. ಗಂಗ ರಾಜರಲ್ಲಿ ತಂದೆ ಮಕ್ಕಳು

ಒಟ್ಟಿಗೆ ರಾಜ್ಯಭಾರ ಮಾಡಿದಂತೆ ಈ ವಂಶದಲ್ಲಿ ಮಹೇಂದ್ರ ಮತ್ತು ಅವನ ಮಗ ಅಯ್ಯಪದೇವ ಇಬ್ಬರೂ ಒಟ್ಟಿಗೆ ರಾಜ್ಯಭಾರ ಮಾಡುತ್ತಾರೆ. ಆರಂಭದಲ್ಲಿ ಬಾಣರಾಜ, ಪೃಥ್ವೀಪತಿ (ಗಂಗ) ಮೊದಲಾದವರನ್ನು ಸೋಲಿಸಲು ಗಂಗ ನೊಳಂಬರು ಸಂಯುಕ್ತದಂಡಿನ ಪ್ರಯೋಜನ ಪಡೆದು ಸೋರೆಮಡಿ ಮುಂತಾದ ಸ್ಥಳಗಳಲ್ಲಿ ನಡೆದ ಕಾಳಗದಲ್ಲಿ ಬಾಣರನ್ನು ಸೋಲಿಸುತ್ತಾರೆ. ಆದರೆ ಮುಂದೆ ಮಹೇಂದ್ರ ಅವರ (ಗಂಗರ) ವಿರುದ್ದವೇ ? ನಿಲ್ಲುತ್ತಾನೆ. ಕ್ರಿ.ಶ. ಸುಮಾರು ೮೮೦ ರ ಭಯ್ಯಪಲ್ಲಿ ಶಾಸನ ಪ್ರಕಾರ, ನೊಳಂಬಮಯ್ಯುದ್ದಮರಸ (ನೋಳಂಬ ಮಯುದಮರಸ)? ನ ದಯೆಯಿಂದ ಕಿರುತೊರೆಯನ್ನು (ತುಂಗಭದ್ರೆ) ? (ಉತ್ತರ ಪೆನ್ನಾರ್) ಗಡಿಯನ್ನಾಗಿಸಿಕೊಂಡು ಚೋಳ ಪೆರ್ಮಾನಡಿ ಮತ್ತು ವೈದುಂಬ ಮಯಿನ್ದ ರಾಜ್ಯವಾಳುತ್ತಿರುತ್ತಾರೆ. ನಿಡುಗಲ್ಲಿನ ಚೋಳರನ್ನು ಸೋಲಿಸಿದ ಮೇಲೆ ನಿಡುಗಲ್ಲ ಬೆಟ್ಟದಲ್ಲಿ ತನ್ನ ತಂದೆ ಹೆಸರಿನಲ್ಲಿ ಬಿದಿಚೋರರಸ ದೇವಾಲಯವನ್ನು ಕಟ್ಟಿಸಿದ.

ಮಹೇಂದ್ರ ರಾಜನಾಗಿದ್ದಾಗ ನಡೆದ ಯುದ್ಧಗಳಲ್ಲಿ ಸೋರೆಮಡಿ, ಮುದಿಮದುವು, ಮಾನ್ದಾವು ಮುಂತಾದ ಕಡೆ ನಡೆದ ಯುದ್ಧ ದೊಡ್ಡದು, ಬಾಣ, ವೈದುಂಬ, ಪಲ್ಲವರ ದಂಡಿನ ಮೇಲೆ ನಡೆದ ಯುದ್ಧ ಇದಾಗಿದೆ. ಇದು ಎರಡು ಬಣಗಳು ಸಂಯುಕ್ತವಾಗಿ ಸಂಯೋಜಿಸಿದ್ದ ಯುದ್ಧ. ನೊಳಂಬ ಮಹೇಂದ್ರ, ಗಂಗ ಇಮ್ಮಡಿ ರಾಚಮಲ್ಲ, ಮೆಯಿನ್ದಡಿ, ದಡಿಗರು ಸೇರಿ ವೈದುಂಬ ಪ್ರಭು ಚೆಲ್ವ ಮಹಾರಾಜ (ಗಂಡ ತ್ರಿನೇತ್ರ ಮಹಾರಾಜ) ಒಂದನೆಯ ಬಾಣ ವಿದ್ಯಾಧರ ವಿಕ್ರಮಾದಿತ್ಯ ಜಯಮೇರುವಿನ ವಿರುದ್ಧ ಹೋರಾಡುತ್ತಾರೆ.

ಈ ಯುದ್ಧವು ಮಹೇಂದ್ರನು ಪಟ್ಟಕ್ಕೆ ಬಂದ ಹೊಸದರಲ್ಲಿ ನಡೆದಿರಬೇಕು. ಏಕೆಂದರೆ ಮುಂದೆ ಇವನು ಗಂಗರ ವಿರುದ್ಧ ತಿರುಗಿ ಬೀಳುವನು. ಸುಮಾರು ಕ್ರಿ.ಶ. ೮೮೫ ರಲ್ಲಿ ಈ ಯುದ್ಧ ನಡೆದಿರಬೇಕು. ಪುಲಿನಾಡು ಇವನ ಪಾಲಾಗುತ್ತದೆ. ಈ ಮಹೇಂದ್ರನು ಗಂಗ ಎರೆಯಪ್ಪನಿಂದ ಹತನಾಗಿರಬೇಕು ಇದಕ್ಕೆ ಕಾರಣ ಎರೆಯಪ್ಪನಿಗಿದ್ದ ಮಹೇಂದ್ರಾಂತಕ ಎಂಬ ಬಿರುದು. ಮಹೇಂದ್ರನಿಗೆ ತ್ರಿಭುವನ ಧೀರ, ಮಹಾವಲಿಕುಲ ವಿಧ್ವಂಸನ ಎಂಬ ಬಿರುದುಗಳಿದ್ದಂತೆ ಶಾಸನಗಳಿಂದ ತಿಳಿಯುತ್ತದೆ.

**ಅಯ್ಯಪದೇವ**

ಒಂದನೆಯ ಮಹೇಂದ್ರನಿಗೆ ಬರಗೂರು ಶಾಸನದಲ್ಲಿ ಉಲ್ಲೇಖಿತವಾಗಿರುವ ಬಿಜ್ಜ ಮಹಾದೇವಿ, ಪರಮ ಮಹಾದೇವಿ, ಅಕ್ಕಬ್ಬೆ ಮತ್ತು ದೊಂಬಬ್ಬೆ ಎಂಬ ನಾಲ್ಕು ಜನ ಪತ್ನಿಯರಲ್ಲದೆ ಗಂಗವಂಶದ ಗಾಮಬ್ಬೆ ಎಂಬ ಅಗ್ರಮಹಿಷಿಯು ಇದ್ದಳು. ಈಕೆಯ ಹೊಟ್ಟೆಯಲ್ಲಿ ಹುಟ್ಟಿದವನೇ ಅಯ್ಯಪದೇವ.

ಅಯ್ಯಪದೇವನು ತನ್ನ ತಂದೆ ರಾಜ್ಯವಾಳುತ್ತಿದ್ದಾಗ ಕ್ರಿ.ಶ. ೮೯೯ ರ ಶಾಸನದಲ್ಲಿ ತಾನೂ ರಾಜ್ಯವಾಳುತ್ತಿದ್ದಂತೆ ಹೇಳಿದೆ. ಆ ಶಾಸನದಲ್ಲಿಯೇ ಇವನನ್ನು ಪಂಚಮಹಾಶಬ್ದ, ಪಲ್ಲವಾನ್ವಯ ಕುಲತಿಲಕ ಕಾಂಚೀಪುರವರೇಶ್ವರ ... ಪ್ರಚಂಡ ದಕ್ಷಿಣ ದಂಡ ದಂಡಾಧಿಪಮಂಡಳ ಮುಂತಾಗಿ ಕರೆಯಲಾಗಿದೆ.[71] ಕ್ರಿ.ಶ. ೮೯೮ ರ ಶಾಸನದಲ್ಲಿ ಏಕವಾಕ್ಯ ನೋಳಿಪಯ್ಯ ಎಂಬುವನು ರಾಜ್ಯವಾಳುತ್ತಿದ್ದಂತೆ ಹೇಳಿದೆ. ಈ ನೋಳಿಪಯ್ಯನನ್ನು ಕೃಷ್ಣಮೂರ್ತಿಯವರು ಅಯ್ಯಪದೇವನಿಗೆ ಸಮೀಕರಿಸುತ್ತಾರೆ. ಒಂದೆರಡು ಶಾಸನಗಳಲ್ಲಿ ಇರಿವನೊಳಂಬ ನೊಳಿಪಯ್ಯ ಎಂದು ಅಯ್ಯಪದೇವನನ್ನು ಕರೆದಿದೆ. ಸುಮಾರು ಕ್ರಿ.ಶ. ೯೦೦ ರ ಚಲ್ಲಂಪಟ್ಟಿ ಶಾಸನದಲ್ಲಿ ಅಯ್ಯಪನ ಕಾಲದಲ್ಲಿ ನೊಳಂಬರು ತಗಡೂರ ಬಳಿಯ ಮಾಲ್ಯೆಕುನ್ರೂರಿಗೆ ಮುತ್ತಿಗೆ ಹಾಕಿದಾಗ ಗಂಗ ಶಿವಮಾರನ ಮಗನಾದ ಗಂಗ ಪೃಥ್ವೀಪತಿಯು ಬಾಣರಾಜರ ಪರವಾಗಿ ಈ ಮುತ್ತಿಗೆಯನ್ನು ತಡೆಯುತ್ತಾನೆ.[72] ಈ ಯುದ್ಧದಲ್ಲಿ ಅಯ್ಯಪನ ಮಗ ಪೊಲವೀರನು ಭಾಗವಹಿಸಿರುತ್ತಾನೆ. ಈ ಯುದ್ಧವು ಮುಮ್ಮಡಿ ರಾಚಮಲ್ಲನ ಕಾಲದಲ್ಲಿ ನಡೆಯಿತೆಂದು ಶಿವಣ್ಣ ಅವರು ಅಭಿಪ್ರಾಯಪಡುತ್ತಾರೆ. ಆದರೆ ಈ ಯುದ್ಧವು ಇಮ್ಮಡಿ ರಾಚಮಲ್ಲನ ಅಂತ್ಯಕಾಲದಲ್ಲಿ ನಡೆದಿದೆ. ಈ ಪೊಲವೀರನು ಮುಂದೆ ಮುರಿಗೆಪ್ಪಾಡಿಯಲ್ಲಿ ಬಾಣರ ಮೇಲೆ ನಡೆದ ಯುದ್ಧದಲ್ಲಿ ಸಾಯುತ್ತಾನೆ.[73] ಸುಮಾರು ಇದೇ ಕಾಲದ ಮೊದಕೇರಿಯ ಶಾಸನದಲ್ಲಿ ರಾಚಮಲ್ಲ ಪೆರ್ಮಾನಡಿಯ ಮಗಳ ಮಗನೆಂದು ಇವನನ್ನು ಕರೆಯಲಾಗಿದೆ. ಇಲ್ಲಿ ಉಕ್ತನಾಗಿರುವ ರಾಚಮಲ್ಲ ಇಮ್ಮಡಿ ರಾಚಮಲ್ಲನಿರಬಹುದು.[74] ಕ್ರಿ.ಶ.ಸು. ೯೦೦ ಅರಕೆರೆ ಶಾಸನದಲ್ಲಿ ಗಂಗರಾಚಮಲ್ಲನು ರಾಜ್ಯಭಾರ ಮಾಡುತ್ತಿದ್ದಾಗ ನೀತಿಮಾರ್ಗನು ಸಮಸ್ತರಾಜ್ಯವನ್ನು ಆಳುತ್ತಿದ್ದಾಗ ಬಲಿ ವಂಶದವನೊಬ್ಬ ಅಸಂದಿನಾಡನ್ನು ಆಳುತ್ತಿದ್ದು, ಆಗ ನೊಳಂಬನ ದಂಡು ಆ ಪ್ರಾಂತ್ಯವನ್ನು ಮುತ್ತಿದಂತೆ ಉಲ್ಲೇಖವಿದೆ.[75] ಮುಗಳವಳ್ಳಿ ಗ್ರಾಮದ ಶಾಸನದಲ್ಲಿಯೂ ಅಯ್ಯಪನು ಅಸಂದಿನಾಡಿನ ಬಳಿಯ ಕಣಿಕಟ್ಟೆಯಲ್ಲಿ ಯುದ್ಧ ಮಾಡಿದ ಉಲ್ಲೇಖವಿದೆ.[76] ಸುಮಾರು ಇದೇ ಕಾಲದಲ್ಲಿ ಬೇಗೂರು ಶಾಸನದಲ್ಲಿ ಎರೆಯಪ್ಪರಸನು ಹಗೆಗಳನ್ನೆಲ್ಲಾ ನಾಶಮಾಡಿ ಗಂಗವಾಡಿ-೯೬೦೦೦ ವನ್ನು ಏಕಛತ್ರವನ್ನಾಗಿ ಆಳುತ್ತಿದ್ದಾಗ ಬೀರಮಹೇಂದ್ರನ ಸಂಗಡ ಯುದ್ಧ ಮಾಡಲು ಅಯ್ಯಪದೇವನಿಗೆ ಸಾಮಂತ ಸಹಿತವಾಗಿ ದಂಡು ಕಳುಹಿಸಿದಾಗ ತುಂಬೆಪಾಡಿಯಲ್ಲಿ ಕಾದಾಡಿದಂತೆ ತಿಳಿಯುತ್ತದೆ. ಫ್ಲೀಟರು ಈ ಮಹೇಂದ್ರನನ್ನು ಚಾಳುಕ್ಯ ಒಂದನೆಂಯ ಅಮ್ಮ ಎಂದಿದ್ದಾರೆ. ದೇವರಕೊಂಡಾರೆಡ್ಡಿಯವರು ನೊಳಂಬರಿಗೂ ಗಂಗರಿಗೂ ನಡೆದ ಯುದ್ಧದಲ್ಲಿ ಅಯ್ಯಪದೇವನ ವಿರುದ್ಧ ನಾಗತ್ತರನು ಹೋರಾಡಿ ಮಡಿದನೆಂದಿರುತ್ತಾರೆ. ಈ ಯುದ್ಧದಲ್ಲಿ ಗಂಗರಿಗೇ ಜಯವಾಗಿರಬೇಕು.[77] ಇದೇ ವಿಷಯವನ್ನು ತಿಳಿಸಬಹುದಾದ ಶಾಸನವೊಂದು ದೊರೆತಿದ್ದು ಅದರಲ್ಲಿ ನೊಳಂಬನ ಆನೆಯ ಮುಂದೆ ಹೋರಾಡಿ ಗಂಗರ ಕಡೆಯ ವ್ಯಕ್ತಿಯೊಬ್ಬ ಸತ್ತ ವಿಷಯವಿದೆ. ತುಂಬೆಪಾಡಿ ಯುದ್ಧ ಕ್ರಿ.ಶ.ಸು ೯೦೦ ರಲ್ಲಿ ನಡೆದಿರಬಹುದೆಂದು ದೇವರಕೊಂಡಾರೆಡ್ಡಿಯವರು

ಹೇಳಿದ್ದಾರೆ. ರೈಸರು ಬೇಗೂರು ಶಾಸನದ ಕಾಲವನ್ನು ಕ್ರಿ.ಶ.ಸು ೮೯೦ ಎಂದಿರುತ್ತಾರೆ. ಆದರೂ ಘಟನಾವಳಿಗಳ ದೃಷ್ಟಿಯಿಂದ ಎರೆಯಪ್ಪ ರಾಜನಾಗಿ ಪ್ರಭಾವಶಾಲಿಯಾದ ಮೇಲೆ ಮಹೇಂದ್ರನು ಬದುಕಿದ್ದಾಗ ಈ ಯುದ್ಧ ನಡೆದಿರಬೇಕು. ಹೀಗಾಗಿ ಇದರ ಕಾಲವನ್ನು ಕ್ರಿ.ಶ. ಸು.೯೦೦ ಎಂದು ಹೇಳಬಹುದೆನಿಸುತ್ತದೆ.

ಕ್ರಿ.ಶ.ಸು. ೯೧೦ ರಲ್ಲಿ ಅಯ್ಯಪನು ತಗಡೂರು ಪ್ರದೇಶವನ್ನು ತನ್ನ ಹಿಡಿತದಲ್ಲಿರಿಸಿ ಕೊಂಡಿರುತ್ತಾನೆ.[78] ಧರ್ಮಪುರಿಯ ಶಾಸನವೊಂದರಲ್ಲಿ[79] ಅಯ್ಯಪನು ಬೂದುಗೂರನ್ನು ಪುನರ್ಧಾರೆಯಾಗಿ ನಿಧಿಯಣ್ಣನ ಬಸದಿಗೆ ನೀಡುತ್ತಾನೆ. ಅಯ್ಯಪದೇವನಿಗೂ ಎರೆಯಪ್ಪನಿಗೂ ನವಿಲೂರ ಬಳಿ ಯುದ್ಧವಾದಂತೆ ತಿಳಿಸುತ್ತದೆ. ಎರೆಯಪನ 'ಪರಿಪನ್ಥಿ' ಬಂತೆಂದು ಹೇಳಿದೆ. ಕ್ರಿ.ಶ.೯೧೯ ರ ಶಾಸನದಲ್ಲಿ ಅಯ್ಯಪದೇವನು ಸ್ವತಂತ್ರವಾಗಿ ರಾಜ್ಯಭಾರ ಮಾಡುತ್ತಿದ್ದ ವಿವರವಿದ್ದು, ಇದರಲ್ಲಿ ಇವನನ್ನು ಸಮಧಿಗತ ಪಂಞ್ಚಮಹಾಶಬ್ದ ಪಲ್ಲವಾತ್ಮಯಂ ನನ್ನಿಗಾಶ್ರಯಂ ಶ್ರೀಮತು ಅಯ್ಯಪದೇವ ಎಂದು ಕರೆದಿದೆ.[80] ಇದೇ ಕಾಲದ ಬರಗೂರು ಶಾಸನದಲ್ಲಿ ಸೂರ್ಯಗ್ರಹಣದ ದಿನ ತನ್ನ ಪತ್ನಿಯರಾದ ನಾಗಿಯಬ್ಬೆ, ಹೆಲೆಯಬ್ಬೆ ಇವರ ಕೋರಿಕೆ ಮೇರೆಗೆ ನಾಗಿಯಬ್ಬೆಯ ತಾಯಿ ನಾರಣಬ್ಬೆ ಕಟ್ಟಿಸಿದ ಕೆರೆಯ ಎರಡೂ ತೂಬುಗಳ ಮಧ್ಯೆ ಇರುವ ೩೦ ಗುಳ ಗದ್ದೆಯನ್ನು ದಾನವಾಗಿ ನೀಡುತ್ತಾನೆ.[81] ಮನೆಪಲ್ಲಿ ಎಂಬಲ್ಲಿನ ಶಾಸನದಲ್ಲಿ ಅಯ್ಯಪನಲ್ಲಿ ಶ್ರೀಪುರುಸಯ್ಯನ ಮಗ ಚೋರಯ್ಯ ಎಂಬುವನು ಕೆರೆಗೆ 'ಬಿತ್ತುವಟ್ಟ' ಪಡೆಯುತ್ತಾನೆ.[82] ಇದರಲ್ಲಿ ಕಾಲದ ಉಲ್ಲೇಖವಿಲ್ಲ.

ಕ್ರಿ.ಶ.ಸು.೯೨೦ ರ ಹೆಬಟ ಗ್ರಾಮದ ಶಾಸನದಲ್ಲಿ ಭಾವಶಿವ ಎಂಬುವನು ತಪಸ್ಸು ಮಾಡುತ್ತಿದ್ದಾಗ ಪೆರ್ಬ್ಬಟದಲ್ಲಿ ತುರುಗಾಳಿಗವಾಗುತ್ತದೆ. ಭಾವಶಿವ ತಪರಾಜ್ಯಂಗೆಯ್ಯೆ ಎಂದಿರುವುದರಿಂದ ಈ ಪ್ರದೇಶ ಈ ಮುನಿಗೆ ಸೇರಿತ್ತು. ಇಂತಹ ಸಂಪ್ರದಾಯ ಮುಂದೆ ಅವನಿಯಲ್ಲಿ ಮುಂದುವರಿಯುತ್ತದೆ.[83] ಹುಲಿಕುಂದದ ಶಾಸನದಲ್ಲಿ ತುರುಗಾಳಗದ ಉಲ್ಲೇಖವಿದೆ.[84] ಕಾಲದ ಉಲ್ಲೇಖವಿಲ್ಲದ ಮುಷ್ಟೂರು ಶಾಸನದಲ್ಲಿ ಅಯ್ಯಪದೇವನು ನೊಳಂಬವಾಡಿ–೩೨೦೦೦ ಪ್ರದೇಶವನ್ನು ಆಳುತ್ತಿದ್ದಂತೆಯೂ ಅವನ ಮಗ ಅಣ್ಣಯ್ಯನೂ ಈ ಪ್ರದೇಶವನ್ನು ಆಳುತ್ತಿದ್ದಂತೆ ಹೇಳಿದೆ.[85] ಇದೇ ಅರಸ ಅಣ್ಣಿಗನು ಕ್ರಿ.ಶ.೯೨೨ ರಲ್ಲಿ ಕದಂಬವಂಶದ ಕಣ್ಣವಾರನ ರಾಜ್ಯದ ಮೇಲೆ ಧಾಳಿ ಮಾಡಿದಾಗ ಮಾಳಯ್ಯನೆಂಬುವನು ಹೋರಾಡಿ ಸತ್ತಂತೆ ಹೇಳಿದೆ. ಈ ಶಾಸನದಲ್ಲಿ ರಾಷ್ಟ್ರಕೂಟ ನಿತ್ಯವರ್ಷನು ಆಳುತ್ತಿದ್ದಾಗ ಈ ಘಟನೆ ನಡೆದಿದೆ. ಇದು ಅಧಿರಾಜರನ್ನು ಧಿಕ್ಕರಿಸಿ ಮಾಂಡಲೀಕರು ತಮ್ಮ ತಮ್ಮಲ್ಲೇ ಬಡಿದಾಡುತ್ತಿದ್ದುದನ್ನು ತೋರಿಸುತ್ತದೆ.[86] ಈ ಘಟನೆಯನ್ನು ಕೃಷ್ಣಮೂರ್ತಿಯವರು ಅಯ್ಯಪನು ರಾಷ್ಟ್ರಕೂಟರ ಮೇಲೆ ಯುದ್ಧ ಮಾಡಿದನೆಂದು ಹೇಳಿದ್ದಾರೆ. ಆದರೆ ಅಯ್ಯಪ ರಾಷ್ಟ್ರಕೂಟರ ಸಾಮಂತರಾದ ಕದಂಬರ ಮೇಲೆ ಯುದ್ಧ ಮಾಡಿದ್ದು. ಸಾಮಂತ–ಸಾಮಂತರೊಳಗಿನ

ಯುದ್ಧ ಹೊಸದೇನಲ್ಲ. ಧರ್ಮಪುರಿಯ ಕ್ರಿ.ಶ.೯೫೯ರ ಶಾಸನದಲ್ಲಿ ಅಯ್ಯಪದೇವನು ಗಂಗವಂಶದ ರಾಜಕುಮಾರಿ ಪೊಲ್ಲಬ್ಬರಸಿಂಯುನ್ನು, ಚಳುಕಿಂಯುರ ವಂಶದ ಅತ್ತಿಂಯುಬ್ಬರಸಿಂಯುನ್ನು ಮದುವೆಯಾಗಿದ್ದಂತೆ ತಿಳಿಸುತ್ತದೆ. ಪೊಲ್ಲಬ್ಬರಸಿಯ ಮಗ ಅಣ್ಣಿಗನೆಂದೂ, ಅತ್ತಿಯಬ್ಬರಸಿಯ ಮಗ ಇರುಳಚೋರನೆಂದೂ ಹೇಳಿದೆ.[87] ಕ್ರಿ.ಶ.೯೩೧ ರ ಶಾಸನದಲ್ಲಿ ಅಯ್ಯಪದೇವನು ರಾಷ್ಟ್ರಕೂಟ ಗೋವಿಂದನ ಆಳ್ವಿಕೆಯಲ್ಲಿದ್ದು ಮಾಸವಾಡಿ, ಕೋಗಳಿನಾಡನ್ನು ಆಳುತ್ತಿದ್ದನೆಂದು ಹೇಳಿದೆ.[88] ಅದೇ ವರ್ಷದ ಮಾದಿಗೆರೆ ಶಾಸನದಲ್ಲಿ ಅಯ್ಯಪನ ಹೆಸರಿಲ್ಲ. ಆದರೆ ನೊಳಂಬಾಧಿರಾಜನೆಂದು ಕರೆಯಲಾಗಿದೆ. ಇವನು ದುಷ್ಟನಿಗ್ರಹ ವಿಶಿಷ್ಟಪರಿಪಾಲನ ದಲ್ಲಿದ್ದನೆಂದು ಹೇಳಿದೆ.

ಮಹೇಂದ್ರನ ಶಾಸನಗಳಂತೆ ಅಯ್ಯಪದೇವನ ಶಾಸನಗಳಲ್ಲಿ ಬಹಳಷ್ಟು ಶಾಸನಗಳು ಕಾಲವನ್ನೊಳಗೊಂಡಿಲ್ಲ. ಅಯ್ಯಪನು ತನ್ನ ತಂದೆಯ ಕಾಲದಲ್ಲಿಯೇ ಜೊತೆಯಾಗಿ ರಾಜ್ಯಭಾರ ಮಾಡಿದರೂ ಕ್ರಿ.ಶ. ೯೦೧ ರಿಂದ ಇವನು ಪಟ್ಟಕ್ಕೆ ಬಂದಿರಬೇಕು.

ಗಂಗ ನೀತಿಮಾರ್ಗನು ಪಟ್ಟಕ್ಕೆ ಬಂದು ಪ್ರಭಾವಶಾಲಿಯಾದ ಕೂಡಲೇ ನೊಳಂಬರ ಮೇಲೆ ಯುದ್ಧ ಸಾರಿದ. ಇದರಿಂದ ನೊಳಂಬ ಸಾಮ್ರಾಜ್ಯ ಅಲುಗಾಡುವಂತಾಗಿ, ರಾಜ್ಯದ ಅನೇಕ ಭಾಗಗಳನ್ನು ಕಳೆದು ಕೊಳ್ಳಬೇಕಾಯಿತು. ನೊಳಂಬರ ವೈರಿಗಳಾದ ಬಾಣರ ಕಡೆಯವರನ್ನು ಗಂಗರು ಗಂಗವಾಡಿಯಲ್ಲಿ ಮಾಂಡಲೀಕರನ್ನಾಗಿ ನೇಮಿಸಿರುತ್ತಾರೆ. ಅಯ್ಯಪದೇವನೂ ಕಳೆದು ಹೋದ ರಾಜ್ಯವನ್ನು ಸಂಪಾದಿಸಲು ಅಸಂದಿನಾಡು, ಸೂರೂರು, ನಂದಗಿರಿ, ಮಿಡಿಗೇಸಿ, ತಿಪ್ಪೇರು, ಪೆಂಜೇರು ಮುಂತಾದ ಸ್ಥಳಗಳನ್ನು ವಶಪಡಿಸಿಕೊಳ್ಳಲು ಗಂಗರೊಡನೆ ಹೋರಾಡಿದ. ಗಂಗರು ತಮಗೆ ನಿಷ್ಠರಾದ ನೊಳಂಬ ವಂಶದವರನ್ನು ಮಾಂಡಲೀಕರನ್ನಾಗಿ ಕೆಲವು ಸ್ಥಳಗಳಲ್ಲಿ ನೇಮಿಸಿದ್ದರು. ನೊಳಂಬ ಶಿವಮಾರ (?) ಇಂತಹವರಲ್ಲಿ ಒಬ್ಬ. ಈತ ಮೊರಸುನಾಡನ್ನು ಆಳುತ್ತಿದ್ದ. ತುಂಬೆಪಾಡಿ ಯುದ್ದಕ್ಕೆ ಮೊದಲು ಅಯ್ಯಪದೇವನು ಗಂಗರಾಜಕುವರಿ ಪೊಲ್ಲಬ್ಬರಿಸಿಯನ್ನು ಮದುವೆಯಾಗಿದ್ದ. ಈಕೆ ಯಾರ ಮಗಳೆಂಬುದು ಸ್ಪಷ್ಟವಿಲ್ಲ. ಕೃಷ್ಣಮೂರ್ತಿಯವರು ಅಯ್ಯಪನು ಗಂಗರೊಡನೆ ಸೌಹಾರ್ದಯುತ ಸಂಬಂಧ ಹೊಂದಿದ್ದನೆಂದು ಹೇಳಿರುತ್ತಾರೆ. ಆದರೆ ಅದು ಸರಿಯಲ್ಲ. ಗಂಗ ನೊಳಂಬರ ವೈರ ಹಾಗೆಯೇ ಮುಂದುವರಿಯುತ್ತದೆ. ಅಂದರೆ ಸೀಮಿತವಾದ ಸಂಬಂಧಗಳು ಮಾತ್ರ ಉಳಿದಿರುತ್ತದೆ. ಹೀಗಾಗಿ ಮುಂದಿನ ಹಂತದಲ್ಲಿ ಕೆಲವು ಕಾಲ ಎರಡೂ ರಾಜ್ಯಗಳ ಗಡಿಗಳು ಹಾಗೆಯೇ ಇರುತ್ತವೆ.

ಸ್ಪಷ್ಟವಾದ ಕಾಲದ ಉಲ್ಲೇಖವಿರುವ ಅಯ್ಯಪನ ಶಾಸನಗಳು ದೊರೆಯುವುದು ಕಡಿಮೆ. ಹೀಗಾಗಿ ಇವನ ಕಾಲಘಟ್ಟದಲ್ಲಾದ ಘಟನೆಗಳನ್ನು ಒಂದಾದ ಮೇಲೊಂದರಂತೆ ಹೇಳುವುದು ಕಷ್ಟ. ಕ್ರಿ.ಶ. ೮೯೯ ರಿಂದ ಕ್ರಿ.ಶ. ೯೩೧ ರ ವರೆಗೆ ಇವನ ಶಾಸನಗಳು ದೊರೆಯುತ್ತವೆ.

ಅಯ್ಯಪದೇವನಿಗೆ ನಾಲ್ಕು ಜನ ಮಕ್ಕಳು. ಅಣ್ಣಿಗ ಬೀರನೊಳಂಬ, ಏಕವಾಕ್ಯ ಇರಿವ ನೊಳಂಬ ದಿಲೀಪ, ಮಯ್ದುನೊಲಿಪ, ಅಂಕಯ್ಯ ಎಂಬುವವರು. ಅಂಕಯ್ಯನು ರಾಜ್ಯವಾಳಿರುವಂತೆ ತಿಳಿಯುವುದಿಲ್ಲ. ಇವನು ಬಹುಶಃ ತುಂಬೆಪಾಡಿಯಲ್ಲಿ ಗಂಗರಿಗೂ ನೊಳಂಬರಿಗೂ ನಡೆದ ಯುದ್ಧದಲ್ಲಿ ಸತ್ತಿರಬೇಕು. ತುಂಬಾಡಿಯ ಶಾಸನವೊಂದರಲ್ಲಿ ಅಂಕಯ್ಯನ ಆಜ್ಞೆಯಂತೆ ದುರ್ವಿನೀತನ (ಗಂಗ ಅರಸ) ಮುಂದೆ ಪೊನ್ನಿಗ ಎಂಬ ವೀರ ಕಾದಾಡಿ ಬಿದಿರೂರಲ್ಲಿ ಸತ್ತಂತೆ ಹೇಳಿದೆ.[89] ಇನ್ನೊಂದು ಶಾಸನದಲ್ಲಿ ಪೆಮ್ಮಡಿ (ಗಂಗ ಅರಸ) ಆಜ್ಞೆಯಂತೆ ಇಂದ್ರನು ದಂಡೆತ್ತಿ ಬಂದು ಗಳಂಜನೂರು ಮುತ್ತಿದಾಗ[90] ಅಂಕಯ್ಯ, ಮಾರಮ ಮುಂತಾದವರು ಸತ್ತಂತೆ ಹೇಳಿದೆ. ಈ ಗಳಂಜನೂರು ಬೇಗೂರು ಶಾಸನದಲ್ಲಿ ಬಂದಿರುವ ಗಳಂಜನೂರು ಆಗಿರುವುದರಿಂದ ನೊಳಂಬರು ಗಂಗವಾಡಿ ಮೇಲೆ ದಂಡೆತ್ತಿ ಬಂದಾಗ ಈ ಯುದ್ಧ ಸಂಭವಿಸಿರಬಹುದು. ಈ ಯುದ್ಧದಲ್ಲಿ ಸತ್ತಿರುವ ವೀರರಲ್ಲಿ ಅಂಕಯ್ಯನು, ನೊಳಂಬ ನೊಲಿಪಯ್ಯನ ಮಗ ಅಂಕಯ್ಯನಿರಬಹುದು. ಶಾಸನದಲ್ಲಿ ಇವನನ್ನು ಮಯ್ದುನೊಲಿಪಯ್ಯನ ಮಗ ಎಂದು ಕರೆದಿರುವುದರಿಂದ ಈ ಮಯ್ದುನೊಲಿಪ ಎಂಬ ಹೆಸರು ಅಯ್ಯಪದೇವನಿಗೆ ಇದ್ದುದರಿಂದ ಇವನು ಅಯ್ಯಪನ ಮಗ ಎಂದು ಗುರುತಿಸಬಹುದಾಗಿದೆ.

**ಅಣ್ಣಿಗ ಬೀರನೊಳಂಬ**

ಅಯ್ಯಪದೇವನ ನಂತರ ನೊಳಂಬ ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗಿ ಅಣ್ಣಿಗ ಬೀರನೊಳಂಬನು ಪಟ್ಟಕ್ಕೆ ಬರುತ್ತಾನೆ. ಇವನು ಗಂಗ ರಾಜಕುಮಾರಿ ಪೊಲ್ಲಬ್ಬರಸಿಯ ಮಗ. ಅಯ್ಯಪದೇವನಿಗೆ ಪೊಲ್ಲಬ್ಬರಸಿಯಲ್ಲದೆ ನಾಗಿಯಬ್ಬೆ ಮತ್ತು ಹೆಳೆಯಬ್ಬೆ ಎಂಬ ಇನ್ನಿಬ್ಬರು ಪತ್ನಿಯರಿದ್ದುದನ್ನು ಹಿಂದೆಯೇ ಹೇಳಲಾಗಿದೆ.

ಬೀರನೊಳಂಬನು ಅಯ್ಯಪದೇವನ ಆಳ್ವಿಕೆಯಲ್ಲಿಯೇ ಪ್ರಿಥ್ವೀವಲ್ಲಭ, ಪಲ್ಲವ ಕುಲತಿಲಕ, ಶ್ರೀಮನ್ನೊಳಂಬಾಧಿರಾಜ ಅಣ್ಣಿಗ ಎಂದು ಕರೆದುಕೊಂಡಿದ್ದಾನೆ. ತಂದೆಯ ಆಳ್ವಿಕೆಯಲ್ಲಿ ನಡೆದ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದ. ಕ್ರಿ.ಶ. ೯೨೨ ರ ಶಾಸನವೇ ಈತನ ಕಾಲದ ಉಲ್ಲೇಖವಿರುವ ಮೊದಲ ಶಾಸನ. ಕಡಬಗೆರೆ ಶಾಸನದಲ್ಲಿ ಇವನು ರಾಷ್ಟ್ರಕೂಟರ ಸಾಮನ್ತನಾದ ಕದಂಬ ವಂಶದ ಅರಸನ ಮೇಲೆ ರಾಜ್ಯದ ಉತ್ತರದಿಕ್ಕಿನಲ್ಲಿ ಯುದ್ಧ ಮಾಡುತ್ತಾನೆ.[91] ಮುಂದೆ ಕಾಲದ ಉಲ್ಲೇಖವಿಲ್ಲದ ಇವನ ಶಾಸನಗಳು ದೊರೆತಿದ್ದು ಅವು ತಗಡೂರಿನಿಂದ ಹಿಡಿದು ಉತ್ತರದಲ್ಲಿ ಕಡಬಗೆರೆಯುವರೆಗೆ ಹಬ್ಬಿವೆ. ನವಿಲೆಯ ಶಾಸನವೊಂದರಲ್ಲಿ ಇವನ ಉಲ್ಲೇಖವಿದೆ.[92] ಕ್ರಿ.ಶ.ಸು. ೯೨೫ ರ ಶಾಸನದಲ್ಲಿ ಬೀರನೊಳಂಬ ಆಳುತ್ತಿದ್ದಾಗ ಗೊಗ್ಗಿಯೆಂಬುವನು ಊರಳಿವಿನಲ್ಲಿ ಸಾಯುತ್ತಾನೆ.[93] ಧರ್ಮಪುರಿ ಜಿಲ್ಲೆಯ ವಡಮಂಗಲಂ, ವೇಲನ್‌ಪಟ್ಟ, ಸಿಂಗೇರಿಪಟ್ಟಿ ಮುಂತಾದ ಗ್ರಾಮಗಳಲ್ಲಿ ದೊರೆತಿರುವ ಶಾಸನಗಳು ತುರುಗೊಳನ್ನು ಉಲ್ಲೇಖಿಸುತ್ತವೆ.[94] ಇದು ಈ ಪ್ರದೇಶದಲ್ಲಿನ ಅಸ್ಥಿರತೆಯನ್ನು ತಿಳಿಸುತ್ತದೆ. ಮಡಿವಾಳ ಗ್ರಾಮದ ಶಾಸನದಲ್ಲಿ ಬೀರನೊಳಂಬನ

ಕಾಲದಲ್ಲಿ ಸಾನ್ತರನ ಮೇಲೆ ನಡೆದ ಯುದ್ಧವನ್ನು ದಾಖಲಿಸಿದೆ. ಅಣ್ಣಿಗನೇ ಸಾನ್ತರನ ಮೇಲೆ ಯುದ್ಧಕ್ಕೆ ಹೋದಂತೆ ಸೂಚಿಸಿರುವುದರಿಂದಲೂ, ಸಾನ್ತರರು ಗಂಗರ ಹಿತೈಷಿಗಳಾದ್ದರಿಂದ ಇವರ ಮೇಲೆ ಯುದ್ಧ ಮಾಡಿರುವುದು ಸಹಜವೇ ಆಗಿದೆ.[95] ನಾಡೂರು ಶಾಸನದಲ್ಲಿ ತುಱುಗಾಳೆಗದಲ್ಲಿ ದಿಲೀಪ, ನರಸಿಂಗ ಎಂಬುವವರು ಸತ್ತಂತೆ ಹೇಳಿದೆ.[96] ಈ ದಿಲೀಪ, ನೊಳಂಬ ದಿಲೀಪನಾಗಿರಲಾರ. ಏಕೆಂದರೆ ಅವನು ಅಣ್ಣಿಗನ ನಂತರವೂ ಬದುಕಿದ್ದ. ಮುದಲೋಡಿನ ಮೂರು ವೀರಗಲ್ಲುಗಳು ತುಱುಗಾಳೆಗದ ವಿವರವನ್ನು ನೀಡುತ್ತವೆ.[97] ಕ್ಯಾಲನೂರು ಗ್ರಾಮದ ಶಾಸನದಲ್ಲಿ ವತ್ಸಗೋತ್ರದ ಕೆಲವು ಬ್ರಾಹ್ಮಣರಿಗೆ ದಾನ ನೀಡಿದಂತೆ ಹೇಳಿದೆ.[98] ಆವನಿಯ ಲಕ್ಷ್ಮಣೇಶ್ವರ ದೇವಾಲಯದಲ್ಲಿ ಈ ಬೀರನೊಳಂಬನ ಹೆಸರಿರುವುದರಿಂದ ಆ ದೇವಾಲಯಗಳ ರಚನೆಯಲ್ಲಿ ಇವನ ಪಾತ್ರವೂ ಇದ್ದಿರಬೇಕು.[99] ಹಿರೇಬಿದನೂರು ಶಾಸನದಲ್ಲಿ ಬೀರನೊಳಂಬನು ಆಳುತ್ತಿದ್ದಾಗ ಪೃಥ್ವೀಪತಿ ಗಂಗನ ಮಗ ನನ್ನಿಯಗಂಗನು ಶಾಂತರರನ್ನು ತಾಗಿದಂತೆ ಹೇಳಿದೆ. ಬಹುಶ: ಈ ಯುದ್ಧದಲ್ಲಿ ನನ್ನಿಯಗಂಗ ಸತ್ತಂತೆ ತಿಳಿಯುತ್ತದೆ. ಸಾಯುವ ಮುನ್ನ ವೈರಿಯಾದ ಶಾಂತರನನ್ನು ಸಾಯಿಸಿ ಅವನ ತಲೆ ಮತ್ತು ಒರೆ (ಕತ್ತಿ ಇಡುವ ಸಾಧನ)ಯನ್ನು ಬೀರನೊಳಂಬನಿಗೆ ತಂದುಕೊಟ್ಟಂತೆ ಹೇಳಿದೆ.[100] ಸಾಯ್ಗೊಂಡನಹಳ್ಳಿಯ ಶಾಸನವು ಅಸ್ಪಷ್ಟವಾಗಿದ್ದು ತನ್ನ ತಂದೆಯ ತಲೆಯನ್ನು ತೆಗೆದುಕೊಂಡರೆಂದು ಊರಱುವಿನಲ್ಲಿ ಪೆಣ್ಡಿರುಡೆಯುರ್ಚಿದ ಘಟನೆ ನಡೆದಿದ್ದನ್ನು ತಿಳಿಸುತ್ತದ.[101] ಕಾಲದ ಉಲ್ಲೇಖವಿರುವ ಕ್ರಿ.ಶ. ೯೩೧ರ ಶಾಸನದಲ್ಲಿ ಬೀರನೊಳಂಬನು ಕೊಮರಮಂಗಲದ ಬ್ರಾಹ್ಮಣರು ಕುರುಂಬೂರ ೧೦೮ ಮಹಾಜನರಿಗೆ ೧೫ ಗದ್ಯಾಣ ಹೊನ್ನನ್ನು ನೀಡಿದ ಉಲ್ಲೇಖವಿದೆ. ಅದೇ ಗ್ರಾಮದ ಇನ್ನೊಂದು ಶಾಸನದಲ್ಲಿ ನಾಗಮಯ್ಯನ ಇನ್ನಿಬ್ಬರು ಮಕ್ಕಳು ಕುರುಂಬೂರ ೧೦೮ ಮಹಾಜನರಿಗೆ ೧೫ ಗದ್ಯಾಣ ಹೊನ್ನನ್ನು ನೀಡಿದಂತೆ ಹೇಳಿದೆ.[102]

ಧರ್ಮಪುರಿ ಪ್ರದೇಶಕ್ಕೆ ಸೇರಿದ ಚಿನ್ನಗವುಡನಪಟ್ಟಿ ಶಾಸನದಲ್ಲಿ ಬೀರನೊಳಂಬನ ೧೫ನೆಯ ವರಿಷದಲ್ಲಿ ಪುಳಿಯಣ್ಣ ಎಂಬುವನ ಮಗ ನವಿಲೂರಿನಲ್ಲಿ ನಡೆದ ಪೆಂಡಿರುಡೆಯನ್ನು ಎದುರಿಸಿ ಸಾಯುತ್ತಾನೆ.[103] ಅದೇ ಪ್ರದೇಶದಲ್ಲಿ ಸುಮಾರು ಅದೇ ಕಾಲದಲ್ಲಿ ತುಱುಗಾಳೆಗ ನಡೆಯುತ್ತದೆ.[104] ಶಿವಾರಪಟ್ಟಣದ ಶಾಸನದಲ್ಲಿಯೂ ಈ ಬೀರನೊಳಂಬನು ಆಳುತ್ತಿದ್ದಾಗ ಮೆಣ್ಡಿಮಂಗಲದ ಮಹಾಜನರಿಗೆ ೧೬ ಗದ್ಯಾಣ ಹೊನ್ನನ್ನು ಕೊಟ್ಟ ಉಲ್ಲೇಖವಿದೆ.[105] ಹೆಬ್ಬಟದ ಶಾಸನದಲ್ಲಿ ಹೆಬ್ಬಟದ ಸ್ಥಾನವನ್ನು ಆಚಾರ್ಯರೊಬ್ಬರು ಆಳುತ್ತಿದ್ದಂತೆ ಹೇಳಿದೆ.[106] ಮರಲೆ ಗ್ರಾಮದ ಶಾಸನದಲ್ಲಿ ಸಾಮನ್ತರಾಮ, ನನ್ನಿ ಕನ್ದರ್ಪ ಎಂಬುವವನು ಸಿರಿವುರದ ಯುದ್ಧದಲ್ಲಿ ಹೋರಾಡಿ ಸತ್ತಂತೆ ಹೇಳಿದೆ. ಶಾಸನೋಕ್ತ ಅರಕೆಲ್ಲನನ್ನು ಎಂ.ಎ.ಆರ್. ನ ಸಂಪಾದಕರು ರಾಷ್ಟ್ರಕೂಟ ರಾಜನಿರಬೇಕೆಂಬ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ. ಹಾಗೆಯೇ ಶಾಸನದಲ್ಲಿ ಪೊಯ್ಸಳ ಮಾರುಗನ ಹೆಸರನ್ನು ಹೇಳುತ್ತದೆ.[107] ಈ ಮಾರುಗನ ಕಾಲವನ್ನು ಆರ್.ನರಸಿಂಹಾಚಾರ್ ಅವರು

ಕ್ರಿ.ಶ.ಸು. ೯೫೦ ಎಂದು ನಿಗದಿಪಡಿಸಿದ್ದಾರೆ. ಆದರೆ ಶಾಸನದಲ್ಲಿ ಸ್ಪಷ್ಟವಾಗಿ ಅಣ್ಣಿಗ ಎಂದು ಉಲ್ಲೇಖವಿರುವುದರಿಂದ ಇದರ ಕಾಲವನ್ನು ನಾವು ಕ್ರಿ.ಶ.ಸು. ೯೩೫ ಕ್ಕೆ ನಿಗದಿಪಡಿಸಬಹುದಾಗಿದೆ.

ಸಾದಲಿಯ ಶಾಸನದಲ್ಲಿ ಅಣ್ಣಿಗನು ಆಳುತ್ತಿದ್ದಾಗ ವೀರನೊಬ್ಬ ಸತ್ತಂತೆ ತಿಳಿಸುತ್ತದೆ.[108] ಶಾಸನೋಕ್ತ ಕಾಲವು ಕ್ರಿ.ಶ. ೯೩೬ ಆಗಿದ್ದು ಬೀರನೊಳಂಬನಣ್ಣಯ್ಯದೇವನ ರಾಜ್ಯಾಡಳಿತದ ಉಲ್ಲೇಖವಿದೆ. ಇದರ ನಂತರ ಇವನ ಕಾಲವನ್ನು ಸೂಚಿಸುವ ಶಾಸನಗಳು ನಮಗೆ ದೊರೆತಿಲ್ಲ. ಈ ಶಾಸನದಲ್ಲಿ ಪುಳಿವಾಳ, ಬಾಳ ಗ್ರಾಮದ ನೊಳಂಬೇಶ್ವರದ ಸ್ಥಾನವನ್ನು ವರುಣಶಿವಭಟಾರನು ಆಳುತ್ತಿದ್ದು, ವರುಣಶಿವಭಟಾರನ ನೇತೃತ್ವದಲ್ಲಿ ಈ ಊರಿನವರು ಕೆರೆಗೆ ಬಿತ್ತುವಟ್ಟವನ್ನು ನೀಡಿರುತ್ತಾರೆ.[109] ಹಿರೇಗುಂಡಗಲ್ಲಿನ ವೀರಗಲ್ಲೊಂದರಲ್ಲಿ 'ಶ್ರೀಅಣಿಗನ್' ಎಂಬ ಉಲ್ಲೇಖ ಬಂದಿದ್ದು, ಈ ಅಣ್ಣಿಗನನ್ನು ಶಾಸನ ಸಂಪಾದಕರು ಅಯ್ಯಪನ ಮಗನೆಂದು ಊಹಿಸಿರುತ್ತಾರೆ. ಆದರೆ ಹಿರೇಗುಂಡಗಲ್ಲಿನ ಇತರ ಶಾಸನಗಳ ಆಧಾರದಿಂದ ಇವನ ಕಾಲವು ಕ್ರಿ.ಶ. ಸು ೮೦೦ ಕ್ಕೆ ಸೇರುತ್ತದೆ. ಆದ್ದರಿಂದ ಇವನು ನೊಳಂಬ ಅಣ್ಣಿಗನಲ್ಲ.

ಕೂಡ್ಲೂರು ತಾಮ್ರಶಾಸನದಲ್ಲಿ ಗಂಗರಾಜ ಮುಮ್ಮಡಿ ರಾಚಮಲ್ಲನು ಅಣ್ಣಿಗನನ್ನು ಕೊತ್ತಮಂಗಲದ ಯುದ್ಧದಲ್ಲಿ ಸೋಲಿಸಿದನೆಂದು ಹೇಳಿದೆ.[110]

ಕ್ರಿ.ಶ.೯೪೦ರ ಶಾಸನವೊಂದರಲ್ಲಿ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನು ಬೀರನೊಳಂಬ ಅಣ್ಣಿಗನನ್ನು ಸೋಲಿಸಿದಂತೆ ಹೇಳಿರುವುದರಿಂದ[111] ಇವನು ಕ್ರಿ.ಶ.ಸು. ೯೪೦ ರ ವರೆಗೆ ಬದುಕಿದ್ದು ರಾಜ್ಯವಾಳಿರಬೇಕು. ಇದರ ನಂತರ ಇವನ ಶಾಸನಗಳು ಮತ್ತು ಆಳ್ವಿಕೆಯ ಕುರುಹುಗಳು ದೊರೆಯುವುದಿಲ್ಲ.

ಅಣ್ಣಿಗನು ತಂದೆ ಅಯ್ಯಪನ ಜೊತೆಯಲ್ಲಿ ಆಡಳಿತ ನಡೆಸಿ ಸಾಕಷ್ಟು ಯುದ್ಧಗಳಲ್ಲಿ ಭಾಗವಹಿಸಿ ಪರಿಣಿತಿ ಮತ್ತು ಅನುಭವವನ್ನು ಪಡೆದುಕೊಂಡಿದ್ದನು. ತಂದೆಯ ನಂತರ ಪಟ್ಟಕ್ಕೆ ಬಂದು ಸ್ವತಂತ್ರವಾಗಿ ಆಳ್ವಿಕೆ ನಡೆಸಿದ ಕಾಲ ಕ್ರಿ.ಶ.೯೨೨ ರಿಂದ ಕ್ರಿ.ಶ.೯೪೦ ರ ವರಗೆ ಅಂದರೆ ಸುಮಾರು ೧೮ ವರ್ಷಗಳು ಆಳ್ವಿಕೆ ನಡೆಸಿದ್ದಾನೆ.

**ಇಱುಳ್ಚೋರ/ಇರುಳ ಚೋರ**

ಅಣ್ಣಿಗ ಬೀರನೊಳಂಬನ ನಂತರ ಇವನ ಸೋದರ ಒಂದನೆಯ ಇರಿವನೊಳಂಬ ದಿಲೀಪನು ಉತ್ತರಾಧಿಕಾರಿಯಾಗಿ ಬಂದ. ಅಣ್ಣಿಗ ಬೀರನೊಳಂಬನಿಗೆ ಇರುಳ್ಚೋರನೆಂಬ ಮಗನಿದ್ದರೂ ವಂಶಪಾರಂಪರಾಗತವಾಗಿ ಅವನೇ ಪಟ್ಟವೇರಬೇಕಾಗಿತ್ತು. ಆದರೆ ಮೊದಲಿನಿಂದ ನೊಳಂಬ ಅರಸರಲ್ಲಿ ಒಡೆತನಕ್ಕಾಗಿ ಅಥವಾ ಸಿಂಹಾಸನಕ್ಕಾಗಿ ಹೋರಾಟ ಅಥವಾ ಕಚ್ಚಾಟವಾಗಲಿ ನಡೆದಿರುವುದು ಎಲ್ಲಿಯೂ ಕಂಡುಬಂದಿಲ್ಲ ಮತ್ತು ತಿಳಿದುಬಂದಿಲ್ಲ. ಹೀಗಿರುವಾಗ ಇವನು

ಸಿಂಹಾಸನದ ಒಡೆತನಕ್ಕೆ ಬಾರದಿರುವುದಕ್ಕೆ ಕಾರಣವನ್ನು ಗತಕಾಲದ ಇತಿಹಾಸದಲ್ಲಿ ಹುಡುಕಾಟ ನಡೆಸುವುದಕ್ಕೆ ಬದಲು ಇವನೂ ಸಹ ಅವರ ರಾಜ್ಯಕ್ಕೆ ಸೇರಿದ ಯಾವುದೋ ಒಂದು ಭಾಗದಲ್ಲಿ ಆಳ್ವಿಕೆ ನಡೆಸುತ್ತಿದ್ದಿರಬೇಕು. ಅದು ಯಾವುದಿರಬಹುದು ಎಂಬ ಹುಡುಕಾಟ ನಡೆಸಿದಾಗ ಸಿಕ್ಕಿರುವ ಮೂರು ಶಾಸನಗಳು ಇಱುಳ್ಚೋರನು ಸಹಾ ಆಳ್ವಿಕೆ ನಡೆಸಿರುವುದಕ್ಕೆ ಆಧಾರ ಸಿಕ್ಕುತ್ತದೆ.

ಶಕ ೮೫೧ ನೆಯ/ಕ್ರಿ.ಶ. ೯೨೯ ಕ್ಕೆ ಸೇರಿದ ಧರ್ಮಪುರಿಯ ಒಂದು ಶಾಸನದಲ್ಲಿ ಇವನ ಪೂರ್ವಜರ ವಂಶಾವಳಿಯ ಉಲ್ಲೇಖದಿಂದ ಆರಂಭವಾಗುವ 'ಪಲ್ಲವಾನ್ವಯಾಯ ವಿಜಿತ ಚತುರಸ್ತ ಮಹೀಮಂಡಳ ಶ್ರೀ ಪಲ್ಲವಾಧಿರಾಜಖ ಮಗ ನವನತ ಸಮಸ್ತ ಸಾಮನ್ತ' ಇತ್ಯಾದಿಯಾಗಿ ಹೇಳಿ ವಂಶವೃಕ್ಷವನ್ನು ಉಲ್ಲೇಖಿಸಿದೆ. ಅದರಲ್ಲಿ ಮಹೇಂದ್ರಾಧಿರಾಜ ಮತ್ತು ಗಾಮಬ್ಬೆಗೆ ಹುಟ್ಟಿದವನು ಅಯ್ಯಪದೇವ ಮತ್ತು ಪೊಲ್ಲಬ್ಬರಸಿಗೆ ಮಗನಾಗಿ ಅಣ್ಣಿಗನು ಹುಟ್ಟಿದ. ಅಣ್ಣಿಗನ ಪತ್ನಿ ಚಾಳುಕ್ಯ ವಂಶದ ಅತ್ತಿಯಬ್ಬರಸಿ. ಇವರ ಮಗ ಸಮಧಿಗತ ಪಞ್ಚಮಹಾ ಶಬ್ದ ಪಲ್ಲವಾನ್ವಯ ಶ್ರೀಪೃಥ್ವೀವಲ್ಲಭ ಪಲ್ಲವ ಕುಲತಿಲಕ ಇಱುಳ್ಚೋರನವರೆಗೆ ಇದೆ. ಇವನು ಈಗಿನ ಧರ್ಮಪುರಿಯ ಬಳಿ ಆಳ್ವಿಕೆ ನಡೆಸುತ್ತಿದ್ದಂತೆ ಶಾಸನದಿಂದ ತಿಳಿಯಬಹುದಾಗಿದೆ.[112]

ಅದೇ ಜಿಲ್ಲೆಯ ಕೊಳಗತ್ತೂರು ಗ್ರಾಮದ ಕಾಲದ ಉಲ್ಲೇಖವಿಲ್ಲದ ಶಾಸನದಲ್ಲಿ ಹೆಚ್ಚಿನ ಅಂಶ ತ್ರುಟಿತವಾಗಿದ್ದರೂ ಪೊಳಲ್ಚೋರನಿಂದ ಚೋರನವರೆಗೆ ವಂಶದ ವಿವರವನ್ನು ಉಲ್ಲೇಖಿಸಿದೆ. ಪೊಳಲ್ಚೋರ ಅವನ ಮಗ ಮಹೇಂದ್ರ, ಅವನ ಮಗ ಅಯ್ಯಪದೇವ, ಅವನ ಮಗ ಚೋರ ಪ್ರಿತಿವೀ ರಾಜ್ಯವಾಳುತ್ತಿರುವಾಗ ದಾನ ಕೊಟ್ಟ ವಿಷಯ ಉಲ್ಲೇಖಿತವಾಗಿದೆ. ಇಲ್ಲಿ ಹೆಸರಿಸಿರುವ ಚೋರನನ್ನು ಇರುಳಚೋರನೆಂದು ತಿಳಿಯಬಹುದು. ಇಲ್ಲಿ ಅಯ್ಯಪದೇವನ ಮಗ ಅಣ್ಣಿಗ ಬೀರನೊಳಂಬ, ಅವನ ಮಗ ಇರುಳಚೋರ. ಆದರೆ ಶಾಸನದ ನಡುವೆ ಅಕ್ಷರಗಳು ತ್ರುಟಿತವಾಗಿರುವುದರಿಂದ ಬಹುಶಃ ಅಣ್ಣಿಗನ ಹೆಸರು ತಪ್ಪಿಹೋಗಿದೆ. ಈ ಶಾಸನದಲ್ಲಿ ಒಂದನೆಯ ಮಹೇಂದ್ರನು ಗಂಗಮಂಡಳ-೯೬೦೦೦ ವನ್ನು ಆಳುತ್ತಿದ್ದಂತೆ ಉಲ್ಲೇಖಿತವಾಗಿದೆ.[113] ನಂಬಿಹಳ್ಳಿಯ ಕಾಲದ ಉಲ್ಲೇಖವಿಲ್ಲದ ಶಾಸನದಲ್ಲಿ ಚೋರಯ್ಯನ ಕಾಲದಲ್ಲಿ ಎರೆಯಗಾವುಂಡನು ತುರುಗಾಳೆಗ, ಪೆಣ್ಡಿರುಡೆಯುರ್ಚುವಲ್ಲಿ ಸತ್ತವನಿಗೆ ಕಲ್ಲು ನೆಡಿಸಿದ ವಿಷಯ ತಿಳಿಸಿದೆ.[114] ಚೋರಯ ನೇರವಾಗಿ ರಾಜ್ಯವಾಳದಿದ್ದರೂ ತಂದೆಯ ಕೈಕೆಳಗೆ ಸಾಮಂತನಾಗಿ ರಾಜ್ಯವಾಳಿರಬಹುದು.

### ಏಕವಾಕ್ಯ ಇಱುವನೊಳಂಬ ಒಂದನೆಯ ದಿಲೀಪ

ಇಱುವನೊಳಂಬ ಒಂದನೆಯ ದಿಲೀಪನು ಮೊದಲನೆಯ ಅಯ್ಯಪದೇವನ ಮಗ ಮತ್ತು ಅಣ್ಣಿಗ ಬೀರನೊಳಂಬನ ಕಿರಿಯ ಸೋದರ. ಇಱುವನೊಳಂಬ ಒಂದನೆಯ ದಿಲೀಪನು ಬೀರನೊಳಂಬನ ಉತ್ತರಾಧಿಕಾರಿಯಾಗಿ ಕ್ರಿ.ಶ.ಸು.೯೪೦-೪೧ ರಲ್ಲಿ ಪಟ್ಟಕ್ಕೆ ಬಂದನು. ಇವನ

ಮೊದಲ ಶಾಸನ ಕ್ರಿ.ಶ.೯೪೨ ರ ಹೇಮಾವತಿಯ ಶಾಸನ. ರಾಷ್ಟ್ರಕೂಟ ಮುಮ್ಮಡಿ ಕೃಷ್ಣನಿಂದ ಬೀರನೊಳಂಬ ಅಣ್ಣಿಗನು ಸೋತ ಮೇಲೆ ರಾಷ್ಟ್ರಕೂಟರ ಸಾಮಂತರಾಗಿ ಇವರು ಮುಂದುವರಿದರು.

ಕೋಲಾರ ಜಿಲ್ಲೆ, ಬೌರಿಂಗ್‌ಪೇಟೆ ತಾಲೂಕು, ಬೇತಮಂಗಲದ ಕ್ರಿ.ಶ.ಸು. ೯೨೦ ರಲ್ಲಿ 'ಏಕವಾಕ್ಯ ಶಿಮದಿಜುವ ನೊಟಿಮ್ಬಾಧಿ ರಾಜ ನೊಲಿಪಯ್ಯನವೆಸದೊಳ್ ವಿಜಯಾದಿತ್ಯ ಮಙ್ಗಲ'ದ (ಈಗಿನ ಬೇತಮಂಗಲ) ಪಿರಿಯಕೆರೆಯನ್ನು ಜೀರ್ಣೋದ್ಧಾರ ಮಾಡಿದ ಉಲ್ಲೇಖವಿದೆ. ಈ ಶಾಸನದಿಂದ ವೈದುಂಬರು ಪಲ್ಲವರ ಸಾಮಂತರಾಗಿದ್ದರೆಂಬ ಸಂಗತಿ ತಿಳಿಯುತ್ತದೆ. ಈ ವೈದುಂಬರನ್ನು ಸ್ವಸ್ತ್ಯನೇಕ ಸಮರ ಸಂಘಟ್ಟನೋಪಲಬ್ದ ವಿಜಯಲಕ್ಷ್ಮಿ ಸಮಾಲಿಂಗಿತ ವಿಶಾಲವಕ್ಷ ಸ್ಥಲ...ಮದಕರಿಮಲ್ಲ ವೈದುಮ್ಬ ಶಿಖಾಮಣಿ ಎಂದು ಕರೆದಿದೆ.[115]

ಹೇಮಾವತಿಯ ಕ್ರಿ.ಶ. ೯೪೨ ರ ಶಾಸನದಲ್ಲಿ ದಿಲೀಪನು ರಾಜ್ಯವಾಳುತ್ತಿದ್ದಾಗ ನನ್ನೇಶ್ವರದೇವರ್ಗ್ಗೆ ಪಿರಿಯಬಾಣಗೆಱೆಯನ್ನು ಉತ್ತರಾಯಣ ಸಂಕ್ರಾನ್ತಿಯಲ್ಲಿ ವಕ್ಖಾಣಿಭಟಾರರ ಶಿಷ್ಯ ಚೆಲ್ಲುಕಭಟಾರರ ಕಾಲನ್ನು ತೊಳೆದು ದಾನ ನೀಡಿದ ಉಲ್ಲೇಖವಿದೆ. ಈ ಶಾಸನದಲ್ಲಿ ನೊಳಂಬರ ವಂಶಾವಳಿಯನ್ನು ಈಶ್ವರನಿಂದ ಪ್ರಾರಂಭಿಸಿದೆ.




ಹೀಗೆ ದಿಲೀಪರಸನ ಕಾಲಕ್ಕೆ ಮುಗಿಸಿದೆ.[116] ಕ್ರಿ.ಶ.ಸು. ೯೪೫ ರ ಕೊಂಡಹಳ್ಳಿ ಗ್ರಾಮದ ಶಾಸನದಲ್ಲಿ ನೆಕ್ಕುನ್ದಿನಾಡ 'ಊರಾಳಿಯ ದೇವ ಭೋಗತೋರೋವೆಲ್ಲ ಸಲ್ಲುದು' ಕೆರೆಗೆ ದಾನ

ಕೊಟ್ಟದ್ದನ್ನು ಹೇಳುತ್ತದೆ.[117] ಇರಿವನೊಳಂಬ ದಿಲೀಪನು ಕೃಷ್ಣನ ಮಿತ್ರನಾಗಿ ರಾಷ್ಟ್ರಕೂಟರೊಡನೆ ಚೋಳರ ಮೇಲೆ ಯುದ್ಧ ನಡೆಸಿದನು. ಮುಮ್ಮಡಿ ಕೃಷ್ಣನ ಸಾಮಂತನಾಗಿದ್ದ ನೊಳಂಬ ದಿಲೀಪರಸನೂ ಈ ಯುದ್ಧದಲ್ಲಿ ಪಾಲ್ಗೊಂಡಿದ್ದ ಸಂಗತಿಯನ್ನು ಮಡಕಸಿರಾ ಶಾಸನದಲ್ಲಿ ಉಲ್ಲೇಖಿಸಿದೆ. ಅಲ್ಲದೆ ತನ್ನ ಜೀವಿತದ ಕೊನೆಯವರೆಗೂ ರಾಷ್ಟ್ರಕೂಟರೊಡನೆ ಸ್ನೇಹದಿಂದ ಇದ್ದನು. ಗಜಾಂಕುಸ ಚೋಳನ ಮೇಲೆ ನಡೆದ ಯುದ್ಧದಲ್ಲಿ ಪೊನ್ನಯ್ಯ ಎಂಬುವವನು ಕಾದಾಡಿ ಸಾಯುತ್ತಾನೆ.  ಈ ವೀರನನ್ನು 'ಮೂವತ್ತಿಚ್ಚಾಸಿರದ ಬಿಲ್ಲವೆಲ್ಗಂಡ' ಎಂದು ಕರೆಯಲಾಗಿದೆ.[118] ಯುದ್ಧ ನಡೆದ ಸ್ಥಳ ಇಪಿಲಿ. ಈ ಶಾಸನದಲ್ಲಿ ಯುದ್ಧ ನಡೆದ ಕಾಲವನ್ನು ಶಕ ೮೭೦ ಕೀಲಕವೆಂದಿದ್ದು ಇದು ಕ್ರಿ.ಶ. ೯೪೮ ಕ್ಕೆ ಸರಿಹೊಂದುತ್ತದೆ. ಆದರೆ ಆತಕೂರು ಶಾಸನದಲ್ಲಿ ಶಕವರ್ಷ ೮೭೨ ಎಂದಿದ್ದು ಇದು ಕ್ರಿ.ಶ. ೯೫೦ ಆಗುತ್ತದೆ. ಹೀಗಾಗಿ ಈ ಶಾಸನವು ಗಜಾಂಕಸ ಚೋಳ ಅಥವಾ ರಾಜಾಧಿತ್ಯ ಚೋಳನ ಮೇಲೆ ಕ್ರಿ.ಶ. ೯೪೮ ರಲ್ಲಿ ಈ ಯುದ್ಧ ಮುಗಿದಿತ್ತೆಂಬ ಅಂಶ ತಿಳಿಯುತ್ತದೆ. ಹಾಗೂ ನೊಳಂಬರೂ ಈ ಯುದ್ಧದಲ್ಲಿ ಪಾಲ್ಗೊಂಡಿದ್ದರೆಂಬ ವಿಷಯವೂ ಸ್ಪಷ್ಟವಾಗುತ್ತದೆ. ಚೋಳರ ದಂಡು ಬಿಜಯಿತಮಂಗಲದಲ್ಲಿ ಬಂದಿದ್ದಂತೆಯೂ, ನೊಳಂಬನ ದಂಡಿನ ಮೇಲೆ ಯುದ್ಧ ಮಾಡಿದಂತೆಯೂ ಉಲ್ಲೇಖವಿದೆ. ಬಹುಶ: ಇದೂ ಈ ತಕ್ಕೋಲಂ ಯುದ್ಧದ ಮೊದಲ ದಿನಗಳಲ್ಲಿ ನಡೆದ ಯುದ್ಧವಿರಬಹುದು.[119]

ಇದೇ ಕಾಲಕ್ಕೆ ಸೇರಿದ ಕಾವತ್ತನಹಳ್ಳಿಯ ಶಾಸನದಲ್ಲಿ ಊರಳಿವಿನಲ್ಲಿ ಹೋರಾಡಿ ಸತ್ತ ವಿಷಯವನ್ನು ಹೇಳುತ್ತದೆ.[120] ಇದೇ ಕಾಲದ ಕಲ್ಲಂದೂರು ಶಾಸನವೊಂದರಲ್ಲಿ ಇರಿವನೊಳಂಬ ರಾಜ್ಯವಾಳುತ್ತಿದ್ದುದನ್ನು ಹೇಳುತ್ತದೆ.[121]

ಶಕ.೮೭೨/ಕ್ರಿ.ಶ.೯೫೦-೯೫೧ ರ ಮಡಕಶಿರಾ ಶಾಸನದಲ್ಲಿ ದಿಲೀಪನು ಆಳುತ್ತಿದ್ದಾಗ ಚೆರಪಿ ಹನ್ನೆರಡನ್ನು ನೋಡಿಕೊಳ್ಳುತ್ತಿದ್ದ ಮಲ್ಲಪ ಸಿವರಿಯು ಕಾಡಿಯಣ್ಣನಿಗೆ ಮತ್ತು ಪಳ್ಳಿಕಾರ ತುವಣ್ಣನಿಗೆ ದಾನ ನೀಡಿದ ಉಲ್ಲೇಖವಿದೆ.[122] ಕುರುಬೂರು ಶಾಸನದಲ್ಲಿ (ಕ್ರಿ.ಶ.೯೫೧) ದಿಲೀಪನು ದುಷ್ಟ ನಿಗ್ರಹ ವಿಶಿಷ್ಟ ಪರಿಪಾಲನ ಮಾಡುತ್ತಿದ್ದಂತೆ ಹೇಳಿದೆ. ಆಗ ರಾಜಮಯ್ಯನ ಮಗ ಭೀಮಯ್ಯ ಭೀಮೇಶ್ವರಕ್ಕೆ ದೇವಭೋಗವನ್ನು, ತಿರುವಯ್ಯನು ಆನೆ ಊರಿನಲ್ಲಿ ದೇವಭೋಗವನ್ನು ನೀಡುತ್ತಾನೆ ಎಂದಿದೆ.[123] ಮುದ್ದಲಹಳ್ಳಿಯ ಕ್ರಿ.ಶ. ೯೫೬ರ ಕಾಲಕ್ಕೆ ಸೇರಿದ ಶಾಸನದಲ್ಲಿ ತುರುಗಾಳೆಗದಲ್ಲಿ ಸತ್ತವನಿಗೆ ದಾನ ನೀಡಿದ ಉಲ್ಲೇಖವಿದೆ. 'ಸುವಗಾದಿತ್ತಂತುಟುವನಿಕ್ಕಿಸಿ' ಸತ್ತವನಿಗೆ ಎಂಬ ವಿಷಯವನ್ನು ಉಲ್ಲೇಖಿಸುತ್ತದೆ.[124]

ಕ್ರಿ.ಶ.೯೫೯-೬೦ ರಲ್ಲಿ ಮಧೂಡಿ ಗ್ರಾಮದ ಶಾಸನದಲ್ಲಿ ಮಹಾಜನರ ಸಾಕ್ಷಿಯಾಗಿ ಕೆಲವು ಸ್ಥಳಗಳನ್ನು ವಿಷ್ಣುದೇವಸ್ಥಾನಕ್ಕೆ ಕೊಡುಗೆ ಕೊಟ್ಟದ್ದನ್ನು ಉಲ್ಲೇಖಿಸುತ್ತದೆ.[125] ಹೊನ್ನೇರಲಿಹಳ್ಳಿಯ

ಕ್ರಿ.ಶ. ೯೬೩ ರ ಶಾಸನದಲ್ಲಿ ಕಳ್ಳರೊಡನೆ ಕಾದಿ ಸತ್ತದ್ದನ್ನು ತಿಳಿಸುತ್ತದೆ.[126] ಕಂಬದೂರಿನ ಕ್ರಿ.ಶ. ೯೬೫ ರ ಶಾಸನದಲ್ಲಿ ಬೆಜ್ಜಿಗುನ್ದೆಯ ಕೆರೆಯ ಬಿತ್ತು ವಾಟಮಂ ಬಿಟ್ಟದ್ದನ್ನು ಉಲ್ಲೇಖಿಸಿದೆ. ಇರಿವನೊಳಂಬನು ರಾಜವಾಳುತ್ತಿದ್ದಾಗ ಅವನ ಹಿರಿಯ ಮಗ ಛಲದಂಕಕಾರ ಇಮ್ಮಡಿ ಪೊಳಲ್ಚೋರನು ದಾನ ಮಾಡಿದ ಉಲ್ಲೇಖವಿದೆ. ಇದರೊಂದಿಗೆ ಪೊಳಲ್ಚೋರನ ಅಮಾತ್ಯ ಚಾವುಂಡಯ್ಯನ ಉಲ್ಲೇಖವಿದ್ದು ಈ ಶಾಸನ ಸ್ತಂಭವನ್ನು ಕೀರ್ತಿ ಯಶಸ್ತಂಭವೆಂದು ಕರೆಯಲಾಗಿದೆ. ಈ ಪೊಳಲ್ಚೋರನನ್ನು ಶಾಸನದಲ್ಲಿ ಪಲ್ಲವಾನ್ವಯ ಶ್ರೀ ಪೃಥ್ವೀವಲ್ಲಭ, ಪಲ್ಲವರಾಮ ಚರಣಕಮಳ ಯುಗಳಾಮೋದ, ಮುದಿತ ಮಧುಕರಾಯಮಾಣ ಕಾಂಚೀಪುರಾಧಿಪತಿ, ವಿಕ್ರಮರಾಮ, ತುರಗವಿದ್ಯಾಧರ ಧಳದಂಕಕಾರ, ರಾಜಮನೋಜ, ದ್ರೋಹ ಚಳಕ್ಕಂ, ಕೊಮರ ವಿಳಾಸ, ತಿಱ್ದಾನೆಮಲ್ಲ, ನೊಳಂಬರ ಭೀಮ, ಪುಸಿಗೆ ಗೊಯ್ಯಂ, ರಾಜ ರಾಜಾಶ್ರಯ...ಎಂಬ ವಿಶೇಷಣಗಳಿಂದ ಹೊಗಳಿದೆ.[127]

ಇದೇ ಕಾಲದ ಅಬ್ಬಿಣಿ ಗ್ರಾಮದ ಕ್ರಿ.ಶ. ೯೬೬ ರ ಶಾಸನವು ಇರಿವನೊಳಂಬ ದಿಲೀಪನನ್ನು ಹೆಸರಿಸಿದೆ.[128] ಉತ್ತನೂರಿನ ಕ್ರಿ.ಶ. ೯೭೧ ರ ಶಾಸನದಲ್ಲಿ ಇರಿವನೊಳಂಬನು ರಾಜ್ಯಭಾರ ಮಾಡುತ್ತಿದ್ದಂತೆ ತಿಳಿಯುತ್ತದೆ. ಸಾಮಾನ್ಯವಾಗಿ ಕ್ರಿ.ಶ. ೯೬೮ ಕ್ಕೆ ಇವನ ಕಾಲ ಮುಗಿಯಿತೆಂದು ಹೇಳಿದ್ದರೂ ಕ್ರಿ.ಶ.೯೭೧ ರಲ್ಲಿ ಇವನು ಆಳುತ್ತಿದ್ದಂತೆ ಹೇಳಿರುವುದರಿಂದ ಕ್ರಿ.ಶ. ೯೭೧ ರ ವರೆಗೆ ಇವನು ಬದುಕಿದ್ದನೆನ್ನಬಹುದು.[129] ಈ ಕಾಲದಲ್ಲಿ ಮಹಾಬಲಿ ವಂಶದ 'ಪರವಿಪುರ ಪರಮೇಶ್ವರನಾಗಿದ್ದ ಸಂಬಯ್ಯ' ಎಂಬುವವನು ಇವನ ಸಾಮಂತನಾಗಿದ್ದ.

ಇರಿವ ನೊಳಂಬ ದಿಲೀಪನ ಬಹಳಷ್ಟು ಶಾಸನಗಳಲ್ಲಿ ಕಾಲದ ಉಲ್ಲೇಖವಿಲ್ಲ. ಹೀಗಾಗಿ ಕೆಲವನ್ನು ಮಾತ್ರ ಸಂಗತಿಗಳನ್ನಾಧರಿಸಿ ಕಾಲ ನಿರ್ಣಯ ಮಾಡಬಹುದು. ಉಳಿದವುಗಳನ್ನು ಅವನ ರಾಜ್ಯಾಡಳಿತದ ಕಾಲದಲ್ಲಿ ಸೇರಿಸಬಹುದು. ಈ ಕಾಲದ ಉಲ್ಲೇಖವಿಲ್ಲದ ಶಾಸನಗಳಲ್ಲಿ ಕೆಲವು ದಾನದ ಉಲ್ಲೇಖವನ್ನು ಹೇಳಿದರೆ ಕೆಲವು ಕೆರೆ ಕಟ್ಟಿಸಿದ ವಿಷಯ ತಿಳಿಸುತ್ತದೆ. ಇವುಗಳಲ್ಲಿ ಮುಖ್ಯವಾಗಿ ತ್ರಿಭುವನ ಕರ್ತಾರ ದೇವನೆಂಬ ಯತಿಯ ಉಲ್ಲೇಖ ಅನೇಕ ಶಾಸನಗಳಲ್ಲಿ ಬಂದಿದೆ. ಈ ತ್ರಿಭುವನ ಕರ್ತಾರನು ಆವನ್ಯದ ಸ್ಥಾನವನ್ನು ಆಳುತ್ತಿದ್ದಂತೆ ಶಾಸನಗಳು ತಿಳಿಸುತ್ತವೆ.[130] ಈ ಆವನ್ಯ (ಆವನಿ)ದ ಎಲ್ಲಾ ಉತ್ಪತ್ತಿಗಳು ಇವನಿಗೆ ಸೇರುತ್ತಿದ್ದಿರಬೇಕು. ಬಹುಶಃ ರಾಜ ಈ ಸ್ಥಾನದ ವಿಷಯದಲ್ಲಿ ತಲೆ ಹಾಕುತ್ತಿರಲಿಲ್ಲ. ಇದಲ್ಲದೆ ಈ ತ್ರಿಭುವನ ಕರ್ತಾರ ಇರಿವನೊಳಂಬ ದಿಲೀಪನ ನಂತರವೂ ಇರುತ್ತಾನೆ. ಒಂದು ಶಾಸನದಲ್ಲಿ ಈತ ಸತ್ತಾಗ ಇವನು ೫೨ ದೇವಾಲಯಗಳನ್ನು, ಎರಡು ದೊಡ್ಡ ಕೆರೆಗಳನ್ನು ತನ್ನ ಜೀವಿತ ಕಾಲದಲ್ಲಿ ಕಟ್ಟಿಸಿದಂತೆ ಹೇಳಿದೆ. ಇವನು ಸತ್ತಾಗ ಇವನ ಶಿಷ್ಯ ಈ ಯತಿಯ ನೆನಪಿನಲ್ಲಿ ಒಂದು ದೇವಾಲಯವನ್ನು ಕಟ್ಟಿಸಿದ. ಇವನು ಆವನ್ಯದಲ್ಲಿ ತಪೋರಾಜ್ಯದಲ್ಲಿದ್ದ ಉಲ್ಲೇಖ ಮಾಡಿದೆ. ಇವನ ಕಾಲದಲ್ಲಿ ಆವನಿಯಲ್ಲಿ

ಗಂಗವಾಡಿ-೯೬೦೦೦ ಮತ್ತು ಬಾಣವಾಡಿ-೧೨೦೦೦ ದ ವ್ಯಾಪಾರಿಗಳೆಲ್ಲಾ ಸೇರಿದ್ದಾಗ ಒಬ್ಬ ಸೆಟ್ಟಿ ಹೊಡೆದಾಡಿ ಸತ್ತಂತೆ ಹೇಳಿದೆ.[131]

ಹೆಬಟ,[132] ಕುರುಬರಹಳ್ಳಿ[133] ಗಾಂಡ್ಲಹಳ್ಳಿ,[134] ಹಿಂದೂಪುರ,[135] ಕೊಂಡಾಹಳ್ಳಿ,[136] ಪುರವರ,[137] ಬರಕ,[138] ಕಲ್ಲೂರು[139] ಮೊದಲಾದ ಶಾಸನಗಳು ಇವನ ಕಾಲದಲ್ಲಿ ಕೆರೆಗಳನ್ನು ಕಟ್ಟಿಸಿ ಬಿತ್ತುವಟ್ಟವನ್ನು ನೀಡಿದ ಉಲ್ಲೇಖಗಳಿವೆ. ಆವನಿ[140] ಶಾಸನದಲ್ಲಿ ಮಾನಸ್ತಂಭ ಮಾಡಿರುವುದನ್ನು ಹೇಳಲಾಗಿದೆ. ಗೊಲ್ಲಾಪುರ[141] ಶಾಸನದಲ್ಲಿ ಬಾಲಸೋಮ ಭಟಾರರಿಗೆ ಪಿರಿಯ ಮೆಳಪಿಯ ಗ್ರಾಮದ ಸಿದ್ಧಾಯ ಬಿಟ್ಟಿರುವುದನ್ನು ಹೇಳುತ್ತದೆ. ಹಾಗೆಯೇ ಅಗಳಿ ಶಾಸನದಲ್ಲಿ[142] ನೊಳಂಬಾದಿರಾಜನ ಕಾಲದಲ್ಲಿ ಬಲ್ಲಹನ (ರಾಷ್ಟ್ರಕೂಟರ) ದಂಡನಾಯಕ ಕೋಟಯ್ಯ ಎಂಬುವನು ವಿಷ್ಣುಗೃಹವನ್ನು ಕಟ್ಟಿಸಿ ದೇವಾಲಯಕ್ಕೆ ದಾನ ನೀಡುತ್ತಾನೆ. ಈ ದಾನವನ್ನು ಅಗಳಿಯ ಇಪ್ಪತ್ತೆರಡು ಜನ ಕಾಪಾಡಬೇಕೆಂದಿದೆ.

ಉಳಿದ ಬಹಳಷ್ಟು ಶಾಸನಗಳು ತುರುಗಾಳೆಗ, ಊರಳಿವು, ಪೆಣ್ಣಿರುಡೆಯುರ್ಚುವ ಶಾಸನಗಳಾಗಿವೆ. ಗೊಲ್ಲರಹಳ್ಳಿ,[143] ಕೋನಪಲ್ಲಿ[144] ಸದುಮುನಹಳ್ಳಿ,[145] ತೇಕಲ್ಲು[146] ಹುಲಿಗುಂದ,[147] ಬಲ್ಲ,[148] ಕುರುಬೂರು,[149] ಆವನಿ,[150] ಹೆಬಟ,[151] ಆವನಿ,[152] ಮಡಿವಾಳ,[153] ಕೊಳಟ್ಟಿ,[154] ಚೋರಪಲ್ಲಿ,[155] ಗೊಲ್ಲಹಳ್ಳಿ,[156] ಕಮ್ಮಸಂದ್ರ,[157] ಕಲ್ಲಂದೂರು,[158] ಕಾವತ್ತನಹಳ್ಳಿ[159] ಮುಂತಾದ ಶಾಸನಗಳು ಸಣ್ಣಪುಟ್ಟ ಕಾಳಗಗಳನ್ನು ಉಲ್ಲೇಖಿಸುತ್ತವೆ.

ನನ್ನಿನೊಳಂಬ

ನನ್ನಿನೊಳಂಬನು ತನ್ನ ತಂದೆಯ ಜೀವಿತ ಕಾಲದಲ್ಲಿಯೇ ಪಟ್ಟಕ್ಕೆ ಬಂದಿರಬೇಕು. ಈ ಬಗ್ಗೆ ಕಂಬದೂರಿನ ಶಾಸನದಲ್ಲಿ ಇರಿವನೊಳಂಬನ ಹಿರಿಯ ಮಗನೆಂದು ಇವನನ್ನು ಕರೆಯಲಾಗಿದೆ. ಇವನು ತನ್ನ ತಂದೆ ಜೀವಂತನಾಗಿರುವಾಗಲೇ ಕೆಲವು ಕಾಲ ರಾಜ್ಯವಾಳಿದಂತೆ ತಿಳಿಯುತ್ತದೆ.

ಮುಂದೆ ಕ್ರಿ.ಶ. ೯೬೯ರಲ್ಲಿ ಇರಿವನೊಳಂಬ ದಿಲೀಪನ ಉತ್ತರಾಧಿಕಾರಿಯಾಗಿ ಛಲದಂಕಕಾರ ನನ್ನಿನೊಳಂಬನು ಪಟ್ಟವೇರಿದ. ಇವನು ಸ್ವತಂತ್ರವಾಗಿ ರಾಜ್ಯವಾಳಿದುದನ್ನು ಕ್ರಿ.ಶ. ೯೬೯ರ ಉತ್ತನೂರಿನ ಶಾಸನದಲ್ಲಿ ಉಲ್ಲೇಖಿತವಾಗಿದೆ. ಈಗಾಗಲೇ ಹೇಳಿರುವಂತೆ ಕಂಬದೂರಿನ ಶಾಸನದಲ್ಲಿ ತನ್ನ ತಂದೆ ಇರಿವನೊಳಂಬನ ಪಾದ ಪಂಕಜ ಭ್ರಮರನೆಂದು ಹೇಳಿಕೊಂಡಿದ್ದಾನೆ.

ಕಾಲದ ಉಲ್ಲೇಖವಿಲ್ಲದ ಕೋಲಾರ ಜಿಲ್ಲೆಯ ಆವನಿಯ ಮಾನಸ್ತಂಭದ ಮೇಲಿರುವ ಶಾಸನದಲ್ಲಿ ಇವನನ್ನು ಛಲದಂಕಕಾರನೆಂದು ಮಂತ್ರಿ ಬಸವಯ್ಯನು ಕರೆದಿದ್ದಾನೆ.[160] ಇದೇ ಶಾಸನದಲ್ಲಿ ಪಲ್ಲವರಾಮ ಬಿರುದಾಂಕಿತ ಇರಿವನೊಳಂಬ ದಿಲೀಪನನ್ನು ಸಾಮಂತ

ಛಲದಂಕಕಾರನೆಂದು ಹೇಳಿದೆ. ಇದರಿಂದ ತಂದೆಯ ಕೈಕೆಳಗೆ ಇವನು ಗಂಗ-೬೦೦೦ ಪ್ರಾಂತ್ಯವನ್ನು ಆಳ್ವಿಕೆ ಮಾಡುತ್ತಿದ್ದುದು ತಿಳಿದು ಬರುತ್ತದೆ.

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕು ಚಿಕ್ಕಮಧುರೆ ಶಾಸನದಲ್ಲಿ 'ಕಟ್ಟಾನೆಮಲ್ಲ ಶ್ರೀಮತ್ ಚಲದಙ್ಕಕಾಱ ಗಙ್ಗರು ಸಾಯಿರಮು ಪಳಿವಗ . ಸುಮನಾಳುತ್ತಿರೆ ದೇಚ ಗಾವುಂಡನ ಮಗ ನೊಱಮ್ಬ ಗಾವುಂಡನು ಗೋಸಾಸನಕೆ ನಟ್ಟ ಕಂಬ್ಬ' ಎಂದಿದೆ.[161]

ಇವನ ತಂದೆ ಇರಿವ ನೊಳಂಬ ದಿಲೀಪನು ಮುಮ್ಮಡಿ ಕೃಷ್ಣನ ಸಾಮಂತನಾಗಿ ಆಳುತ್ತಿದ್ದಾಗ ಕೆಲವು ಪ್ರದೇಶಗಳನ್ನು ತನ್ನ ಆಡಳಿತಕ್ಕೆ ಸೇರಿಸಿಕೊಂಡು ಆಳುತ್ತಿದ್ದನು. ಮುಮ್ಮಡಿ ಕೃಷ್ಣನ ಉತ್ತರಾಧಿಕಾರಿಯಾಗಿ ಬಂದ ಇಂದ್ರನು ಪ್ರಬಲ ಅರಸನಾಗಿರಲಿಲ್ಲ. ಈ ಕಾರಣದಿಂದ ದಿಲೀಪನು ಸ್ವತಂತ್ರನಾಗಿ ಆಳುತ್ತಿದ್ದನೆಂದು ಹೇಳಬಹುದು. ಬಹುಶಃ ಮುಮ್ಮಡಿ ಕೃಷ್ಣ ಮತ್ತು ಇರಿವನೊಳಂಬ ದಿಲೀಪನು ಹೆಚ್ಚು ಕಡಿಮೆ ಒಂದೇ ಕಾಲದಲ್ಲಿ ಸತ್ತಿರಬಹುದು.

ಒಂದನೆಯ ನನ್ನಿನೊಳಂಬ ಮತ್ತು ಗಂಗ ಇಮ್ಮಡಿ ಮಾರಸಿಂಹ ಸಮಕಾಲೀನರು. ಇಮ್ಮಡಿ ಮಾರಸಿಂಹನು ತನ್ನ ತಂದೆ ಇಮ್ಮಡಿ ಬೂತುಗನಂತೆ ರಾಷ್ಟ್ರಕೂಟರ ಸಾಮಂತನಾಗಿ ಉಳಿದ. ಮುಮ್ಮಡಿ ಕೃಷ್ಣನ ಉತ್ತರಾಧಿಕಾರಿಯಾಗಿ ಬಂದ ಇಂದ್ರನಿಗೆ ಸಹಾಯ ಮಾಡಿದುದನ್ನು ಶ್ರವಣಬೆಳಗೊಳ ಶಾಸನ[162] ಹೇಳುತ್ತದೆ. ಇದೇ ಶಾಸನ ಇಮ್ಮಡಿ ಮಾರಸಿಂಹ ನೊಳಂಬರನ್ನು ನಾಶ ಮಾಡಿದುದನ್ನು, ಆನೆಗಳ ಯುದ್ಧದಲ್ಲಿ ನೂರಾರು ರಾಜಕುಮಾರರನ್ನು ಕೊಂದದನ್ನು ತಿಳಿಸುತ್ತದೆ. ಇದರಿಂದ ನನ್ನಿನೊಳಂಬನು ನೊಳಂಬವಾಡಿಯನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಚಾಳುಕ್ಯ ಇಮ್ಮಡಿ ತೈಲಪನ್ನು ಆಶ್ರಯಿಸಿದನು.[163] ಈ ಕಾರಣದಿಂದಲೇ ಛಲದಂಕಕಾರ ನನ್ನಿನೊಳಂಬನ ಶಾಸನಗಳು ಧಾರವಾಡಕ್ಕೆ ಸೇರಿದ ಪ್ರದೇಶಗಳಲ್ಲಿ ದೊರಕಿವೆ.

ಕ್ರಿ.ಶ. ೯೬೮ ರ ಉತ್ತನೂರಿನ ಶಾಸನದಲ್ಲಿ ಇವನಿಗೆ ಪಟ್ಟವಾದಾಗ ನೊಳಂಬಶೆಟ್ಟಿ ಎಂಬುವವನು ಉತ್ತನೂರಿನ ಹನ್ನೆರಡು ಮಹಾಜನರಿಗೆ ನೂರು ಗದ್ಯಾಣ ಹೊನ್ನನ್ನು ನೀಡಿ ನಿತ್ಯವೂ ಐದು ಜನ ಬ್ರಾಹ್ಮರ ಭೋಜನಕ್ಕೆ ಏರ್ಪಾಡು ಮಾಡಿದ ಉಲ್ಲೇಖವಿದೆ.[164] ಕ್ರಿ.ಶ.[೯]೬೮ ಕ್ಕೆ ಸೇರಿದ ಈಚಲಕುಂಟೆ ಶಾಸನದಲ್ಲಿ ನೊಱಂಬರಸನ ಉಲ್ಲೇಖವಿದೆ. ಈ ನೊಳಂಬರಸ ನನ್ನಿ ನೊಳಂಬನೇ ಆಗಿದ್ದಿರಬೇಕು.[165]

ಕ್ರಿ.ಶ. ೯೭೫ ಕ್ಕೆ ಸೇರಿದ ಐಮಂಗಳ ಶಾಸನದಲ್ಲಿ ಏಕವಾಕ್ಯ ಇರಿವನೊಳಂಬ ದಿಲೀಪನ ಮಗ ನನ್ನಿನೊಳಂಬನನ್ನು ಹೆಸರಿಸಿದೆ. ಅವನ ಸಾಮಂತ ಶ್ರೀಮತ್ಪಙ್ಚಲದೇವನ ಪೆರ್ಗ್ಗಡೆ ಗುಣ್ಡಂಯ್ಯನು ಪಡುವಗೆರೆಯು-೩೦೦ ನ್ನು ಭೋಗವತಿಯಾಗಿ ಅಂಯ್ಯಪಮಂಗಲವನ್ನು ಅನುಭವಿಸುತ್ತಿದ್ದಾಗ ಈ ಅಗ್ರಹಾರವನ್ನು ಶತ್ರುಗಳು ಆಕ್ರಮಣ ಮಾಡಿದಂತೆಯೂ ಆಗ ಅದು

ಗುಣ್ಣಯ್ಯನ ಕೈತಪ್ಪುತ್ತದೆ. ಇದನ್ನು ತಿಳಿದ ಮಾರಮಯ್ಯನ ಮಗ ಏಚಯ್ಯ ಶತ್ರುವನ್ನು ಕೊಂದು ಪೆರ್ಗ್ಗಡೆ ಗುಣ್ಣಯ್ಯನಿಗೆ ಅಯ್ಯಪಮಂಗಲವನ್ನು ಪೂರ್ವಮರ್ಯ್ಯಾದೆಯಾಗಿ ಬಿಟ್ಟು ಕೊಟ್ಟ ಉಲ್ಲೇಖವಿದೆ.[166] ಈ ಶಾಸನದಲ್ಲಿ ಅಯ್ಯಪನ ಮಗ ನಿತ್ಯ ಸಿಂತೆ ಯದ್ಧದಲ್ಲಿ ವಾಸವಾಗಿದ್ದಂತೆ ಹೇಳಿದೆ. ಇಲ್ಲಿ ಉಕ್ತವಾಗಿರುವ ಈತನು ಅಯ್ಯಪದೇವನ ಮಗ ಇರಿವನೊಳಂಬನಿರಬಹುದೇ? ಇಲ್ಲಿ ಬರುವ ಪಂಚಲದೇವನು ಸಾಂತರ ದೊರೆ ಪಂಚಲದೇವನಾಗಿದ್ದಾನೆ.

ಕ್ರಿ.ಶ. ೯೭೧ ರ ನೇರ್ಲಿಗೆ, ಮಾದಲಗೆರೆ ಮತ್ತು ಮಸಗನಹಳ್ಳಿ ಮುಂತಾದ ಶಾಸನಗಳು[167] ಮಾರಸಿಂಹನು ನೊಳಂಬರ ಮೇಲೆ ಯುದ್ಧ ಮಾಡಿ ನೊಳಂಬರನ್ನು ನಿರ್ನಾಮ ಮಾಡಿ ನೊಳಂಬ ಕುಲಾಂತಕ ಎಂಬ ಬಿರುದನ್ನು ಧರಿಸಿದಂತೆ ಹೇಳಿವೆ. ಈ ಯುದ್ಧದಲ್ಲಿ ಮಾರಸಿಂಹ ನೊಳಂಬರನ್ನು ಸೋಲಿಸಿ ಈ ಬಿರುದು ಪಡೆದಿರಬಹುದು. ಆದರೆ ನೊಳಂಬರನ್ನು ಪೂರ್ಣವಾಗಿ ನಿರ್ನಾಮ ಮಾಡಲಾಗಲಿಲ್ಲ. ಈ ಘಟನೆ ನನ್ನಿನೊಳಂಬ ಪಟ್ಟಕ್ಕೆ ಬಂದ ಹೊಸದರಲ್ಲಿ ನಡೆದಿರಬಹುದು. ನನ್ನಿ ನೊಳಂಬನು, ಮಾರಸಿಂಹನು ನಡೆಸಿದ ಯುದ್ಧದಲ್ಲಿ ಸೋತಿರಬಹುದು. ಈ ಕಾರಣದಿಂದಲೇ ಏನೋ ನನ್ನಿನೊಳಂಬನ ಕಾಲದ ಶಾಸನಗಳು ಕಡಿಮೆ ಇವೆ. ಆದರೂ ಈ ನನ್ನಿನೊಳಂಬನು ಕ್ರಿ.ಶ.೯೭೫ ರ ವರೆಗೂ ಆಳಿದಂತೆ ಶಾಸನಗಳು ಉಲ್ಲೇಖಿಸುತ್ತವೆ.

## ಇಮ್ಮಡಿ ಅಯ್ಯಪದೇವ

ಇಮ್ಮಡಿ ಅಯ್ಯಪದೇವನು ಇರಿವನೊಳಂಬ ಮತ್ತು ಪಿರಿಯಬ್ಬರಸಿಯ ಮಗನೆಂದು ತಿಳಿಯುತ್ತದೆ. ಕ್ರಿ.ಶ. ೯೬೬ ರ ಶಾಸನವೊಂದು ಇವನನ್ನು ಹೆಸರಿಸಿದ್ದು ಇವನ ಕಾಲದಲ್ಲಿ ಏರಣಿಗೇಟಿ ಎಂಬುವವನು ಯಾವುದೋ ಯುದ್ಧದಲ್ಲಿ ಭಾಗವಹಿಸಿ ಸತ್ತಂತೆ ಶಾಸನದಲ್ಲಿ ಉಲ್ಲೇಖವಾಗಿದೆ. ಇರಿವನೊಳಂಬ ದಿಲೀಪನ ರಾಜ್ಯಾಡಳಿತದ ಕಾಲದಲ್ಲಿಯೇ ಇವನೂ ಭಾಗಿಯಾಗಿದ್ದಂತೆ ಊಹಿಸಬಹುದು.[168] ಕ್ರಿ.ಶ. ೯೭೭ ರ ಕಲುಗೋಡು ಶಾಸನದಲ್ಲಿ ಇವನ ಆಳ್ವಿಕೆ ನಡೆಸುತ್ತಿದ್ದು ಬರಗೂರಲ್ಲಿದ್ದಂತೆಯೂ ಆಗ ಏರೆಗಂಗಯ್ಯ ಸ್ವರ್ಗಸ್ಥನಾದಾಗ ಅವನಿಗೆ ಮಯ್ದಮ್ಮ ಎಂಬುವವನು ಕೀಳ್ಗುಂಟೆ (ಅವನೊಡನೆ ಸತ್ತ) ಯಾದ ವಿಷಯ ತಿಳಿಸುತ್ತದೆ.[169] ನೊಳಂಬರ ಪಾರಂಪರಿಕ ಬಿರುದುಗಳನ್ನೆಲ್ಲಾ ಧರಿಸಿರುವುದರಿಂದ ಈತನು ಕೆಲವು ಕಾಲ ರಾಜ್ಯವಾಳಿರಬೇಕು. ಮುಂದೆ ಇವನ ಶಾಸನಗಳು ದೊರೆಯುದಿರುವುದರಿಂದ ಈತನು ಗಂಗರೊಡನೆ ನಡೆದ ಯುದ್ಧದಲ್ಲಿ ಹತನಾಗಿರಬಹುದು.

## ಗನ್ನರಸ

ಬೆಂಗಳೂರು ಜಿಲ್ಲೆ ಕಮ್ಮಸಂದ್ರದ ಶಕವರ್ಷ ೯೨೩/ಕ್ರಿ.ಶ.೧೦೦೧ರ ಶಾಸನದಲ್ಲಿ ಚೋಳದೊರೆ ರಾಜರಾಜದೇವನು ರಾಜ್ಯವಾಳುತ್ತಿದ್ದಾಗ ಎರಡನೆಯ ಅಯ್ಯಪದೇವನ ಮಗ ಗನ್ನರಸನು ದಡಿಗವಾಡಿ ಮತ್ತು ಕುರುಕ್ಷನ್ದಙ್ಬು.. ಆಳುತ್ತಿರುವಾಗ ಅವನ ದಂಡನಾಯಕ ಶ್ರೀಧರಯ್ಯ

ನಾಡುನಾಳ್ಗಾವುಂಡ, ಸಿನ್ದಗಾವುಣ್ಣರು (ಸೇರಿ) ಸತ್ತಿವಂಗಲದ ಭೂಮಿಯನ್ನು ದಾನ ಕೊಟ್ಟುದುದಾಗಿ ತಿಳಿಸುತ್ತದೆ.[170]

ಈ ಗನ್ನರಸನು ಈ ಕಾಲಕ್ಕೆ ನೊಳಂಬರ ಮೂಲಶಾಖೆಯ ವಂಶದವನಾಗಿದ್ದು ಇವನ ತಂದೆ ಕೂಡ ರಾಜನಾಗಲಿಲ್ಲ. ಸಾಮಂತನಾಗಿದ್ದ ಗನ್ನರಸನು ಇಮ್ಮಡಿ ಪೊಳಲ್ಚೋರನ ಸಮಕಾಲೀನನಾಗಿದ್ದು ಮುಂದೆ ಚೋಳರೊಡನೆ ಸಖ್ಯ ಬೆಳಸಿ ನೊಳಂಬವಾಡಿ ಪಡೆಯಲು ಪ್ರಯತ್ನಿಸಿರಬೇಕು. ಚೋಳರ ಸಾಮಂತನಾಗಿ ದಡಿಗಾವಳಿಯಲ್ಲಿ ಆಳುತ್ತಿದ್ದ. ಆದರೆ ಮುಂದೆ ಇವನ ವಂಶ ಮುಂದುವರಿದ ಬಗ್ಗೆ ದಾಖಲೆಗಳು ಲಭ್ಯವಿಲ್ಲ.

ಮೈಸೂರು ಜಿಲ್ಲೆ ಎಲ್ಲೂರಿನ ಕ್ರಿ.ಶ.೯೯೯ ರ ಶಾಸನದಲ್ಲಿ ಗಂಗರಾಜ ಪೆರ್ಮಾನಡಿ ಪೃಥ್ವೀರಾಜ್ಯವನ್ನು ಆಳುತ್ತಿರುವಾಗ ಗೋವಿನ್ದರದೇವನ ಮನೋನಯನ ವಲ್ಲಭೆ ನೊಳಂಬ ವಂಶೋದ್ಭವೆ ಪಲ್ಲವಕುಲತಿಲಕೆ ಸಮ್ಯಕ್ತ ರೋಹಿಣಿ ಕಲಿಕಾಲರುಗಿಣಿ ಪತಿವ್ರತ ಮಹೀಸುತೆ ಧರ್ಮಚಿನ್ತಾಮಣಿ ಸತ್ಯವಿಳಾಸಿನಿ ತ್ರಿಭುವನ ವೀರನೊಳಂಬಾಗ್ರಜನ್ಮೆಯಪ್ಪ ಎಂದು ಹೇಳುವ ಪ್ರಿಥುವಬ್ಬರಸಿಯ ಉಲ್ಲೇಖ ಬಂದಿದೆ. ಈ ಪ್ರಿಥುವಬ್ಬರಸಿ ಪಲ್ಲವ ರಾಜಕುಮಾರಿ ಎಂದಿದ್ದು ಇವಳನ್ನು ನೊಳಂಬ ವಂಶದವಳೆಂದು ಕರೆದಿದೆ. ನೊಳಂಬರು ಒಂದೆಡೆ ಗಂಗರೊಡನೆ ಯುದ್ಧ ಮಾಡುತ್ತಿದ್ದರೂ ಇನ್ನೊಂದೆಡೆ ವೈವಾಹಿಕ ಸಂಬಂಧಗಳನ್ನು ಬೆಳೆಸಿದ್ದುದು ಇಲ್ಲಿ ತಿಳಿದು ಬರುತ್ತದೆ. ಇಲ್ಲಿ ಉಲ್ಲೇಖಿತವಾಗಿರುವ ಗೋವಿಂದರ ದೇವನನ್ನು ನೀತಿಮಾರ್ಗನೆಂದು ಹೆಸರಿಸಿದ್ದು ಇವನು ಮುಮ್ಮಡಿ ನೀತಿಮಾರ್ಗನಿರಬಹುದು.[171]



## ಇಮ್ಮಡಿ ಪೊಳಲ್ಚೋರ

ಪಲಕೋಡು ತಾಲೂಕಿನ ಕ್ರಿ.ಶ. ೯೬೧ ರ (ಶಕ ೮೮೩) ಶಾಸನದಲ್ಲಿ ಪಲ್ಲವರ ಪಾರಂಪರಿಕ ಬಿರುದುಗಳಾದ ಸಮಧಿಗತ ಪಞ್ಚಮಹಾಶಬ್ದ ಪಲ್ಲವಾನ್ವಯ ಶ್ರೀಪ್ರಿಥ್ವೀವಲ್ಲಭ ಪಲ್ಲವಕುಲತಿಲಕ ಶ್ರೀವ್ಪೊಳಲ್ಚೋರ ಪ್ರಿತಿವೀ ರಾಜ್ಯವಾಳುತ್ತಿರುವಾಗ . ಜಾ ನೊಬಿಂಬರ ಭೀಮ . ದ್ರಾಯ ಶೆಟ್ಟಿ ವ್ಪೊಸಣ . ಳೆಣ್ಬ- ಎಂಬ ವಿಶೇಷಣಗಳಿಂದ ಬಹುಶಃ ಇವನು ನನ್ನಿನೊಳಂಬನ ಮಗ ಇಮ್ಮಡಿ ಪೊಳಲ್ಚೋರನಾಗಿರಬೇಕು.[172]



## ನೊಳಂಬಾಧಿರಾಜ ಇಮ್ಮಡಿ ಮಹೇಂದ್ರ

ನೊಳಂಬಾಧಿರಾಜ ಇಮ್ಮಡಿ ಮಹೇಂದ್ರ ತನ್ನ ತಾತ ಛಲದಂಕಕಾರ ನನ್ನಿನೊಳಂಬನ ನಂತರ ಪಟ್ಟಕ್ಕೆ ಬಂದ. ಇವನ ತಂದೆ ಇಮ್ಮಡಿ ಪೊಳಲ್ಚೋರನು ಶಕ್ತಿಶಾಲಿ ದೊರೆಯಾದರೂ ಚಾಲುಕ್ಯ ದೊರೆ ಇಮ್ಮಡಿ ತೈಲಪನ ಸಾಮಂತನಾಗಿದ್ದ ಇವನ ತಂದೆ ಇಮ್ಮಡಿ ಪೊಳಲ್ಚೋರನು

ತನ್ನ ತಂದೆ ನನ್ನಿನೊಳಂಬನ ಆಳ್ವಿಕೆಯಲ್ಲಿಯೇ ಇದ್ದು ಬಹುಶಃ ಸಾವನ್ನಪ್ಪಿರಬೇಕು. ನನ್ನಿನೊಳಂಬನ ಮೇಲೆ ಗಂಗ ಮಾರಸಿಂಹನು ಯುದ್ಧಕ್ಕೆ ಬಂದಾಗ ಆ ಯುದ್ಧದಲ್ಲಿ ಸತ್ತಿರಬೇಕು. ಹೀಗಾಗಿ ನನ್ನಿನೊಳಂಬನ ನಂತರ ಇವನು ಪಟ್ಟಕ್ಕೆ ಬರುತ್ತಾನೆ. ಇವನು ಪಟ್ಟಕ್ಕೆ ಬಂದಾಗ ಇನ್ನು ಚಿಕ್ಕವಯಸ್ಸಾಗಿದ್ದಿರಬಹುದು.

ಇವನನ್ನು ಶಕವರ್ಷ ೮೯೯ ರ ಅಂದರೆ ಕ್ರಿ.ಶ. ೯೭೭ ರ ಅನಂತಪುರ ಜಿಲ್ಲೆಯ ಕಲುಗೋಡು ಶಾಸನದಲ್ಲಿ ವಂಶಪಾರಂಪರ್ಯವಾಗಿ ಬಂದ ಬಿರುದುಗಳ ಜೊತೆ ಮಯಿನ್ದಮ್ಮರಸನ ಉಲ್ಲೇಖವಿದ್ದು ಬರಗೂರಿನಲ್ಲಿ ಬೀಡು ಬಿಟ್ಟಿದ್ದಂತೆ ತಿಳಿಸುತ್ತದೆ.[173] ನಾಲ್ಕನೇ ರಾಚಮಲ್ಲನು ವಶಪಡಿಸಿಕೊಂಡಿದ್ದ ನೊಳಂಬವಾಡಿಯನ್ನು ಪುನಃ ತನ್ನ ವಶಪಡಿಸಿಕೊಳ್ಳಲು ಬೀಡು ಬಿಟ್ಟಿದ್ದನೆಂದು ತೋರುತ್ತದೆ. ಅಷ್ಟೇನು ಸಮರ್ಥನಲ್ಲದ ಪಂಚಲದೇವ ಗಂಗವಾಡಿಯ ದಕ್ಷಿಣ ಭಾಗದ ತುದಿಯಾದ ಕೊಡಗು ಜಿಲ್ಲೆಯಲ್ಲಿದ್ದನು. ಈ ಕಾಲದಲ್ಲಿ ನೊಳಂಬವಾಡಿಯನ್ನು ಗಂಗರಾಜ ರಕ್ಕಸಗಂಗ ರಾಚಮಲ್ಲನು ಆಳ್ವಿಕೆ ಮಾಡುತ್ತಿದ್ದನು. ಇವನು ಕ್ರಿ.ಶ. ೯೭೭ ರ ಮಧ್ಯದಲ್ಲಿ ಸೇರಿದ ಅದರಲ್ಲೂ ಕೋಲಾರ ಜಿಲ್ಲೆಯ ಭಾಗಗಳನ್ನು ಆಳುತ್ತಿದ್ದ ಪ್ರದೇಶಗಳನ್ನು ನೊಳಂಭಾದಿರಾಜ ಮಹೇಂದ್ರ ವಶಪಡಿಸಿಕೊಂಡ.[174] ಇದಲ್ಲದೆ ಗಂಗರ ರಾಜ್ಯದಲ್ಲಿ ಮಂಡ್ಯ ಜಿಲ್ಲೆಯವರೆಗೆ ಮುನ್ನುಗ್ಗಿ ಹೋಗುತ್ತಾನೆ.[175] ಈ ಶಾಸನದಲ್ಲಿ ಪಲ್ಲವರಿಗೂ ಗಂಗರಿಗೂ ಯುದ್ಧವಾದುದನ್ನು ತಿಳಿಸುತ್ತದೆ. ಇಲ್ಲಿ ಪಲ್ಲವರೆಂದರೆ ನೊಳಂಬ ಎರಡನೆಯ ಮಹೇಂದ್ರನೆಂಬುದು ಸ್ಪಷ್ಟ. ಇಮ್ಮಡಿ ಮಾರಸಿಂಹ ವಶಪಡಿಸಿಕೊಂಡಿದ್ದ ನೊಳಂಬವಾಡಿ–೩೨೦೦೦ ವನ್ನು ಎರಡನೆಯ ಮಹೇಂದ್ರ ಹಿಂತೆಗೆದು ಕೊಂಡನೆಂದು ತಿಳಿದುಬರುತ್ತದೆ.

ಕಾಲದ ಉಲ್ಲೇಖವಿಲ್ಲದ (ಕ್ರಿ.ಶ.ಸು.೯೮೦) ಚಿತ್ತೂರು ಜಿಲ್ಲೆಯ ಶಾಸನದಿಂದ ಚೋಳ ರಾಜ್ಯವನ್ನು ಎರಡನೆಯ ಮಹೇಂದ್ರನು ಗೆದ್ದುಕೊಂಡನೆಂಬುದು ಉಕ್ತವಾಗಿದೆ. ಯಾವ ಕಾರಣಕ್ಕಾಗಿ ಅವರ ರಾಜ್ಯವನ್ನು ವಶಪಡಿಸಿಕೊಂಡನೆಂದು ತಿಳಿಯದು. ಶಾಸನದಲ್ಲಿರುವ ವಂಶವೃಕ್ಷವಿದು –

ಇರಿವನೊಳಂಬ
|
ನನ್ನಿನೊಳಂಬ
|
ಪೊಳಲ್ಚೋರದೇವ್ರ
|
ಮಹೇಂದ್ರ

ಇಲ್ಲಿ ಮಹೇಂದ್ರನನ್ನು ಅಮೋಘವಾಕ್ಯ ಪಲ್ಲವಾಭರಣ ಶ್ರೀಮತ್ ವೀರಮಹೇಂದ್ರ ನೊಂಬಾಧಿರಾಜದೇವನೆಂದು ಕರೆದಿದೆ.[176] ಬಹುಶಃ ಇಮ್ಮಡಿ ತೈಲಪ ಚೋಳರನ್ನು ಸೋಲಿಸಲು ಇವನಿಗೆ ಸಹಾಯ ಮಾಡಿರುವ ಸಾಧ್ಯತೆ ಇದೆ. ಸಿರಗುಪ್ಪ ತಾಲೂಕಿನ ಶಾಸನದಲ್ಲಿ ಶಕವರ್ಷ ೯೦೩ ಅಂದರೆ ಕ್ರಿ.ಶ.೯೮೧ ರಲ್ಲಿ ಚಾಲುಕ್ಯ ಆಹವಮಲ್ಲದೇವನು ಕಜ್ಜಗಾರ ಬೆಳ್ಗಲಿಯ ಮೂರು ದೇವಾಲಯಗಳಿಗೆ ಪೂರ್ವದ ಸ್ಥಾನಮಾನ ನಡೆಯುವಂತೆ ನಿಗದಿ ಪಡಿಸುತ್ತಾನೆ. ಅದೇ ಶಾಸನದಲ್ಲಿ ವೀರನೊಳಂಬ ಪೆರ್ಮಾನಡಿದೇವನ ಹೆಂಡತಿ ರೇವಲದೇವಿಯು ವಿಷ್ಣುದೇವರಿಗೆ ಆರು ಮತ್ತರು ಭೂದಾನ ಮಾಡಿರುವುದನ್ನು ಉಲ್ಲೇಖಿಸಿದೆ. ಈ ಶಾಸನದ ಉಲ್ಲೇಖಿತ ಸಾಮಂತ ಅರಸ ನೊಳಂಬಾಧಿರಾಜನು ಇಮ್ಮಡಿ ಮಹೇಂದ್ರದೇವನಾಗಿದ್ದು ಕಲ್ಯಾಣದ ಚಾಳುಕ್ಯರ ಸಾಮಂತತೆಯನ್ನು ಒಪ್ಪಿಕೊಂಡಿದ್ದಂತೆ ತಿಳಿಯಬಹುದು. ನೊಳಂಬನ ಪತ್ನಿ ರೇವಲದೇವಿ ಬಹುಶಃ ಚಾಳುಕ್ಯ ಮನೆತನದವಳಿರಬಹುದು.[177]

ಕ್ರಿ.ಶ.೯೮೧ರ ನಂತರ ಮಹೇಂದ್ರನ ಶಾಸನಗಳು ದೊರೆಯುವುದಿಲ್ಲ. ಹೀಗಾಗಿ ಅಂದರೆ ಕ್ರಿ.ಶ. ೯೮೧ ರಿಂದ ೧೦೧೦ ರ ವರಗೆ ನೊಳಂಬರ ರಾಜ್ಯವನ್ನು ಯಾರು ಆಳಿದರೆಂದು ಹೇಳುವುದು ಕಷ್ಟ ಆದರೂ ದೀವಬ್ಬರಸಿಯು ತನ್ನ ಕನೀಯನಂದನನ ಪಾಲಕಿಯಾಗಿ ರಾಜ್ಯಭಾರ ಮಾಡುತ್ತಿದ್ದಿರಬೇಕು. ಚೋಳರ ಧಾಳಿ ಕರ್ನಾಟಕಕ್ಕೆ ಹೆಚ್ಚಾಗತೊಡಗಿದ ಮೇಲೆ ಈ ಅರಸರು ತಮ್ಮ ರಾಜಧಾನಿಯನ್ನು ಕಂಪಿಲಿಯ ಕಡೆಗೆ ಬದಲಾಯಿಸುತ್ತಾರೆ. ಕ್ರಿ.ಶ. ೯೯೪ ರಿಂದಲೇ

ಇರಿವನೊಳಂಬ ಘಟೆಯಂಕಕಾರನು ರಾಜ್ಯದ ಸೂತ್ರಗಳನ್ನು ಹಿಡಿದಿರಬೇಕು. ಕ್ರಿ.ಶ.ಸು. ೯೮೩ ರ ಶಾಸನದಲ್ಲಿ ಮಹೇಂದ್ರನು ಸತ್ತಾಗ ಅವನ ತಾಯಿ ದೀವಬ್ಬರಸಿ ಅವನ ಹೆಸರಿನಲ್ಲಿ ಕೊಳವನ್ನು ತನ್ನ ಹೆಸರಿನಲ್ಲಿ ಕೆರೆಯನ್ನು ಶಿವ ಮತ್ತು ವಿಷ್ಣು ದೇವಾಲಯಗಳನ್ನು ಕಟ್ಟಿಸಿದಂತೆ ಹೇಳಿಕೊಂಡಿದ್ದಾಳೆ.[178] ತ್ರಿಭುವನ ಕರ್ತಾರನೂ ಸಹ ಆವನ್ಯದ ಸ್ಥಾನವನ್ನು ಆಳುತ್ತಿದ್ದಂತೆ ಹೇಳಿದೆ. ಹೀಗಾಗಿ ಈ ಅವಧಿ ಗೊಂದಲದ ಅವಧಿಯಾಗಿತ್ತು. ಚೋಳರು ಸಹ ನೊಳಂಬವಾಡಿಯ ಮೇಲೆ ಧಾಳಿಗಳನ್ನು ಆರಂಭಿಸುತ್ತಾರೆ. ಹೀಗಾಗಿ ಈ ಧಾಳಿಗಳಿಂದ ತತ್ತರಿಸಿದ ನೊಳಂಬರು ಕಲ್ಯಾಣದ ಚಾಲುಕ್ಯರತ್ತ ನೋಡಿದ್ದು ಆಶ್ಚರ್ಯವೇನಲ್ಲ. ಆವನಿಯ ಎರಡು ಶಾಸನಗಳು ಪಲ್ಲವರ ಪಾರಂಪರಿಕ ಬಿರುದುಗಳೊಂದಿಗೆ ಅಮೋಘವಾಕ್ಯ, ನೊಳಂಬ ನಾರಾಯಣ ಮೊದಲಾದ ವಿಶೇಷಣಗಳನ್ನು ಮಹೇಂದ್ರನು ಹೊಂದಿದ್ದಂತೆ ತಿಳಿಯುತ್ತದೆ.[179] ನೊಳಂಬ ವಂಶದ ಕೆಲವರು ಚೋಳರ ಕೈಕೆಳಗೆ ಅಧಿಕಾರಿಗಳಾಗಿದ್ದರು.[180] ಮಹೇಂದ್ರನಿಗೆ ಪಲ್ಲವಾಭರಣ, ಆಹವದುರ್ಗ, ಅಹಿತರಜವ, ಅಮೋಘವಾಕ್ಯ, ನೊಳಂಬ ನಾರಾಯಣ, ನೊಳಂಬಾಧಿರಾಜ ಏಕವಾಕ್ಯ ಇತ್ಯಾದಿ ಬಿರುದುಗಳಿದ್ದವು.

# ನಂತರದ ಅರಸರು

( ಕ್ರಿ.ಶ. ೧೦೦೦ ದಿಂದಾಚೆಗೆ )

### ಇರಿವನೊಳಂಬ ಘಟೆಯುಂಕಕಾರ

ಇರಿವನೊಳಂಬ ಘಟೆಯುಂಕಕಾರನು ಪಟ್ಟಕ್ಕೆ ಬರುವ ವೇಳೆಗೆ ದಕ್ಷಿಣದ ಎರಡು ಬಲಿಷ್ಠ ರಾಜ್ಯಗಳಾದ ಗಂಗರು ಮತ್ತು ರಾಷ್ಟ್ರಕೂಟ ರಾಜ್ಯಗಳು ಅಸ್ತಂಗತವಾಗಿರುತ್ತವೆ. ದಕ್ಷಿಣ ಕರ್ನಾಟಕದ ಭಾಗ ಅರ್ಥಾತ್ ಗಂಗವಾಡಿ ಪ್ರಾಂತ್ಯವು ಚೋಳರ ವಶವಾಗಿರುತ್ತದೆ. ರಾಷ್ಟ್ರಕೂಟರನ್ನು ಮೂಲೆಗೆ ತಳ್ಳಿ ಕಲ್ಯಾಣದ ಚಾಳುಕ್ಯರು ರಾಜ್ಯಾಡಳಿತ ಮಾಡುತ್ತಿರುತ್ತಾರೆ. ತಕ್ಕೋಲಂ ಯುದ್ಧದಲ್ಲಿ ನೊಳಂಬರು ರಾಷ್ಟ್ರಕೂಟರ ಪರವಾಗಿ ಚೋಳರೊಡನೆ ಯುದ್ಧ ಮಾಡಿದ್ದರಿಂದ ಚೋಳರ ಸಖ್ಯ ಬೆಳೆಸಲು ಸಾಧ್ಯವಾಗಲಿಲ್ಲ. ಹೀಗಾಗಿ ಆಗ ತಾನೇ ಉದಿಸಿದ ಕಲ್ಯಾಣದ ಚಾಲುಕ್ಯರ ಸಾಮಂತತೆಯನ್ನು ಒಪ್ಪಿಕೊಂಡು ಅವರ ಹೆಸರಿನ ಮೂಲಕ ತಮ್ಮನ್ನು ಗುರುತಿಸಿಕೊಳ್ಳುವಷ್ಟರ ಮಟ್ಟಿಗೆ ಅವರಿಗೆ ವಿಧೇಯರಾಗಿರುತ್ತಾರೆ. ಹೀಗಾಗಿ ಇರಿವನೊಳಂಬ ಘಟೆಯುಂಕಕಾರನು ಈ ರಾಜ್ಯದ ದಕ್ಷಿಣ ಭಾಗವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದ್ದೇ ಅಲ್ಲದೆ, ಉತ್ತರ ದಿಕ್ಕಿನ ಕಡೆಗೆ ರಾಜ್ಯ ಸಂಪಾದನೆ ಮಾಡತೊಡಗುತ್ತಾನೆ. ಇವನ ಶಾಸನಗಳು ದಕ್ಷಿಣ ಕರ್ನಾಟಕದ ಹಾಗೂ ಬಳ್ಳಾರಿ ಜಿಲ್ಲೆಯಲ್ಲಿ ದೊರೆಯುತ್ತವೆ. ನೊಳಂಬವಾಡಿ ಪ್ರಾಂತ್ಯವು ಬಳ್ಳಾರಿ ಜಿಲ್ಲೆಯ ಸುತ್ತಮುತ್ತಲ ಪ್ರದೇಶಗಳಿಗೆ ಸೀಮಿತವಾಗುತ್ತದೆ.

ಹೊನ್ನಾಳಿ ತಾಲೂಕಿನ ನೆರಳಗುಂಡಿಯ ಕ್ರಿ.ಶ.೯೪ ರ ಶಾಸನದಲ್ಲಿ ತ್ರೈಳೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾನಡಿಯು ದದಿರ್ವ್ಯಾಳಿಗೆ-೧೦೦೦ ಬಲ್ಲಕುಂದ-೩೦೦ ರ ಕೊನಡಿಯೂರನ್ನು ಆಳುತ್ತಿದ್ದಂತೆ ಹೇಳಿದೆ. ಇವುಗಳಲ್ಲಿ ದದಿರ್ವಾಳಿಗೆ-೧೦೦೦ ಮತ್ತು ಕೊನಡಿಯೂರು ಎಂಬುದು ಅವರ ಹಿಂದಿನ ಪಾರಂಪರಿಕ ಆಳ್ವಿಕೆಗೆ ಭಿನ್ನವಾಗಿದ್ದು ಹೊಸ ಸೇರ್ಪಡೆಗಳಾಗಿವೆ.[181] ಆಹವಮಲ್ಲ ನೊಳಂಬನೆಂಬುವನು ಕ್ರಿ.ಶ.ಸು.೧೦೦೦ ದಲ್ಲಿ ನೊಳಂಬವಾಡಿಯ ದಕ್ಷಿಣ ಭಾಗವನ್ನು ಆಳುತ್ತಿದ್ದುದನ್ನು ಸೂಚಿಸುತ್ತದೆ. ಈ ಆಹವಮಲ್ಲ ನೊಳಂಬನು ಇಮ್ಮಡಿ ಇರಿವನೊಳಂಬನಾಗಿರಬೇಕು.[182] ಆಹವಮಲ್ಲ, ತ್ರೈಳೋಕ್ಯಮಲ್ಲ ಈ ಹೆಸರುಗಳು ನೊಳಂಬರು ಚಾಲುಕ್ಯರ ಕೈಕೆಳಗೆ ನಿಷ್ಠಾವಂತ ಮಾಂಡಲೀಕರಾಗಿದ್ದುದನ್ನು ಸೂಚಿಸುತ್ತದೆ. ಮುಳಬಾಗಿಲು ತಾಲೂಕಿನ ಶಕವರ್ಷ ೯೨೯/ಕ್ರಿ.ಶ.೧೦೦೭

ರಲ್ಲಿ ತ್ರಿಭುವನಕರ್ತೃಲಿಂಗದೇವನು ಅವನ್ಯದ ಸ್ಥಾನವನ್ನು ಆಳುತ್ತಿರುವಾಗ ಎಂದಿದ್ದು, ನೊಳಂಬ ಗಾಮುಂಡನ ಉಲ್ಲೇಖ ಮಾತ್ರ ಇದೆ. ಈ ಶಾಸನದಲ್ಲಿ ನೊಳಂಬ ರಾಜರ ಉಲ್ಲೇಖವಿಲ್ಲ.[183] ಸಿರಗುಪ್ಪ ತಾಲೂಕಿನ ಬಲ್ಲಕುಂದೆಯ ಕ್ರಿ.ಶ. ೧೦೦೮ರ ಶಾಸನದಲ್ಲಿ ಘಟೆಯಂಕಕಾರ ಚಿತ್ರವೆಡಂಗ ನೊಳಂಬಾಧಿರಾಜನ ಉಲ್ಲೇಖವಿದ್ದು, ಬಲ್ಲಕುಂದೆ ತೀರ್ಥದ ಜನರಿಗೆ ದಾನ ನೀಡಿದ್ದನ್ನು ತಿಳಿಸುತ್ತದೆ.[184]

ಕ್ರಿ.ಶ.ಸು. ೧೦೦೫ ಕಾಲದ ಉಲ್ಲೇಖವಿಲ್ಲದ ಪುಂಗನೂರು ತಾಲೂಕು ನೆಲಪಲ್ಲಿ ಶಾಸನದಲ್ಲಿ ನೊಳಂಬ ವಂಶಾವಳಿಯನ್ನು ಹೇಳಿದ್ದು –




ಈ ಘಂಟೆಯಂಕಾರನು ಪಳುವಿನಾಡವೆನ್ನುರು ಪೊಂನೆಯಲಿದ್ದು ಕೊಯತೂರ ಬಳೆಗಾರ ರಾಮೇಶ್ವರ ಹರಪಲ್ಲಯ್ಯನು ಗವರೆಸೆಟ್ಟಿಯ ಮಗ ಕರವಯ್ಯ ಎಂಬುವನಿಗೆ ಮುಮ್ಮಡಿ ಗವರೆ ಪಲ್ಲವಾದಿತ್ಯ ನೊಳಂಬಸೆಟ್ಟಿಯೆಂದು ಹೆಸರನ್ನು ನೀಡಿ ಪಟ್ಟಗಟ್ಟಿ ಏರುಕುದುರೆ, ಕೊಡೆ, ಆಳಪಣ್ಣುವಕೆ, ಕುಞ್ಚನ್ತಳಿಗೆ, ಕೀಬ್ವಟ್ಟ, ಅಡ್ಡಣಿಗೆ, ಗದ್ದಿಗೆ ರಾಜ ಚಿಹ್ನೆಯನ್ನು ಕೊಟ್ಟು ಪುಲಿನಾಡಿನ ಕೊಳತೂರನ್ನು 'ಪಲ್ಲವಾದಿತ್ಯಪುರ'ವೆಂದು ನಾಮಕರಣ ಮಾಡಿ ದಾನ ನೀಡಿದ ಉಲ್ಲೇಖವಿದೆ. ಶಾಸನವು ಮುಂದುವರಿದು ನೊಳಂಬರ ನೆಂಟನಾದ ಕದಂಬರ ವಿಕ್ರಮಾದಿತ್ಯನ ಮಗ ಹಾಗೂ ತಮ್ಮ ಅಳಿಯನಾದ ಬೆಂಗಡಯ್ಯನಿಗೆ ಕೊಡುಗೆಯಾಗಿ ದಾನ ನೀಡಿದಂತೆ ಉಲ್ಲೇಖವಿದೆ. ಈ ಕದಂಬರ ವಿಕ್ರಮಾದಿತ್ಯ ಬಹುಶಃ ಹಾನಗಲ್ಲಿನ ಕದಂಬ ವಂಶದವನಾಗಿರಬೇಕು.[185]

ಕಾಲದ ಉಲ್ಲೇಖವಿಲ್ಲದ ಪುಂಗನೂರಿನ ಈ ಶಾಸನವೂ ಮೇಲಿನ ಶಾಸನದ ಕಾಲದ್ದೇ ಆಗಿದ್ದು ಇದರಲ್ಲಿನ ವಿಷಯವೂ ಮೇಲಿನ ಶಾಸನದ ವಿವರಣೆಯಂತೆಯೇ ಇದ್ದು ದಾನದ ಭಾಗ ಮಾತ್ರ ಬದಲಾಗಿದೆ. ಈ ಎರಡೂ ಶಾಸನಗಳಲ್ಲಿ ವೀರ ಮಹೇಂದ್ರನ ಮಗ ಏಕವಾಕ್ಯನೆಂದೂ ಇವನ ತಮ್ಮ ಘಂಟೆಯಂಕಕಾರನೆಂದು ಹೇಳಿದೆ. ಉಳಿದ ಶಾಸನಗಳಲ್ಲಿ ಘಂಟೆಯಂಕಕಾರನನ್ನು ಮಹೇಂದ್ರನ ತಮ್ಮನೆಂದು ಹೆಸರಿಸಲಾಗಿದೆ.

ಹಿಂದಿನ ಶಾಸನದಲ್ಲಿ ವ್ಯಾಪಾರಿಗೆ ಈ ನೊಳಂಬ ಅರಸನು ಕೆಲವು ಮರ್ಯಾದೆಗಳನ್ನು ಕೊಟ್ಟಿದ್ದಂತೆ ಈ ಶಾಸನದಲ್ಲಿ ಬೀರಾನೆ ಗಾವುಂಡನ ಮಗ ಬಸವಯ್ಯ ಎಂಬುವನಿಗೆ ಪಲ್ಲವಾದಿತ್ಯ ನೊಳಂಬ ಗಾವುಂಡನೆಂದು ಪಟ್ಟಕಟ್ಟಿ ಕೆಲವು ವಿಶೇಷ ಮರ್ಯಾದೆಗಳನ್ನು-ಎರಲ್ ಕುದುರೆ, ಕೊಡೆ, ಅಡ್ಡಪಾದವಂಕೆ, ಕುಂಚಮ್‌ತಳಿಗೆ, ಕಿಳ್‌ವಟ್ಟಲ್, ಅಡ್ಡಣಿಗೆ, ಗದ್ದಿಗೆ, ರಾಜ ಚಿಹ್ನೆಯನ್ನು ನೀಡಿರುತ್ತಾನೆ.[186] ಬಳ್ಳಾರಿ ತಾಲೂಕು ಸಿಂದಿಗೆರೆ ಕ್ರಿ.ಶ.ಸು ೧೦೧೦-೨೪ ಶಾಸನದಲ್ಲಿ ಇರಿವ ನೊಳಂಬ ನಾರಸಿಂಘ ದೇವರದತ್ತಿ ಎಂದಿದ್ದು ಮಹಾಮಂಡಳೇಶ್ವರನು ಅನೇಕ ಸಮರ ಸಂಘಟ್ಟನೊಪಲಬ್ದ ವಿಜೆಯಲಕ್ಷ್ಮಿ ... ಅಷ್ಟಮಹಾಸಿದ್ಧಿ ಮುಂತಾದ ವಿಶೇಷಣಗಳನ್ನು ಹೊಂದಿದ್ದ ವೈದುಂಬ ವಂಶದ ಮಣಿಬೇತ ಮಹಾರಾಜನು ಬಲ್ಲಕುಂದೆ-೩೦೦ ರೊಳಗಣ ಪಟ್ಟಣದ ಧರ್ಮ್ಮೋತಕ್ಕೆ ಭೂದಾನ ಮಾಡಿದ ಉಲ್ಲೇಖವಿದೆ. ಈ ಮಣಿಬೇತ ಮಹಾರಾಜನು ಈ ನೊಳಂಬರ ಮಂಡಳೇಶ್ವರನಾಗಿದ್ದನೆಂಬುದು ಈ ಶಾಸನದಿಂದ ತಿಳಿಯುತ್ತದೆ.[187] ಚಿಂತಾಮಣಿ ತಾಲೂಕು ಕಲ್ಲಹಳ್ಳಿಯ ಶಕ. ೯೩೩/ಕ್ರಿ.ಶ. ೧೦೧೧ ರ ಶಾಸನದಲ್ಲಿ ನೊಳಂಬಾಧಿರಾಜ ಚೋರಯ್ಯ ಎಂಬುವನು ರಾಜ್ಯವಾಳುತ್ತಿದ್ದಂತೆ ಉಲ್ಲೇಖವಿದೆ ( ಬಳಿಲ್ ಚೋರ= ಇಮ್ಮಡಿ ಪೊಳಲ್ ಚೋರ ). ಆದರೆ ಈ ಚೋರಯ್ಯ ಯಾರು ಎಂಬುದು ಸ್ಪಷ್ಟವಾಗಿಲ್ಲ. ಊರಳಿವಿನಲ್ಲಿ ಕಾದಿ ಸತ್ತವನು ಬಳಲ್ ಚೋರ ನೊಳಂಬಸೆಟ್ಟಿ ಎಂದಿರುವುದರಿಂದ ಈ ಚೋರಯ್ಯನು ಪೊಳಲ್ಚೋರನ ಇನ್ನೊಬ್ಬ ಮಗನಾಗಿದ್ದಿರಬಹುದು. ಮುಂದೆ ಕ್ರಿ.ಶ.೧೦೩೬ರ ಮೇಲಾಗಾಣಿ ಶಾಸನದಲ್ಲಿ ಇವನ ಉಲ್ಲೇಖ ಬಂದಿದ್ದು ಸ್ವತಂತ್ರರಾಜನೆಂಬಂತೆ ಬಿರುದುಗಳನ್ನು ಧರಿಸಿದ್ದಾನೆ. ಇವನು ಸೂರ್ಯಮಿನಿಯೂರಿನಲ್ಲಿದ್ದಾಗ ಮಾರಸಿಂಘ ಪೆರ್ಮಾನಡಿ ಸತ್ತ ವಿಷಯವನ್ನು ಕೇಳಿದಂತೆ ಹೇಳಿದೆ. ಈ ಮಾರಸಿಂಘ ಗಂಗವಂಶದವನಿರಬಹುದೆ? ಎಂಬುದು ಕುತೂಹಲದ ಪ್ರಶ್ನೆಯಾಗಿದೆ.[188] ಈತ ಚೋಳರ ಅಧೀನದಲ್ಲಿ ರಾಜ್ಯವಾಳುತ್ತಿದ್ದಂತೆ ಹೇಳಿದೆ. [189] ಗೊನೆಹಾಳು ಗ್ರಾಮದ ಕ್ರಿ.ಶ.೧೦೧೪ರ ಶಾಸನದಲ್ಲಿ ಐದನೆಯ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಇರಿವನೊಳಂಬಾಧಿ ರಾಜನ ತಾಯಿ [ದೀ]ವಬ್ಬರಸಿ ಪಂಪಾತೀರ್ಥದ ಮಹಾಕಾಳದೇವರಿಗೆ ದಾನ ನೀಡಿದ ಉಲ್ಲೇಖವಿದೆ.[190]

**ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮಾನಡಿ ಉದಯಾದಿತ್ಯದೇವ**

ಕ್ರಿ.ಶ.೧೦೧೪ ರ ಗೊನೆಹಾಳು ಶಾಸನವೇ ಈ ರಾಜನ ಅಂತಿಮ ಶಾಸನ. ಮುಂದೆ ಕ್ರಿ.ಶ. ೧೦೧೭ರಲ್ಲಿ ಉದಯಾದಿತ್ಯನ ಶಾಸನಗಳು ದೊರೆಯುವುದರಿಂದ ಈತನು ಕ್ರಿ.ಶ. ೧೦೧೭ ರ ಹೊತ್ತಿಗೆ ಗತಿಸಿರಬೇಕು. ಮುಂದೆ ಇವನ ಮಗ ಚಾಳುಕ್ಯ ಜಯಸಿಂಹನ ಮಾಂಡಲೀಕನಾಗಿ ಅವನ ಹೆಸರನ್ನು ತನ್ನ ಹೆಸರಿನ ಜೊತೆಗೆ ಸೇರಿಸಿಕೊಂಡು ಪಟ್ಟಕ್ಕೆ ಬರುತ್ತಾನೆ. ಸಿರಗುಪ್ಪ ತಾಲೂಕಿನ ಮಲ್ಲಯ್ಯನ ಗುಡ್ಡದ ಕ್ರಿ.ಶ. ೧೦೧೭ರ ಶಾಸನದಲ್ಲಿ ಚಾಳುಕ್ಯ ಜಗದೇಕಮಲ್ಲ, ಅವನ ಮಾಂಡಳೀಕ ಜಗದೇಕ ನೊಳಂಬಪಲ್ಲವ ಪೆರ್ಮ್ಮಾನಡಿಯು ನೊಳಂಬವಾಡಿ-೩೨೦೦೦, ಕದಂಬಳಿಗೆ-೧೦೦೦, ಕೋಗಳಿ-

೫೦೦, ಬಲ್ಲಕುಂದೆ-೩೦೦, ಕುದಿಯಪರವಿ-೭೦, ಕರಿವಿಡಿ-೩೦ ನ್ನು ಆಳ್ವಿಕೆ ಮಾಡುತ್ತಿರುವಾಗ ಮೈಲಾರದದೇವರಿಗೆ ಬಲ್ಲಕುನ್ದೆ-೩೦೦ರ ಒಳಗಣ ಪಗರೆತಡಿಯ ಸಿರಿಯನೂರನ್ನು ಸರ್ವ್ವಾಭ್ಯನ್ತ ಸಿದ್ಧಿಯಾಗಿ ನೀಡಿದ್ದನ್ನು ತಿಳಿಸುತ್ತದೆ. ಈ ಜಗದೇಕಮಲ್ಲ ನೊಳಂಬ ಉದಯಾದಿತ್ಯನು ಇರಿವ ನೊಳಂಬ ಘಟೆಯಂಕಕಾರನ ಮಗ. ಈ ಶಾಸನದಲ್ಲಿ ನೊಳಂಬ ರಾಜನು ಚಾಳುಕ್ಯ ದೊರೆ ಜಗದೇಕಮಲ್ಲನ ಹೆಸರನ್ನು ತನ್ನ ಹೆಸರಿನೊಂದಿಗೆ ಸೇರಿಸಿಕೊಂಡು ತನ್ನನ್ನು ಅವನ ಸಾಮಂತನೆಂಬಂತೆ ಗುರುತಿಸಿಕೊಂಡಿರುವುದನ್ನು ಗಮನಿಸಬಹುದು. ಹಾಗೆಯೇ ತಮ್ಮ ಕುಲದೈವ/ ಇಷ್ಟದೈವ ಸಿದ್ದೇಶ್ವರ ಬಿಂಬವನ್ನು ಮೈಲಾರದದೇವರೆಂದು ಕರೆದಿದ್ದಾರೆ.[191]

ಇದೇ ರಾಜನನ್ನು ಹೆಸರಿಸುವ ಶಕ ೯೩೯/ಕ್ರಿ.ಶ.೧೦೧೭ ರ ಶಾಸನವು ಬಲ್ಲಕುಂದೆಯಲ್ಲಿ ದೊರೆತಿದೆ. ಈ ಕಾಲಕ್ಕೆ ನೊಳಂಬ ಉದಯಾದಿತ್ಯನು ಸ್ಪಷ್ಟವಾಗಿ ನೊಳಂಬವಾಡಿ-೩೨೦೦೦, ಕದಂಬಳಿಗೆ-೧೦೦೦, ಕೋಗಳಿ-೫೦೦, ಬಲ್ಲಕುಂದೆ-೩೦೦, ಕುದಿಯಪರವಿ-೭೦, ಕರಿವಿಡಿ-೩೦ ಎಂಬ ವಿಸ್ತಾರವಾದ ಪ್ರದೇಶವನ್ನು ಆಳುತ್ತಿದ್ದಂತೆ ಉಲ್ಲೇಖಿಸುತ್ತದೆ. ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾನಡಿಯ ಕಾಲಕ್ಕೆ ಇದ್ದ ದದಿರ್ವಾಳಿಗೆ-೧೦೦೦ ಮತ್ತೆ ಕೊನಡಿಯೂರು ಈ ಕಾಲಕ್ಕೆ ಇವರ ಕೈ ತಪ್ಪಿದಂತೆ ತಿಳಿಯುತ್ತದೆ.[192] ಬಾಗುಳಿಯ ಶಕ ೯೪೦/ಕ್ರಿ.ಶ. ೧೦೧೮ರ ಶಾಸನದಲ್ಲಿ ನೊಳಂಬ ಪಲ್ಲವ ಪೆರ್ಮಾನಡಿ ಎಂಬ ಹೆಸರು ಪಡೆದಿದ್ದ ಉದಯಾದಿತ್ಯನು ಗಂಗವಾಡಿ-೯೬೦೦೦, ಕದಂಬಳಿಗೆ-೧೦೦೦, ಕೋಗಳಿ-೫೦೦, ಮಾಸಿಯವಾಡಿ-೧೪೦ರ ಪಂಚಗ್ರಾಮಗಳನ್ನು ಬಲ್ಲಕುಂದೆ ೩೦೦ ಎಡೆದೊಱೆಚ್ಚಾಸಿರದೊಳಗೆ ಕುದಿಹಾರ-೭೦ ನ್ನು ನಿಧಿ-ನಿಧಾನ ನಿಕ್ಷೇಪ ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳನದಿಂದ ಆಳುತ್ತಿದ್ದು ತುಂಗಭದ್ರೆಯ ತೀರದ ಕಂಪಿಲಿ ಬೀಡಿನಲ್ಲಿದ್ದಂತೆಯೂ ಬಾಳ್ಗುಳಿಯ ಕಲಿದೇವಸ್ವಾಮಿದೇವರ ನೈವೇದ್ಯಕ್ಕೆ, ನಂದಾದೀವಿಗೆಗೆ, ತಪೋಧನರಿಗೆ, ಸತ್ರಕ್ಕೆ, ಸೂಳೆಯರಿಗೆ, ಪಹರೆಯವರಿಗೆ, ಪಾತ್ರದವರಿಗೆ, ದೇಸಿಗರಿಗೆ ದಾನ ಕೊಟ್ಟ ವಿಷಯವನ್ನು ತಿಳಿಸಿದೆ. ಇದೇ ವಿಷಯವನ್ನು ಇನ್ನೊಂದು ಶಾಸನದಲ್ಲಿಯೂ ಹೇಳಿದೆ.[193]

ಮೇಲಿನ ಎರಡು ಶಾಸನಗಳಲ್ಲಿ ನೊಳಂಬವಾಡಿಯ ಪ್ರಸ್ತಾಪವಿಲ್ಲ. ಗಂಗವಾಡಿ-೯೬೦೦೦ದ ಪ್ರಸ್ತಾಪವಿದೆ. ಇದರೊಂದಿಗೆ ಮಾಸಿಯವಾಡಿ ನಾಡಿನ ೫ ಗ್ರಾಮಗಳು ಇವರ ಆಳ್ವಿಕೆಗೆ ಸೇರಿದ್ದಂತೆ ತಿಳಿಯುತ್ತದೆ. ಈ ಶಾಸನದಲ್ಲಿ ಕರಿವಿಡಿ-೩೦ರ ಉಲ್ಲೇಖವಿಲ್ಲ. ಎರಡೂ ಶಾಸನಗಳು ಒಂದು ಇನ್ನೊಂದರ ಪಾಠವಾಗಿದೆ. ಬಹುಶ: ನೊಳಂಬ ಉದಯಾದಿತ್ಯನ ಕಾಲಕ್ಕೆ ಚೋಳರ ವಶದಲ್ಲಿದ್ದ ಗಂಗವಾಡಿಯ ಕೆಲವು ಭಾಗ ಚಾಳುಕ್ಯರ ವಶವಾಗಿದ್ದಿರಬಹುದು. ಈ ಪ್ರದೇಶದ ಮೇಲೆ ನೊಳಂಬರು ಕೆಲವು ಕಾಲ ತಮ್ಮ ಆಧಿಪತ್ಯ ಸ್ಥಾಪಿಸಿರಬಹುದೆಂದು ಊಹಿಸಿಬಹುದು. ಮೇಲಿನ ಶಾಸನದ ಮುಂದುವರಿದ ಭಾಗದಲ್ಲಿ ಮಂತ್ರಿ ಪೆರ್ಗಡೆ ನರಸಿಂಘಯ್ಯನು ಸೋಮಸಿಂಘ ಭಳಾರರ ಕಾಲು ತೊಳೆದು ದಾನ ಮಾಡಿದ ವಿಷಯವನ್ನು ತಿಳಿಸುತ್ತದೆ.

ತೆಕ್ಕಲಕೋಟೆ ಶಾಸನದಲ್ಲಿ (ಕ್ರಿ.ಶ.೧೦೨೦) ಉಲ್ಲೇಖವಾಗಿರುವ ಬ್ರಹ್ಮಾದಿರಾಯನು ಬಹುಶಃ ಕೋಲಾರದ ಪ್ರದೇಶವನ್ನು ಆಳುತ್ತಿದ್ದ ಬ್ರಹ್ಮಾದಿರಾಯರ ವಂಶಕ್ಕೆ ಸೇರಿದ ಅರಸನಿರಬೇಕು. ಇರಿವನೊಳಂಬ ಘಟೆಯಂಕಕಾರನ ಹೆಸರಿನೊಂದಿಗೆ ತನ್ನನ್ನು ಗುರುತಿಸಿಕೊಂಡಿರುವುದರಿಂದ ಈತ ಅವನ ಸಾಮಂತನಾಗಿ ಈ ಪ್ರದೇಶವನ್ನು ಆಳುತ್ತಿದ್ದಿರಬಹುದು. ಇದೇ ಶಾಸನದಲ್ಲಿ ಇವನನ್ನು 'ಘಟೆಗನ ಗಂಧವಾರಣ'ವೆಂದೂ ಕರೆದಿದೆ. ಹೀಗಾಗಿ ಬ್ರಹ್ಮಾದಿರಾಯನ ವಂಶದವರು ನೊಳಂಬರೊಂದಿಗೆ ಕಂಪಿಲಿಯ ಕಡೆಗೆ ಹೋಗಿರಬಹುದು. ಇವನ ಬಗ್ಗೆ ದೊರೆಯುವ ಏಕಮಾತ್ರ ಉದಾಹರಣೆ ಇದಾಗಿರುವುದರಿಂದ ಹೆಚ್ಚಿನ ವಿವರಗಳು ಲಭ್ಯವಿಲ್ಲ. ಶಾಸನದಲ್ಲಿ ಇವನನ್ನು ಮಹಾಸೇನಾಪತಿ ಎಂದು ಕರೆದಿದೆ. ಇದಲ್ಲದೆ ಪತಿಬ್ರುತಾಚಾರ್ಯ, ದುಷ್ಟ ನಿಷ್ಠುರ, ಕುಟಿಳಕೌಟಿಲ್ಯ, ಕ್ಷುದ್ರವಿದ್ಯಾವಣ, ವಿಪ್ರಮಾರ್ತಂಡ, ಪ್ರತ್ಯಕ್ಷ ಚಾಣಕ್ಯ, ಪರಿವಾರ ವಜ್ರಪಂಜರ, ಕಲಿಕಾಲ ಬೃಹಸ್ಪತಿ ಮುಂತಾಗಿ ಕರೆಯಲಾಗಿದೆ.[194]

ಕ್ರಿ.ಶ. ೧೦೨೧ ರ ಹಿರೇಮ್ಯಾಗಳಗೇರಿ ಶಾಸನದಲ್ಲಿ ನೊಳಂಬನ ಸಾಮಂತನಾಗಿ ಪತಿಹಿತಾಂಜನೇಯ ಫಣಿರತ್ನಭೂಷಣ ಗಿರಿದುರ್ಗಮಲ್ಲ ಸಿಂಗನ ಕೇಸರಿ ಮುಂತಾದ ವಿಶೇಷಣಗಳನ್ನು ಹೊಂದಿದ್ದ ಸಾಮಂತನೊಬ್ಬನ ಉಲ್ಲೇಖವಿದೆ. ಈತ ಬಹುಶಃ ಸಿಂಧರ ಕುಲದವನಿರಬೇಕು.[195] ಹುಲಗುಂದ ತಾಲೂಕಿನ ಶಕ ೯೪೬/ಕ್ರಿ.ಶ. ೧೦೨೪ ರ ಶಾಸನದಲ್ಲಿ ಒಂದನೆಯ ಜಗದೇಕಮಲ್ಲನ ಕಾಲದಲ್ಲಿ ಘಂಟೆಯಂಕಕಾರ ನೊಳಂಬವಾಡಿಯನ್ನು, ಕರಿವಿಡಿ-೩೦ನ್ನು ಆಳುತ್ತಿರುವಾಗ ಇವನ ಪತ್ನಿ ಇರಿವ ಬೆಡಂಗ ಸತ್ಯಾಶ್ರಯನ ಮಗಳು ಮಹಾದೇವಿಯು ಮರವೊಳನ್ನು ಆಳುತ್ತಿದ್ದು ಅಲ್ಲಿಯ ಬಸದಿಗೆ ದಾನ ನೀಡಿದ್ದನ್ನು ತಿಳಿಸುತ್ತದೆ. ಇದರಲ್ಲಿ ಈತ ನೊಳಂಬವಾಡಿಗೆ ಸೇರಿದ ಕರಿವಿಡಿ-೩೦ನ್ನು ಆಳುತ್ತಿದ್ದಂತೆ ಹೇಳಿದೆ. ಉಳಿದ ಆಳ್ವಿಕೆ ಪ್ರದೇಶಗಳ ಉಲ್ಲೇಖವಿಲ್ಲ. ಆದ್ದರಿಂದ ಇವನು ತನ್ನ ಮಗನಿಗೆ ಪಟ್ಟಕಟ್ಟಿ ರಾಜ್ಯದ ಜವಾಬ್ದಾರಿಯನ್ನು ಅವನಿಗೆ ವಹಿಸಿರಬೇಕೆಂದು ಊಹಿಸಬೇಕಾಗುತ್ತದೆ. ಈ ಶಾಸನವು ಘಂಟೆಯಂಕಕಾರನ ಆಳ್ವಿಕೆ ತಿಳಿಸುವ ಅಂತಿಮ ಶಾಸನವಾಗಿದೆ.[196]

ಬಳ್ಳಾರಿ ತಾಲೂಕಿನ ಕಲ್ಕಂಭ ಶಕ ೯೪೯/ಕ್ರಿ.ಶ. ೧೦೨೮ ರ ಶಾಸನದಲ್ಲಿ ಜಗದೇಕಮಲ್ಲ ನೊಱಂಬಪಲ್ಲವ ಪೆರ್ಮಾನಡಿಯು ವಿಪ್ರನಾರಾಯಣದ ನೆಲೆವೀಡಿನಲ್ಲಿ ರಾಜ್ಯವಾಳುತ್ತಿದ್ದಂತೆ ತಿಳಿಸುತ್ತದೆ. ಈ ವಿಪ್ರನಾರಾಯಣವು ಈಗಿನ ಗಂಗಾವತಿ ಬಳಿಯ ವಿಪ್ರವೇ ಆಗಿದೆ.[197] ಕ್ರಿ.ಶ. ೧೦೩೦ ರ ಕಾಲದ ಇನ್ನೊಂದು ಶಾಸನದಲ್ಲಿ ಇದೇ ರಾಜನು ಆಳ್ವಿಕೆ ಮಾಡುತ್ತಿದ್ದು ದೇವರಿಗೆ ದಾನ ಮಾಡಿದ ವಿಷಯ ಉಲ್ಲೇಖಿಸಿದೆ.[198]

ಹರಪನಹಳ್ಳಿ ತಾಲೂಕು ತೆಲಗಿ ಕ್ರಿ.ಶ. ೧೦೩೦ ರ ಶಾಸನದಲ್ಲಿ ಚಾಲುಕ್ಯದೊರೆ ಜಗದೇಕಮಲ್ಲ ಜಯಸಿಂಗದೇವನ ಮಾಂಡಲಿಕ ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮಾನಡಿಯು ನೊಳಂಬವಾಡಿ–೩೨೦೦೦, ಕದಂಬಳಿಗೆ–೧೦೦೦, ಕೋಗಳಿ–೫೦೦, ಬಲ್ಲಕುಂದೆ–೩೦೦, ಕುದಿಯಪರವಿ–೨೦, ಕರಿವಿಡಿ–೩೦ ನ್ನು ಆಳುತ್ತಿದ್ದು ಹಿಂದಿನ ಶಾಸನಗಳಲ್ಲಿ ಹೇಳಿರುವ ಪಾರಂಪರಿಕ ನಾಡುಗಳನ್ನು ಉಲ್ಲೇಖಿಸಲಾಗಿದೆ.[199] ಕ್ರಿ.ಶ.೧೦೩೦ ರ ಸೋಮಲಾಪುರದ ಶಾಸನದಲ್ಲಿ ನೊಳಂಬರ ಪಾರಂಪರಿಕ ಬಿರುದುಗಳನ್ನು ಧರಿಸಿದ್ದ ನೊಳಂಬ ಕನಕರಸ ಎಂಬವವನು ದಾನ ನೀಡಿದ ಉಲ್ಲೇಖ ಬಂದಿದೆ. ನೊಳಂಬರ ವಂಶಾವಳಿಯಲ್ಲಿ ಈ ಹೆಸರು ಉಕ್ತವಾಗಿಲ್ಲ. ಹೀಗಾಗಿ ಇವನು ಉದಯಾದಿತ್ಯನ ತಮ್ಮ ಅಥವಾ ಅವನ ತಂದೆಯ ಒಡಹುಟ್ಟಿದವನಿರಬಹುದು.[200] ಬಳ್ಳಾರಿ ತಾಲೂಕು ದಮ್ಮೂರು ಕಗ್ಗಲ್ಲಿನ ಶಕ.೯೫೫/ಕ್ರಿ.ಶ. ೧೦೩೩ ರ ಶಾಸನದಲ್ಲಿ ಜಗದೇಕಮಲ್ಲ ನೊಳಂಬಪಲ್ಲವ ಪೆರ್ಮಾನಡಿಯು ಕಂಪಿಲಿಯಿಂದ ಆಳುತ್ತಿದ್ದಂತೆ ಹೇಳಿದೆ. ಇವನನ್ನು ಶಾಸನದಲ್ಲಿ ಪಲ್ಲವಾನ್ವಯ ಪೃಥ್ವೀವಲ್ಲಭ, ಪಲ್ಲವ ಕುಳತಿಲಕ ಅಮೋಘವಾಕ್ಯ ಕಾಂಚೀಪುರವೇಶ್ವರ ಎಂಬ ಪಾರಂಪರಿಕ ಬಿರುದುಗಳಿಂದ ಕರೆಯಲಾಗಿದೆ.[201] ಹಿರೇಮ್ಯಾಗಳಗೇರಿಯ ಕ್ರಿ.ಶ.೧೦೩೩ ರ ಶಾಸನದಲ್ಲಿಯೂ ಈ ಬ್ರಹ್ಮಾದಿರಾಜನ ಉಲ್ಲೇಖವಿದೆ. ಈ ಬ್ರಹ್ಮಾದಿರಾಜ ಬೇರೆಯವನಿರಬೇಕು. ಏಕೆಂದರೆ ಈ ಶಾಸನದಲ್ಲಿ ಇವನನ್ನು 'ಪೆರ್ಗಡೆ' ಎಂದು ಕರೆದಿದ್ದು 'ಸಮಸ್ತ ರಾಜ್ಯಭರನಿರೂಪಿತ ಮಹಾಮಾತ್ಯಪದವೀ ವಿರಾಜಮಾನ ಮಾನೋನ್ನತ ಪ್ರಭುಮಂತ್ರೋತ್ಸಾಹ ಸಕ್ತಿತ್ರಯ ಸಂಪನ್ನ' ಎಂದಿದೆ.[202]

ನಿಟ್ಟೂರಿನ ಕ್ರಿ.ಶ. ೧೦೩೪ರ ಶಾಸನದಲ್ಲಿ ಉದಯಾದಿತ್ಯದೇವ ರಾಜ್ಯವನ್ನು ಆಳುತ್ತಿರುವಾಗ ಕದಂಬಳಿಗೆ ಸಾಯಿರದ ಬಳಿಯ ಕಂಪಣ ಕುನ್ದುರು–೨೦ರ ಕನ್ನೂರು, ಬನ್ನಿಕೋಡು, ಹಪ್ಪವನಹಾಳು, ನಿಟ್ಟೂರನ್ನು ಬಿಲ್ಲಯ್ಯ ಗಾವುಂಡ ಆಳುತ್ತಿರುವಾಗ ಬಲ್ಲೇಶ್ವರದೇವರಿಗೆ ದಾನ ನೀಡಿದ ಉಲ್ಲೇಖವಿದೆ. ಈ ಶಾಸನದ ಪ್ರಕಾರ ಈ ಕಾಲಕ್ಕೆ ಕದಂಬಳಿಗೆ–೧೦೦೦ವು ಇವರಿಗೆ ಸೇರಿತ್ತೆಂಬ ಅಂಶವು ತಿಳಿಯುತ್ತದೆ.[203] ಇದೇ ವರ್ಷದ ತಲವಾಗಿಲು ಶಾಸನದಲ್ಲಿ ಜಗದೇಕಮಲ್ಲ ವಿಜಯಾದಿತ್ಯದೇವ ನೊಳಂಬಪಲ್ಲವ ಪೆರ್ಮಾನಡಿಯು ನೊಳಂಬವಾಡಿ–೩೨೦೦೦, ಕದಂಬಳಿಗೆ–೧೦೦೦, ಕೋಗಳಿ–೫೦೦, ಬಲ್ಲಕುಂದೆ–೩೦೦, ಕುದಿಹರಗೆ–೨೦, ಕರಿವಿಡಿ–೩೦, ಪಂಚಗ್ರಾಮವನ್ನು ಆಳುತ್ತಿದಂತೆ ಹೇಳಿದೆ.[204]

ಹಗರಿಬೊಮ್ಮನಹಳ್ಳಿ ಚಿಮ್ನಹಳ್ಳಿಯ ಕ್ರಿ.ಶ.೧೦೩೪ ರ ಶಾಸನದಲ್ಲಿ ಜಗದೇಕಮಲ್ಲ ನೊಳಂಬಪಲ್ಲವ ಪೆರ್ಮಾನಡಿದೇವರು ಕದಂಬಳಿಗೆ–೧೦೦೦, ಕೋಗಳಿ–೫೦೦, ಬಲ್ಲಕುಂದೆ–೩೦೦, ಕುದಿಹರವಿ–೨೦, ಕರಿವಿಡಿ–೨೦ ಮಾಸವಾಡಿನಾಡೊಳಗಣ ಭತ್ತಗ್ರಾಮ ಪಂಚಗ್ರಾಮಗಳನ್ನು ಆಳುತ್ತಿರುವಾಗ ಕೇತೆಯ ನಾಯಕನೆಂಬುವವನು ದುಗ್ಗರಾಜ ಪಂಡಿತರಿಗೆ ನೆಲ್ಲುದರೆಯ ಕಲಿದೇವರ್ಗ್ಗೆ ಕೊಟ್ಟ ದಾನದ ವಿವರವಿದೆ. ಈ ಶಾಸನದಲ್ಲಿ ೩೨೦೦೦ದ ಉಲ್ಲೇಖವಿಲ್ಲ.[205]

ಒರುವಾಯಿಯಲ್ಲಿ ಒಂದೇ ವಿಷಯವನ್ನು ಹೇಳುವ ಎರಡು ಶಾಸನಗಳು ದೊರೆತಿದ್ದು ಕ್ರಿ.ಶ. ೧೦೩೬ ಕ್ಕೆ ಸೇರುವ ಈ ಶಾಸನಗಳಲ್ಲಿ ಚಾಲುಕ್ಯ ದೊರೆ ಜಗದೇಕಮಲ್ಲದೇವನ (ಇಮ್ಮಡಿ ಜಯಸಿಂಹ) ಆಳ್ವಿಕೆಯ ಕಾಲದಲ್ಲಿ ಉದಯಾದಿತ್ಯನ ಮಗಳು ಚಾಳುಕ್ಯ ಜಗದೇಕಮಲ್ಲದೇವನ ಪತ್ನಿಯೂ ಆದ ದೇವಳದೇವಿಯನ್ನು ಪರಮ ಕಲ್ಯಾಣಾಭ್ಯುದಯ ಸಹಸ್ರಫಳ ಭೋಗಭಾಗಿನಿ ದ್ವಿತೀಯಲಕ್ಷ್ಮೀ ಸಮಾನೆಯರ್ ಜಗದೇಕಮಲ್ಲದೇವರ ವಿಸಾಳೋರಸ್ತಳ ಜಯಾಂಗನಾಲಬ್ಧೆ ನೊಣಂಬನಣುಗಿ ಮುಂತಾಗಿ ಹೊಗಳಿದೆ. ಈಕೆಯು ಸತ್ತಾಗ ಅವಳ ಅಸ್ಥಿಯನ್ನು ಗಂಗೆಯಲ್ಲಿ ವಿಸರ್ಜಿಸಿ ಬಂದ ಮಾಧವ ಷಣಂಗಿ (ಷಡಂಗಿ), ಕೃಷ್ಣಯ್ಯ ಮತ್ತು ತುಪ್ಪದ ದೇವಯ್ಯ ಎಂಬುವವರಿಗೆ ನೊಳಂಬ ಉದಯಾದಿತ್ಯನು ಒರುವಾಯಿಯನ್ನು ದಾನವಾಗಿ ನೀಡುತ್ತಾನೆಂದಿದೆ.[206]

ಮುದಿಹಡದಿಯ ಶಾಸನದಲ್ಲಿ ಕ್ರಿ.ಶ. ೧೦೩೬ ರಲ್ಲಿ ಬ್ರಹ್ಮಾಧಿರಾಜನು ಪಡದೆ ಹನ್ನೆರಡನ್ನು ಆಳುತ್ತಿದ್ದಂತೆ ಹೇಳಿದೆ. ಹಿರೇಮ್ಯಾಗಳಗೇರಿ ಶಾಸನದಲ್ಲಿನ ವಿಶೇಷಣಗಳನ್ನೇ ಇಲ್ಲಿಯೂ ಬಳಸಲಾಗಿದೆ. ಜಗದೇಕಮಲ್ಲ ಉದಯಾದಿತ್ಯನನ್ನು ಜಗದೇಕಮಲ್ಲ ನಿರ್ಮಡಿ ನೊಳಂಬ ಎಂದು ಕರೆದಿದೆ. ಈ ಪಡದೆ ಕದಂಬಳಿಗೆ-೧೦೦೦ ದಲ್ಲಿತ್ತು.[207] ಮಾನ್ಯರ ಮಸಲವಾಡ ಕ್ರಿ.ಶ.೧೦೩೬ರ ಶಾಸನದಲ್ಲಿ ಚಾಳುಕ್ಯ ಜಗದೇಕಮಲ್ಲದೇವ ಆಳುತ್ತಿರುವಾಗ, ನೊಳಂಬ ಪಲ್ಲವ ಪೆರ್ಮಾನ[ಡಿ] [ಕೋಗಳಿ]-೫೦೦, ಕದಂಬಳಿಗೆ-೧೦೦೦, ಬಲ್ಲಕುಂದೆ-೩೦೦ ರೊಳಗಣ ಪಂಚಗ್ರಾಮವನ್ನು ಆಳ್ವಿಕೆ ಮಾಡುತ್ತಿರುವಾಗ ಶ್ರೀಮತ್ತುಗ್ಗುರುದೇವರು ಕೋಗಳಿ-೫೦೦ ರೊಳಗಣ ಮೊಸಳೆ ಮಡುವನ್ನು ಆಳುತ್ತಿದ್ದು ಮೂಲಸ್ಥಾನದ ಕಲಿದೇವರಿಗೆ ಪನ್ನೆರಡರ ಮನ್ನೆಯ ಅಯ್ಯಣಭೀವ ಜೋಗರಸನು ಮಾರಗಾವುಂಡನು ರಾಚಮ್ಮಗಾವುಂಡನು ಭೋಗಾಯ್ಚಯ್ಯಂ ಸಹಾದೇವಯ್ಯನು ಇದ್ದು ಇವರ ಸನ್ನಿದಾನದಲ್ಲಿ ಭೂದಾನ ಮಾಡಿದಂತೆ ತಿಳಿಯುತ್ತದೆ.[208] ಇದು ಉದಯಾದಿತ್ಯನನ್ನು ಹೆಸರಿಸುವ ಅಂತಿಮ ಶಾಸನ.

**ಜಗದೇಕಮಲ್ಲ ಇಮ್ಮಡಿ ನೊಳಂಬ**

ಉದಯಾದಿತ್ಯನ ನಂತರ ಅವನ ಮೊದಲ ಮಗ ಜಗದೇಕಮಲ್ಲ ಇಮ್ಮಡಿ ನೊಳಂಬನು ಪಟ್ಟಕ್ಕೆ ಬರುತ್ತಾನೆ. ಉದಯಾದಿತ್ಯನು ಕ್ರಿ.ಶ. ಸುಮಾರು ೧೦೩೭ ರಲ್ಲಿ ಗತಿಸಿರಬೇಕು. ಹಡಗಲಿ ತಾಲೂಕು, ಸೋಗಿ ಗ್ರಾಮದ ಕ್ರಿ.ಶ.೧೦೩೮ರ ಶಾಸನದಲ್ಲಿ ಚಾಲುಕ್ಯದೊರೆ ಜಗದೇಕಮಲ್ಲ ಆಳುತ್ತಿರಲು ಜಗದೇಕಮಲ್ಲ ಇಮ್ಮಡಿ ನೊಳಂಬನು ಮಾಸೆಯವಾಡಿ-೧೪೦, ೭೦ ಮುಂತಾದ ನಾಡುಗಳನ್ನು ಆಳುತ್ತಿದ್ದಂತೆ ಹೇಳಿರುವುದರಿಂದ ಉದಯಾದಿತ್ಯನ ನಂತರ ಇವನು ಪಟ್ಟಕ್ಕೆ ಬಂದಿರುವುದು ಸ್ಪಷ್ಟವಾಗಿದೆ.[209]

ಕಂಚಿಕೇರಿಯ ಕ್ರಿ.ಶ.೧೦೩೯ ರ ಶಾಸನದಲ್ಲಿ ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮಾನಡಿಯು ಕೋಗಳಿ–೫೦೦, ಕದಂಬಳಿಗೆ–೧೦೦೦ ವನ್ನು ಆಳುತ್ತಿದ್ದಂತೆಯೂ ಅವನ ಪೆರ್ಗ್ಗಡೆ ಬಾಚಿಮಯ್ಯನು ... ಗಂಚಿಕೆರೆಯನ್ನು ಆಳುತ್ತಿದ್ದಾಗ ಸಂಧಿವಿಗ್ರಹಿ ಅರಿದಾಸಯ್ಯನೆಂಬುವನು ಲಿಂಗ ಪ್ರತಿಷ್ಠೆ ಮಾಡಿ ಗದ್ದೆಯನ್ನು ದಾನ ಮಾಡಿದ ಉಲ್ಲೇಖವಿದೆ.[210] ಮೊಳಕಾಲ್ಮೂರು ಸಿದ್ದಾಪುರದ ಕಾಲದ ಉಲ್ಲೇಖವಿಲ್ಲದ ತ್ರುಟಿತವಾದ ಶಾಸನದಲ್ಲಿ ಜಗದೇಕಮಲ್ಲ ನೊಳಂಬ ಪಲ್ಲವನು ಕಂಪಿಲಿಯಿಂದ ಆಳುತ್ತಿದ್ದಂತೆ ತಿಳಿಯುತ್ತದೆ.[211] ಬಳ್ಳಾರಿ ಜಿಲ್ಲೆ, ಬಾದನಹಟ್ಟಿಯ ತ್ರುಟಿತ ಶಾಸನದಲ್ಲಿ ಜಗದೇಕಮಲ್ಲ ನೊಳಂಬನ ಉಲ್ಲೇಖ ಬಂದಿದ್ದು ಇವನು ಬಹುಶಃ ಇಮ್ಮಡಿ ಜಗದೇಕಮಲ್ಲ ನೊಳಂಬನಿರಬಹುದು.[212] ಹಡಗಲಿ ತಾಲೂಕಿನ ತುಂಬಿಗೆರೆ (ಕ್ರಿ.ಶ.ಸು.೧೦೪೦) ಶಾಸನದಲ್ಲಿ ಜಗದೇಕಮಲ್ಲ ಇಮ್ಮಡಿ ನೊಳಂಬ...... ಪೆರ್ಮಾನಡಿ [ಕದಂಬಳಿಗೆ]–೧೦೦೦, ಕೋಗಳಿ–೫೦೦, ಕರಿವಿಡಿ–೩೦, ಮುಂತಾದ ನಾಡುಗಳನ್ನು ಆಳುತ್ತಿರುವಾಗ ವೆರ್ಗ್ಗಡೆ ಚನ್ದಿಮಯ್ಯ ನಾಯಕನು ರಾಜನ ಅನುಮತಿ ಪಡೆದು ತುಂಬಿಗೆರೆಯ ಮೂಲಸ್ಥಾನದ ದೇವರಿಗೆ, ಮಠದ ನೈಷ್ಠಿಕ ತಪೋಧನರಿಗೆ ಕೊಟ್ಟ ದಾನವನ್ನು ಉಲ್ಲೇಖಿಸಿದೆ.[213]

ಸಿರೂರಿನ ಕ್ರಿ.ಶ. ೧೦೪೨ರ ಶಾಸನದಲ್ಲಿ ಜಗದೇಕಮಲ್ಲ ಇಮ್ಮಡಿ (ನಿರ್ಮಡಿ) ನೊಳಂಬ ಪಲ್ಲವ ಪೆರ್ಮಾನಡಿಯು ಮಾಸೆಯವಾಡಿ–೧೪೦ ರ ಬಳಿಯ ಪಂಚಗ್ರಾಮವನ್ನು ಆಳುತ್ತಿರುವಾಗ ಕುಂಚವಡು ದಾಸಯ್ಯನು ಸಿರಿಪುರದ ಸಿರಿವಾಗಿಲನ್ನು ಮಾಡಿಸಿದ ಉಲ್ಲೇಖವಿದೆ. ಇದಕ್ಕೆ ಸಾಕ್ಷಿಯಾಗಿ ಆ ಗ್ರಾಮದ ಐವರು ಗಾವುಂಡರನ್ನು ಹೆಸರಿಸಿದೆ.[214] ಅವರಗೆರೆಯಲ್ಲಿ ಮೇಲಿನ ಶಾಸನದ ಕಾಲದಲ್ಲಿ ಜಯಸಿಂಘದೇವನ ರಾಜ್ಯದಲ್ಲಿ ಇಮ್ಮಡಿ ನೊಳಂಬನು ಬಲ್ಲಕುಂದೆ –೩೦೦, ಕೋಗಳಿ–೫೦೦, ಕದಂಬಳಿಗೆ–೧೦೦೦ ವನ್ನು ಆಳುತ್ತಿರುವಾಗ ಭ್ರಾಂತಿಕಡು–೩೦, ಬಸವುರ–೧೨, ಮುಚ್ಚನೂರು–೧೨, ಒಟ್ಟು ೫೪ ಬಾಡಗಳನ್ನು ಆಳುತ್ತಿದ್ದಾಗ ಇಂದರಗಾವುಂಡನ ಮಗ ಬಮ್ಮಿಸೆಟ್ಟಿಗೆ ದಾನ ಮಾಡಿದ ಉಲ್ಲೇಖವಿದೆ.[215] ಚಿರಸ್ತಹಳ್ಳಿಯ ಕ್ರಿ.ಶ.೧೦೪೪ ರ ಶಾಸನದಲ್ಲಿ ಇಮ್ಮಡಿ ನೊಳಂಬನು ಕೋಗಳಿ, ಕದಂಬಳಿಗೆ ಆಳುತ್ತಿರುವಾಗ ದುಗ್ಗತಿಪಂಡಿತರ ಶಿಷ್ಯನಾದ ಮಲ್ಲಿಕಯ್ಯ ಎಂಬಾತನು ಆದಿತ್ಯ, ಮಾತೃಕ, ವಿನಾಯಕ ವಿಗ್ರಹಗಳನ್ನು ಮತ್ತು ಪಂಚಮಹಾಶಬ್ದವನ್ನು ಮಾಡಿಸಿದ ಉಲ್ಲೇಖವಿದೆ.[216] ಕಾಲದ ಉಲ್ಲೇಖವಿಲ್ಲದ ತುಂಬಿಗೆರೆ ಶಾಸನದಲ್ಲಿ ಜಗದೇಕಮಲ್ಲ ನಿರ್ಮ್ಮಡಿ ನೊಳಂಬ ಪೆರ್ಮಾನಡಿ ಆಳುತ್ತಿದ್ದ ಪ್ರದೇಶಗಳ ಉಲ್ಲೇಖವಾಗಿದೆ. ಪೆರ್ಗಡೆ ಚನ್ದಿಮಯ್ಯ ನಾಯಕರು ತುಂಬಿಗೆರೆಯ ಮೂಲಸ್ಥಾನ ದೇವರಿಗೆ ದಾನ ಮಾಡಿದ ವಿಷಯ ತಿಳಿಸುತ್ತದೆ.[217] ಈ ಶಾಸನದ ನಂತರ ಇವನ ಆಳ್ವಿಕೆಯನ್ನು ಕುರಿತ ಯಾವ ಶಾಸನಗಳು ದೊರೆಯುವುದಿಲ್ಲ. ಇವನ ನಂತರ ಇವನ ತಮ್ಮನಾದ ತ್ರೈಲೋಕ್ಯಮಲ್ಲ ನನ್ನಿನೊಳಂಬನು ಪಟ್ಟಕ್ಕೆ ಬಂದಿರಬೇಕು. ಕಲ್ಯಾಣಿ ಚಾಳುಕ್ಯರ

ಜಯಸಿಂಹನ ರಕ್ಷಣೆಯಲ್ಲಿ ಈ ಇಮ್ಮಡಿ ನೊಳಂಬನು ಸುರಕ್ಷಿತನಾಗಿದ್ದುದರ ಜೊತೆಗೆ ಕದಂಬಳಿಗೆ ಸಾವಿರವನ್ನು ತನ್ನ ರಾಜ್ಯಾಡಳಿತಕ್ಕೆ ಸೇರಿಸಿಕೊಡಿರುತ್ತಾನೆ.

### ತ್ರೈಲೋಕ್ಯಮಲ್ಲ ನನ್ನಿನೊಳಂಬ

ಇವನ ಮೊದಲ ಉಲ್ಲೇಖ ಶಾಸನವು ಸಿರಿವಾರ ಗ್ರಾಮದಲ್ಲಿ ದೊರೆತಿದ್ದು ಇದು ಶಕ ೯೬೬ ನೆಯ ತಾರಣ, ವೈಶಾಖ ಶು.೫ ಬ್ರಹಸ್ಪತಿವಾರ ಅಂದರೆ ಕ್ರಿ.ಶ. ೫-೪-೧೦೪೪ ಕ್ಕೆ ಸರಿಹೊಂದುತ್ತದೆ. ಚಾಳುಕ್ಯ ತ್ರೈಳೋಕ್ಯಮಲ್ಲ ಆಹವಮಲ್ಲದೇವನು ಪೊಟ್ಟಳಕೆರೆಯಿಂದ ಆಳುತ್ತಿರುವಾಗ ತ್ರೈಳೋಕ್ಯಮಲ್ಲ ನನ್ನಿನೊಳಂಬಾಧಿ ರಾಜನಿಗೆ ಪಟ್ಟವನ್ನು ಕಟ್ಟಿರುವುದು ತಿಳಿಯುತ್ತದೆ. ಇದರ ನೆನಪಿನಲ್ಲಿ ಬಲ್ಲಕುಂದೆ-೩೦೦ ರೊಳಗಣ ಕಪ್ಪೆಕಲ್ಲಿನ ಊರೊಡೆಂಯ ಪುಲಿಂಯಣ್ಣನ ಮೇಲಧಿಕಾರಿಯಾದ ಉದಯಾದಿತ್ಯನ ಪಾದಪಂಕಜ ಭ್ರಮರನೆಂದು ಹೇಳಿಕೊಂಡಿರುವ ಪಲ್ಲವರಸನ ಸಮ್ಮುಖದಲ್ಲಿ ಜೇಷ್ಠರಾಶಿಭಳಾರರಿಗೆ ಕಪ್ಪೆಕಲ್ಲಸ್ಥಾನವನ್ನು ಕೊಟ್ಟಿದ್ದನ್ನು ತಿಳಿಸುತ್ತದೆ. ಆದರೆ ಇಲ್ಲಿ ಬರುವ ಪಲ್ಲವ ಅರಸ ಯಾರು ಎಂಬುದು ಸ್ಪಷ್ಟವಾಗುತ್ತಿಲ್ಲ. ಇದೇ ಶಾಸನದಲ್ಲಿ ಈ ಪಲ್ಲವರಸನನ್ನು ಶೌರ್ಯಗುಣಭರಣ, ಪುರುಷ ವಿಭೂಷಣ ನುಡಿದು ತಪ್ಪಿಲ್ಲ, ಛಲಕೆ ಬಲ್ಲಾಲೆಯಂ, ಸ್ವಾಮಿಭೃತ್ಯ, ಭೃತ್ಯ ಚಿನ್ತಾಮಣಿ, ಸತ್ಯಕಾನೀನಂ, ಮಾರ್ಬ್ಬಲ ಸಿಂಗ, ಪರಬಲ ಧೂಮಕೇತು, ಹಯವತ್ಸರಾಜ, ಸಂಗ್ರಾಮ ಜತ್ತಲಂಟ, ಪೆರೆಗೆ ಪಳಿವರ ಪೆಣ್ಡಿರಗಣ್ಡನೆಂಬ ಅನೇಕ ವಿಶೇಷಣಗಳಿಂದ ಕರೆಯಲಾಗಿದೆ.[218]

ವಡ್ಡನಗೆರೆಯ ಕ್ರಿ.ಶ. ೧೦೪೪ ರ ತಾರಣ ಸಂವತ್ಸರ ಪೌಶ್ಯಶುದ್ಧ ತ್ರಯೋದಸಿ ಆದಿತ್ಯವಾರದ ಉಲ್ಲೇಖವಿರುವ ಶಾಸನದಲ್ಲಿ ತ್ರೈಳೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾನಡಿ ಕೋಗಳಿ-೫೦೦, ಕದಂಬಳಿಗೆ-೧೦೦೦, ಬಲ್ಲಕುಂದೆ-೩೦೦, ಕಣಿಯಕಲ್-೩೦೦, ಕುದಿಯಾರವಿ-೭೦, ಕರಿವಿಡಿ-೩೦ ನ್ನು ನಿಧಿ ನಿಧಾನ ನಿಕ್ಷೇಪಂ ಸಹಸ್ರದಂಡ ( ಇಲ್ಲಿ ಸಹಸ್ರ ದಂಡ ಎಂಬ ಪದವನ್ನು ಶಾಸನ ಕವಿ ಅಥವಾ ಲಿಪಿಕಾರ ಯಾವ ಅರ್ಥದಲ್ಲಿ ಬಳಸಿರುವನೆಂದು ತಿಳಿಯುತ್ತಿಲ್ಲ. ಅದನ್ನು ಬಿಡಿಸಿದಾಗ ಸಹಸ್ರ ಎಂದರೆ ಸಾವಿರ ಸಂಖ್ಯೆಯೂ ಆಗಬಹುದು. ದಂಡ ಎಂದರೆ ಕೋಲು, ಜುಲ್ಮಾನೆ, ನಷ್ಟ, ನಮಸ್ಕಾರ ಎಂಬ ಅರ್ಥವನ್ನು ಕೊಡುತ್ತದೆ. ಈ ಸಹಸ್ರದಂಡವನ್ನು ಪ್ರದೇಶವಾಚಿಯಾಗಿ ಬಳಸಿರಬಹುದೇ ಏಕೆಂದರೆ ನಿಧಿ ನಿಕ್ಷೇಪದ ಜೊತೆ ಸಹಸ್ರದಂಡ ಇತ್ಯಾದಿ ಆಳುತ್ತಿದ್ದನೆಂದು ಉಲ್ಲೇಖಿಸಿದೆ.) ಇತ್ಯಾದಿ ಆಳುತ್ತಿರುವಾಗ, ನಾಗಯ್ಯನಾಯಕನು ಬೆಳ್ವನೂರ ಚೆಲ್ತುಱುವ (ಪ್ರನ್ನಾಯದ ಸುಂಕ)ನ್ನು ಆಳುತ್ತಿರುವಾಗ ನಾಗಯ್ಯನಾಯಕ, ಊರೊಡೆಯ ಮಾರಮಯ್ಯ ಮತ್ತು ಅಲ್ಲಿಯ ಮಹಾಜನರು ಸೇರಿ ಬೆಳ್ವನೂರ ಮೂಲಸ್ಥಾನದ ಕಲಿದೇವರಿಗೆ ದಾನವನ್ನು ಕೊಟ್ಟ ಉಲ್ಲೇಖವಿದೆ. ನಾಗಯ್ಯ ನಾಯಕನನ್ನು ಸಮಸ್ತಧರಾಮರ ಚರಣಸ್ಮರಣ ಪರಿಣಿತಂ, ಮಚ್ಚರಿಪರಗಣ್ಡ, ವನಗಜಕೇಸರಿ ಮುಂತಾದ ವಿಶೇಷಣಗಳಿಂದ ಕರೆದಿದೆ.[219]

ಸತ್ತೂರಿನ ಕ್ರಿ.ಶ.೨೪-೧೨-೧೦೪೪ ರ ಇದೇ ಅರಸನ ಆಳ್ವಿಕೆಯಲ್ಲಿ ಇವನ ದಂಡನಾಯಕ ಮಾರ್ತ್ತಣ್ಡಯ್ಯನಳಿಯ ಸತ್ತಿಯೂರೊಡೆಯ ಸೋವಿಮಯ್ಯನು, ಸಮಸ್ತ ಗುಣಸಂಪನ್ನ ರಣಮೂರ್ಖರಾಮಂ, ಯಾದ[ವ] ವಂಶೋದ್ಭವ ಮಾಸೆವಾಡಿ-೧೪೦೦ ರ ಮನ್ನೆಯ ಕುಪ್ಪರಸನು ಸೇರಿ ಸತ್ತಿಯೂರ ಮಹಾದೇವರಿಗೆ, ದವದಸಿಗನ ಮಗ ಧರ್ಮಶಿವನಿಗೆ ಗದ್ದೆ, ನಂದಾದೀವಿಗೆ ಮತ್ತು ಗಾಣವನ್ನು ದಾನ ಮಾಡಿದ ವಿಷಯ ತಿಳಿಯುತ್ತದೆ.[220] ಹಾವಿನಹಾಳು ವೀರಾಪುರದ ಕ್ರಿ.ಶ.೫-೮-೧೦೪೫ ರ ಶಾಸನದಲ್ಲಿ ಇದೇ ಅರಸನ ಉಲ್ಲೇಖವಿದ್ದು ಇವನ ಸಾಮನ್ತ ಉದಯಾದಿತ್ಯ ಸಿನ್ದರಸನೆಂಬುವನು ದೊಣ್ಡವಟ್ಟಿಯೂರೊಡೆಯ ಪಾಲಿಮಯ್ಯ ದೊಣ್ಡವಟ್ಟಿಯಲ್ಲಿ ಮನ್ನೆಯ ಸಾಮ್ಯದ ತೆರಿಗೆಯನ್ನು ದಾಸ ಮಾಡಿದ ವಿಷಯ ತಿಳಿಸುತ್ತದೆ.[221] ಇಲ್ಲಿ ಉಲ್ಲೇಖವಾಗಿರುವ ಸಿನ್ದರಸನನ್ನು ಮಹಾಸಾಮನ್ತ ಕಲಿಯುಗರೇವನ್ತ, ನನ್ನಿಗಾಶ್ರಯ ಸಮರ ಮಹೇಶ್ವರ ಭೋಗಾವತೀ ಪುರವರೇಶ್ವರ ಮತ್ತಗಜ ಮ ... ನೀ ಕಮ[ನುಣ್ಡ] ಬಿರುದರ ಜವಂ, ಬಿರುದ ಮನ್ನೆಯ ವೇಶ್ಯಾಭೊಜಂಗನಾಮಾದಿ ಸಮಸ್ತ ಪ್ರಶಸ್ತಿಸಹಿತಂ ಎಂದು ಉಲ್ಲೇಖಿಸಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಕಾಣಬರುವ ಪ್ರಮುಖ ಮಾಂಡಳಿಕ ವಂಶಗಳಲ್ಲಿ ಸಿಂಧರದೂ ಒಂದು. ಇವರು ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ ಮತ್ತು ಕಳಚೂರ್ಯರ ಮಾಂಡಲಿಕರಾಗಿ ಬಳ್ಳಾರಿಯ ಕುರುಗೋಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿರುತ್ತಾರೆ. ಇವರು ಸಣ್ಣ ಮಾಂಡಲೀಕರಾಗಿ ರಾಜ್ಯವಾಳಿದ್ದಾರೆ. ಇವರನ್ನು ಕುರುಗೋಡಿನ ಸಿನ್ದರೆಂದು ಇತಿಹಾಸಕಾರರು ಗುರುತಿಸುತ್ತಾರೆ.

ಈ ವಂಶದ ಉದಯಾದಿತ್ಯ ಸಿಂದರಸನು ಕ್ರಿ.ಶ. ೯೪೭ ರ ಕುಡುತಿನಿಯ ಶಾಸನದಲ್ಲಿ ಬಂದಿರುವ ಪ್ರಾರಂಭದ ಸಿಂದರ ಅಞಬಲ್ಲದನ ಮರಿಮಗನಿರಬಹುದು. ಈ ಇಬ್ಬರ ನಡುವಿನ ಎರಡು ತಲೆಮಾರುಗಳ ಅರಸರ ಹೆಸರುಗಳು ಕಂಡುಬರುವುದಿಲ್ಲ.[222]

ಮೊರಿಗೇರಿಯ ಕ್ರಿ.ಶ.೧೦೪೫ ರ ಶಾಸನದಲ್ಲಿ ನೊಳಂಬರ ವಂಶಾವಳಿಯನ್ನು ನೀಡಲಾಗಿದೆ.



ಈ ತ್ರೈಲೋಕ್ಯಮಲ್ಲ ನನ್ನಿನೊಳಂಬ ಫಲ್ಲವ ಪೆರ್ಮ್ಮಾನಡಿಯು ಬಲ್ಲಕುಂದೆ-೩೦೦, ಕೋಗುಳಿ-೫೦೦, ಕದಂಬಳಿಗೆ-೧೦೦೦, ಕುದಿಯುಪರವಿ-೭೦, ಕರಿವಿಡಿ-೩೦, ಪಂಚಗ್ರಾಮಗಳು, ನೊಳಂಬವಾಡಿ-೩೨೦೦೦ ವನ್ನು ಚಲಪ್ರವೃತ್ತಿ (ಸ್ಥಿರ ಸಂಕಲ್ಪ)ದಿಂದ ಆಳುತ್ತಿರಲು ಅವನ ದಂಡನಾಯಕ ತಿಕಣ್ಣ ಪ್ರಮುಖ ಲೆಂಕಸಾಸಿರ್ವರು, ಅಮ್ಮೃಳೆ, ನೆಲ್ಲಿಕುದಿರು, ಸೊನ್ನ, ಪೊಱಲ್ಗುಂದೆ, ಸೂಗೂರು, ಮೋರಿಂಗೆರೆ ಮೊದಲಾದ ಆರು ಗ್ರಾಮಗಳನ್ನು ಆಳುತ್ತಿರುವಾಗ ಉದಯಾದಿತ್ಯನಿಗೆ ಪರೋಕ್ಷ ವಿನಯವಾಗಿ ೨೪ ಜನರಿಗೆ ಛತ್ರವನ್ನು, ನೊಳಂಬೇಶ್ವರನನ್ನು ಮತ್ತು ತಮ್ಮ ಹೆಸರಿನ ಲೆಂಕೇಶ್ವರವನ್ನು ಮಾಡಿಸಿ ಅವುಗಳ ಪೂಜೆಗೆ ಹಾಗು ವಿದ್ಯಾದಾನಕ್ಕೆ ಅರಸನಿಂದ ಸವಂಟಿಯ ಪಾಳನ್ನು ಪಡೆದು ಅದಕ್ಕೆ ಶಿವಪುರವೆಂದು ಹೆಸರಿಟ್ಟಿದುದನ್ನು ಉಲ್ಲೇಖಿಸಿದೆ. ಮುಂದುವರಿದು ರಾಜನು ಪೂವಿನಪಡಂಗಿಲೆಯ ನೆಲೆವೀಡಿನಲ್ಲಿದ್ದಾಗ ಘಟ್ಟಿಯರಸನು ಕೋಗಳಿ ಮಠದ ಮಳೆಯಾಳಪಂಡಿತನ ಶಿಷ್ಯ ಜ್ಞಾನೇಶ್ವರಪಂಡಿತ ಅವನ ಶಿಷ್ಯ ಸೋಮೇಶ್ವರನ ಕಾಲನ್ನು ತೊಳೆದು ದಾನ ನೀಡಿದ ವಿಷಯ ತಿಳಿಸುತ್ತದೆ.[223]

ಚಿಕ್ಕ ಅಂತಾಪುರದ ತ್ರುಟಿತ ಶಾಸನದಲ್ಲಿ ನನ್ನಿನೊಳಂಬನ ಆಳ್ವಿಕೆಯ ಉಲ್ಲೇಖ ಬಂದಿದೆ.[224] ಕೋಗಳಿಯ ಕಾಲದ ಉಲ್ಲೇಖವಿಲ್ಲದ ಶಾಸನದಲ್ಲಿ ಚಾಳುಕ್ಯ ತ್ರೈಳೋಕ್ಯಮಲ್ಲದೇವರು ರಾಜ್ಯವಾಳುತ್ತಿರುವಾಗ ಸಮಸ್ತ ಮಿಥ್ಯೈಕಾನ್ತ ಪ್ರವಾದಿ ಮದಕರಿ ಕಿಸೋರಕೇಸರಿ ಶ್ರೀಮದಿನ್ದ್ರಣನ್ದಿಪಂಡಿತ ಪಾದಪಂಕಜ ಭೃಂಗರಪ್ಪ, ಬೇರುಣ್ಡ, ಚಂದ್ರಣನ್ದಿಪಂಡಿತ ಕೈರಮಚಂದ್ರ ಕೀರ್ತಿಮಯ್ಯ ಮುಂತಾದವರು (ಸುಮಾರು ೨೭ ಜನರ ಹೆಸರಿನ ಉಲ್ಲೇಖವಿದೆ.) ಪಾದಮೂಲ ಪರಿವಾರ ನಕರ ಮಹಾಜನ ಗಾವುಣ್ಡಗಳು ಪಂಚಮಟಸ್ಥಾನ ಮ ... ತೊಂಭತ್ತಱುಸಾಸಿರ್ವ್ವರು ಸೇರಿ ಲೆಂಕ ಪೋಚಣ್ಣನ ತಮ್ಮ ನೊಳಂಬಸೆಟ್ಟಿ, ಅಲ್ಲಿಯ ಸ್ಥಾನದ ಗುರುಗಳ್ಗೆ ಪಾದಪೂಜೆಯಂ ಕೊಟ್ಟು ಛತ್ರಕ್ಕೆ ಭೂದಾನ ಮಾಡಿದ ಉಲ್ಲೇಖವಿದೆ. ಇದೇ ಶಾಸನ ಮುಂದುವರಿದು ತ್ರೈಳೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿಯು ಲೆಂಕ ನೊಳಂಬಸೆಟ್ಟಿ ಮತ್ತು ಪದ್ಮಾವತಿಯಬ್ಬೆಯು ಮತ್ತು ಅನೇಕ ಗಾವುಂಡರು, ಕೋಗಳಿಯ ನಕರರು ಸೇರಿ ೯೬೦೦೦ ನಕರರ ಸಮಕ್ಷಮದಲ್ಲಿ ಛತ್ರಕ್ಕೆ ಭೂದಾನ ನೀಡಿದ ಉಲ್ಲೇಖವಿದೆ.[225]

ಕಾಲದ ಉಲ್ಲೇಖವಿಲ್ಲದ ತ್ಯಾವಣಿಗೆಯ ಎರಡು ಶಾಸನಗಳು ತ್ರೈಳೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿಯು ಚಾಳುಕ್ಯರೊಂದಿಗೆ ಸೇರಿ ಚೋಳರ ಮೇಲೆ ಯುದ್ಧ ಮಾಡಿದ ವಿಷಯವನ್ನು ಉಲ್ಲೇಖಿಸಿವೆ.[226] ಬೇವೂರು ಗ್ರಾಮದ ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಈ ಶಾಸನದಲ್ಲಿ ಮಂಡಲೇಶ್ವರ ನೊಳಂಬಾಧಿರಾಜನ ಹೆಸರನ್ನು ಹಾಗೂ ದಾನ ಕೊಟ್ಟಿದ್ದನ್ನು ಉಲ್ಲೇಖಿಸಿದೆ.[227] ಕಾಲದ ಉಲ್ಲೇಖವಿಲ್ಲದ ಸಿಂದಿಗೆರೆ ಶಾಸನದಲ್ಲಿ ಚಾಳುಕ್ಯ ತ್ರೈಳೋಕ್ಯಮಲ್ಲ ದೇವನು ರಾಜ್ಯವಾಳುತ್ತಿರಲು ತ್ರೈಳೋಕ್ಯಮಲ್ಲ ಇರಿವನೊಳಂಬ ನಾರಸಿಂಘದೇವರ ದತ್ತಿಯನ್ನು

ಉಲ್ಲೇಖಿಸಿದ್ದು ಇವನ ಮಹಾಮಂಡಳೇಶ್ವರ ವೈದುಂಬಾಭರಣ ಮಣಿಬೇತ ಮಹಾರಾಜನು ಬಲ್ಲಕುಂದೆ-೩೦೦ ರೊಳಗಣ ಪಟ್ಟಣದ ಧರ್ಮದೇತಕ್ಕೆ ಬಿಟ್ಟ ಭೂಮಿಯ ವಿಷಯ ಉಲ್ಲೇಖವಾಗಿದೆ. ಇಲ್ಲಿ ವೈದುಂಬ ಮಣಿಬೇತ ಮಹಾರಾಜನನ್ನು ಅನೇಕ ಸಮರ ಸಂಘಟ್ಟನೋಪಲಬ್ಧ, ವಿಜೆಯಲಕ್ಷ್ಮೀ ಸಮಾಲಿಂಗಿತ ವಿಶಾಲ ವಕ್ಷಸ್ಥಳ, ಮನುಜತ್ರಿಣೇತ್ರ, ಸೂರ್ಯನಾರಾಯಣ, ಲೋಕದೊಳ್ಗಣ್ಡ, ಅಷ್ಟಮಹಾಸಿದ್ಧಿ ಇತ್ಯಾದಿಯಾಗಿ ಹೊಗಳಿದೆ.[228]

ಮೊರಿಗೇರಿಯ ಕ್ರಿ.ಶ.೧೦೪೬ ರ ಶಾಸನದಲ್ಲಿ ಚಾಳುಕ್ಯ ತ್ರೈಳೋಕ್ಯಮಲ್ಲದೇವನು ರಾಜ್ಯವಾಳುತ್ತಿರುವಾಗ, ತ್ರೈಳೋಕ್ಯಮಲ್ಲ ನನ್ನಿನೊಳಂಬ ಪಲ್ಲವಪೆರ್ಮಾನಡಿಯು ಬಲ್ಲಕುಂದೆ-೩೦೦, ಕೋಗಳಿ-೫೦೦, ಕದಂಬಳಿಗೆ-೧೦೦೦, ಕುದಿಯಹರವಿ-೭೦, ಕರಿವಿಡಿ-೩೦, ಪಂಚಗ್ರಾಮಗಳು ಮತ್ತು ನೊಳಂಬವಾಡಿ-೩೨೦೦೦ ವನ್ನು ಆಳುತ್ತಿರುವಾಗ ಇವನ ಕೈಕೆಳಗೆ 'ಲೆಂಕ ಸಾಸಿರ್ವ್ವರು' ಇರುತ್ತಾರೆ. ಈ ಲೆಂಕ ಸಾಸಿರ್ವ್ವರನ್ನು ಶಾಸನವು ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರ ಶ್ರೀ ನೊಳಂಬಾಧಿರಾಜ ಶ್ರೀಪಾದಪದ್ಮಾಮೋದಾಶಕ್ತ ಮಧುಕರರ್, ವೈರಿ ಬಳಬೀಕರರ್ ಪಲ್ಲವಾನ್ವಯ ಮಹಾರಾಜ ರಾಜ್ಯ ಮೂಳಸಂಭಾತ್ಮಕರ್ ಚವರೀದ್ವಜ ವಿರಾಜಿತರಾನೆವರೆ ಘೋಷಣರ್ಸತ್ಯಮಣಿ ಭೂಷಣರ್, ಧರ್ಮಾನುಕೂಳರ್, ಜಯವಧೂಲೋಲರ್, ಕಣ್ಡಳೀ ಮೂಳಭದ್ರೋದ್ಭವ, ವೀರಾವತಾರರೇಕೈಕವೀರರ್, ದೀನನಾಥ ಚಿನ್ತಾಮಣಿ, ಆಶ್ರಿತಜನ ಕಲ್ಪವೃಕ್ಷ, ಸರಣಾಗತ ವಜ್ರಪಂಜರ ನಾಮಾದಿ ಸಮಸ್ತ ಪ್ರಸಸ್ತಿಸಹಿತ ಇತ್ಯಾದಿ ವಿಶೇಷಣಗಳಿಂದ ಹೊಗಳಿದೆ. ತಿಕಣ್ಣ ದಂಡನಾಯಕ ಇವರಲ್ಲಿ ಪ್ರಮುಖನು. ಲೆಂಕಸಸಿರ್ವ್ವರು ಅರ್ಮ್ಮಳೆ, ನೆಲ್ಲುದರೆ, ಸೊನ್ನ ಪೊಳಲ್ಗುನ್ದೆ, ಸೂಗೂರು, ಮೋರಿಂಗೆರೆ ಮೊದಲಾದ ಆರು ಬಾಡಮುಮನಣುಗ ಜೀವಿತವಾಗಿ ತ್ರಿಭೋಗಾಭ್ಯನ್ತರ ಸಿದ್ದಿಯಿನಾಳುತ್ತಿದ್ದಂತೆ ಶಾಸನ ಉಲ್ಲೇಖಿಸುತ್ತದೆ.[229]

ಕೋಗಳಿಯ ಶಕ.೯೬೬ ರ (ಕ್ರಿ.ಶ.೧೦೪೪) ಶಾಸನದಲ್ಲಿ ಚಾಳುಕ್ಯ ದೊರೆ ತ್ರೈಳೋಕ್ಯಮಲ್ಲನು ರಾಜ್ಯವಾಳುತ್ತಿರಲು ತ್ರೈಳೋಕ್ಯ ನನ್ನಿನೊಳಂಬ ಪಲ್ಲವಪೆರ್ಮಾನಡಿಯ ಕಾಲದಲ್ಲಿ ತುರುಗಾಳೆಗ ನಡೆದಿದ್ದು ಉದಯಾದಿತ್ಯ ಏಚನಾಯಕನು ಘಟ್ಟಿದೇವನ ಆಜ್ಞೆಯಂತೆ ತುರು ಕಳ್ಳರನ್ನು ಸದೆ ಬಡಿದು ಕೋಗಳಿಯ ಹಸುಗಳನ್ನು ಹಿಂತಿರುಗಿಸಿ ಸತ್ತದ್ದನ್ನು ಉಲ್ಲೇಖಿಸಿದೆ.[230] ಕ್ರಿ.ಶ.೧೦೪೭ ಅರಕೆರೆ,[231] ಕಲ್ಲುಂಬ (ಕ್ರಿ.ಶ.೧೦೪೯),[232] ಶಾಸನಗಳು ಈ ತ್ರೈಳೋಕ್ಯಮಲ್ಲ ಪಲ್ಲವಪೆರ್ಮಾನಡಿಯು ಈ ಪ್ರದೇಶವನ್ನು ಆಳುತ್ತಿದ್ದಂತೆ ಹೇಳಿವೆ. ಶಿರಸ್ತಹಳ್ಳಿಯ ೧೦೫೦ರ ಶಾಸನದಲ್ಲಿಯೂ[233] ಮೇಲೆ ಉಲ್ಲೇಖಿತ ಪ್ರದೇಶವನ್ನು ಆಳುತ್ತಿದ್ದಂತೆ ಹೇಳಿದೆ.

ಬಾಗೇವಾಡಿ ಕ್ರಿ.ಶ.೧೦೪೯ ರ ಶಾಸನದಲ್ಲಿ ಚಾಳುಕ್ಯರು ಕರಹಡದ ಮೇಲೆ ಯುದ್ಧ ನಡೆಸಿದಾಗ ಈ ನೊಳಂಬ ಅರಸನೂ ಭಾಗವಹಿಸಿದ್ದು ಕರಹಡನಾಡಿನ ವಗ್ಘಾಪುರದಲ್ಲಿ ಬೀಡು

ಬಿಟ್ಟಿದ್ದಂತೆ ತಿಳಿಯುತ್ತದೆ.[234] ಹದಡಿಯ ಕ್ರಿ.ಶ.ಸು. ೧೦೫೦ ರ ಶಾಸನದಲ್ಲಿ ಈ ನೊಳಂಬ ಅರಸ ನೊಳಂಬವಾಡಿಯಲ್ಲಿದ್ದಂತೆ ತಿಳಿಯುತ್ತದೆ.[235]

ಕ್ರಿ.ಶ.೧೦೫೨ ಚಿನ್ನತುಂಬಲಮ್ ಶಾಸನವು ನೊಳಂಬ ಅರಸನನ್ನು ಪಂಚಮಹಾಶಬ್ದ ಪಲ್ಲವಾನ್ವಯ ಪೃಥ್ವೀವಲ್ಲಭ ಪಲ್ಲವಕುಳತಿಳಕನೇಕವಾಕ್ಯ ಕಾಂಚೀಪುರವರೇಶ್ವರ ವೀರನೊಳಂಬ ಪಲ್ಲವಪೆರ್ಮಾನಡಿ ಶ್ರೀವೀರನೊಳಂಬ ಘಟ್ಟರಸನೆಂದು ಕರೆದಿದೆ. ಇವನು ಘಟವಾಡಿ-೧೦೦೦ ವನ್ನು ಆಳುತ್ತಿದ್ದಂತೆ ಹೇಳಿದೆ.[236]

ತಳಕಲ್ಲಿನ ಕ್ರಿ.ಶ.ಸು.೧೦೫೨-೫೩ ಶಾಸನದಲ್ಲಿ ತ್ರೈಳೋಕ್ಯಮಲ್ಲದೇವನು ರಾಜ್ಯವಾಳುತ್ತಿರುವಾಗ ತ್ರೈಳೋಕ್ಯಮಲ್ಲ ನೊಳಂಬ ಪಲ್ಲವ ಪೆಮ್ಮನಡಿಯು ಕೋಗಳಿ-೫೦೦, ಬಲ್ಲಕುಂದೆ-೩೦೦, ಕದಂಬಳಿಗೆ-೧೦೦೦ ಪ್ರದೇಶಗಳನ್ನು ಬೀಳವೃತ್ತಿಯಿಂದ ಆಳುತ್ತಿರುವಾಗ ಇವನ ಸಾಮಂತನಾಗಿ ಸಿಂಧರಸನಿರುತ್ತಾನೆ. ಈ ಸಿಂಧರಸ ಬಮ್ಮರಸನನ್ನು ಶಾಸನಗಳಲ್ಲಿ ಸಮಧಿಗತ ಪಂಚಮಹಾಶಬ್ದ ಮಹಾಸಾಮಸ್ತ ಜಯವಧೂಕಾನ್ತ ಭೋಗಾವತಿ ಪುರವರೇಶ್ವರ, ವೀರಮಹೇಶ್ವರ ಫಣೇಂದ್ರಕುಳಭೂಷಣ ನಾಗಧ್ವಜ ವಿಜಯವಿಕ್ರಮ ಸಿಂದುಕುಳ ಭಾಸ್ಕರ ಪ್ರತ್ಯಕ್ಷ ಪಾರ್ತ್ಥದ್ವೈರಿ ಕಾಳನಳ ಪರಪಕ್ಷಮಲ್ಲಂ ಅಣ್ಣನಸಿಂಘಂ ಜತನ ಗಂಧವಾರಣ ಪಾತಾಳ ಚಕ್ರವರ್ತಿ ಎಂಬ ವಿಶೇಷಣಗಳಿಂದ ಕರೆದಿದೆ. ಇವನು ಕೋಗಳಿ-೫೦೦ ರ ಕಂಪಣಸೋಗೆ-೧೨ ರ ಬಳಿಯ ಅಗ್ರಹಾರ, ತೊಣುಕಲಿಯ ಹಲುಮಯಿ ಪನ್ನೆರಡರ ಬಳಿಯ ನಿಟ್ಟೂರನ್ನು ಮೊಸಳೆಮಡು-೧೨ ಬಳಿಯ ಬಸಿಕೋಡನ್ನು ಸರ್ವ್ವಾಭ್ಯನ್ತರ ಸಿದ್ದಿಯಾಳಾಗುತ್ತಿದ್ದಂತೆ ಹೇಳಿದೆ.[237]

ಪುನಬಗಟ್ಟದ ಕ್ರಿ.ಶ. ೧೦೫೨ರ ಶಾಸನದಲ್ಲಿ ಈ ನೊಳಂಬ ತ್ರೈಳೋಕ್ಯಮಲ್ಲ ನಿಜಿವ ನೊಳಂಬಪಲ್ಲವ ಪೆರ್ಮಾನಡಿ ನಾರಸಿಂಘದೇವನು ಆಳುತ್ತಿದ್ದಂತೆಯೂ ಉಲ್ಲೇಖಿಸಿದೆ.[238] ಕ್ರಿ.ಶ.೧೦೫೪ರ ಶಾಸನದಲ್ಲಿ ದಂಡನಾಯುಕ ಜಗದೇಕಮಲ್ಲ ನೊಳಂಬ ಬ್ರಹ್ಮಾದಿರಾಜನು ಸ್ವಯಂಭುದೇವರ ಸೇವೆಗೆ ಚಂದ್ರಭೂಷಣಪಂಡಿತರ ಕಾಲನ್ನು ತೊಳೆದು ಭೂಮಿ ದಾನ ಕೊಟ್ಟಿದ್ದನ್ನು ತಿಳಿಸುತ್ತದೆ.[239] ನೊಳಂಬರು ಚಾಳುಕ್ಯರಿಂದ ಪಡೆದಿದ್ದ ಜಗದೇಕಮಲ್ಲ ಎಂಬ ವಿಶೇಷಣವನ್ನು ಈ ಬ್ರಹ್ಮಾಧಿರಾಜನೂ ಪಡೆದು ನೊಳಂಬರ ಸಾಮಂತರೆಂಬುದನ್ನು ಪರೋಕ್ಷವಾಗಿ ಸೂಚಿಸಿರುತ್ತಾರೆ. ಕಮ್ಮರಚೇಡುವಿನ ಕ್ರಿ.ಶ.೧೦೫೪ ರ ಶಾಸನದಲ್ಲಿ ಚಾಲುಕ್ಯ ಮಲ್ಲದೇವರು ರಾಜ್ಯವಾಳುತ್ತಿರಲು ಕಾಂಚೀಪುರವರೇಶ್ವರ ಮಹಾಮಂಡಲೇಶ್ವರ ವೀರನೊಳಂಬ ಗಟ್ಟಿದೇವ ಸಿಂದವಾಡಿ-೧೦೦೦ ವನ್ನು ಆಳುತ್ತಿದ್ದುದನ್ನು ಉಲ್ಲೇಖಿಸಿದೆ.[240]

ಜಗಳೂರು ತಾಲೂಕು ಅಸಗೋಡಿನ ಕ್ರಿ.ಶ. ೨೦೫೪ ರ ಶಾಸನದಲ್ಲಿ ನಾರಸಿಂಗದೇವನು ಕೋಗಳಿ-೫೦೦, ಕದಂಬಳಿಗೆ-೧೦೦೦, ಬಲ್ಲಕುನ್ದೆ-೩೦೦ ಆಳುತ್ತಿರುವಾಗ ಕಾಂಚೀಪುರವರೇಶ್ವರ

ಶ್ರೀಮತ್ಕುಮಾರ ಚೋರಯದೇವನು ಉಚ್ಚಂಗಿ-೩೦ ಕದಂಬಳಿಗೆ-೧೦೦೦ ಆಳುತ್ತಿದ್ದಂತೆ ಹೇಳಿದೆ. ಈ ಕುಮಾರ ಚೋರಯನು ನೊಳಂಬ ನಾರಸಿಂಹ ಘಟ್ಟಿಯರಸನ ಮಗನಾಗಿದ್ದಿರಬೇಕು.[241] ನಂದಿಬೇವೂರಿನ ಕ್ರಿ.ಶ. ೧೦೫೪ ರ ಶಾಸನದಲ್ಲಿ [ತ್ರೈಲೋ]ಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾನಡಿಯು [ಕೋಗುಳಿ]-೫೦೦ ಕದಂಬಳಿ[ಗೆ]-೧೦೦೦ ಬಲ್ಲಕುಂದೆ .. [ಕ]ಣೆಯ ಕಲ್ಲು ೩೦೦ ಮೊದಲಾಗಿ [ನೊಳಂಬವಾಡಿ] ೩೨೦೦೦ ಆಳುತ್ತಿರುವಾಗ ಜಗದೇಕಮಲ್ಲ ನೊಳಂಬ ಬ್ರಹ್ಮಾದಿರಾಜ ಪ್ರಮುಖಕರಣ .. [ಸಾ]ಮನ್ತ ಗರುಡ ಕೊನ್ತ ವಿದ್ಯಾಧರಂ ಮನ್ನೆವಲ್ಲಭ ಪಾದ [ಪಂಕಜ] ಭ್ರಮರನಪ್ಪ ಕೊಳಿಗನಾದ ಮನ್ನೇಯ ಸೌಚಾಂಜನೇಯ ... ಘಟ್ಟಿಯರಸರ್ ಇಱಿವ ನೊಳಂಬ ನಾರ[ಸಿಂ]ಘದೇವರ ಆಳ್ವಿಕೆಯಲ್ಲಿ ಅವನ ಪಂಚ ಪ್ರಧಾನರ ಕೋರಿಕೆಯಂತೆ ಜೈನಮುನಿ ಅಷ್ಟೋಪವಾಸಿ ಭಳರರಿಗೆ ದಾನ ಕೊಟ್ಟ ವಿಷಯ ಉಲ್ಲೇಖಿತವಾಗಿದೆ.[242]

ಬದನೇಹಾಳು ಗ್ರಾಮದ ಕ್ರಿ.ಶ. ೧೦೫೫ ರ ಶಾಸನದಲ್ಲಿ ಚಾಳುಕ್ಯ ತ್ರೈಲೋಕ್ಯಮಲ್ಲದೇವನು ರಾಜ್ಯವಾಳುತ್ತಿದ್ದಾಗ ವೀರನೊಳಂಬ ಪಲ್ಲವಪೆರ್ಮಾನಡಿಯು ಸಿಂದವಾಡಿ-೧೦೦೦ ವನ್ನು ಆಳುತ್ತಿದ್ದಂತೆ ಹೇಳಿದೆ.[243]

ತ್ರೈಲೋಕ್ಯಮಲ್ಲ ನನ್ನಿನೊಳಂಬನು ಚಾಳುಕ್ಯರ ಮೇಲೆ ಚೋಳರು ಮಾಡಿದ ಕೊಪ್ಪಂ ಯುದ್ಧದಲ್ಲಿ ಮರಣವನ್ನಪ್ಪಿದ. ತ್ರೈಲೋಕ್ಯಮಲ್ಲ ನನ್ನಿನೊಳಂಬನನ್ನು ಶಾಸನಗಳಲ್ಲಿ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿ, ತ್ರೈಲೋಕ್ಯಮಲ್ಲ ಇರಿವನೊಳಂಬ ನಾರಸಿಂಘದೇವ, ಗಟ್ಟಿದೇವ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಇವನಿಗೆ ಕುಮಾರ ಚೋರಯ್ಯನೆಂಬ ಮಗನಿದ್ದಂತೆ ಶಾಸನಗಳು ಉಲ್ಲೇಖಿಸುತ್ತವೆಯಾದರೂ ಅವನ ಮುಂದಿನ ವಿವರಗಳು ತಿಳಿಯುತ್ತಿಲ್ಲ. ಬಹುಶಃ ಚಿಕ್ಕ ವಯಸ್ಸಿನಲ್ಲಿಯೇ ತೀರಿಹೋಗಿರಬೇಕು.ಬಹುಶಃ ಮಗಳೊಬ್ಬಳಿದ್ದು ಆಕೆಯನ್ನು ಚಾಳುಕ್ಯಜಯಸಿಂಹನಿಗೆ ಮದುವೆ ಮಾಡಿಕೊಟ್ಟಿರಬೇಕು. ಮುಂದೆ ಈ ಜಯಸಿಂಹ (ಮುಮ್ಮಡಿ) ನೊಳಂಬವಾಡಿಗೆ ಉತ್ತರಾಧಿಕಾರಿಯಾಗುತ್ತಾನೆ.

### ತ್ರೈಲೋಕ್ಯಮಲ್ಲ ಪಲ್ಲವ ಪೆರ್ಮಾಡಿ ಜಯುಸಿಂಹದೇವ

ಕ್ರಿ.ಶ.೧೦೫೫ ರ ಶಾಸನವೇ ಪಾರಂಪರಿಕ ನೊಳಂಬ ಅರಸರ ಅಂತಿಮ ಶಾಸನ. ಇದಾದ ಮೇಲೆ ಕ್ರಿ.ಶ. ೧೦೬೮ ರಲ್ಲಿ ಚಾಳುಕ್ಯ ಒಂದನೆಯ ಸೋಮೇಶ್ವರನ ಮೂರನೆಯ ಮಗನಾದ ಜಯಸಿಂಹನು ನೊಳಂಬರ ಪಾರಂಪರಿಕ ಬಿರುದುಗಳೊಂದಿಗೆ ನೊಳಂಬವಾಡಿಯ ರಾಜನಾಗುತ್ತಾನೆ. ಕ್ರಿ.ಶ.೧೦೬೮ ರ ಕುಪ್ಪೋಜಿಯ ಶಾಸನದಲ್ಲಿ ಇವನನ್ನು ಭುವನೈಕಮಲ್ಲನ ತಮ್ಮನೆಂದು ಕರೆದಿದೆ. ಹಾಗಾದಲ್ಲಿ ನೊಳಂಬರ ಪಾರಂಪರಿಕ ಬಿರುದುಗಳನ್ನು ಇವನು ಧರಿಸಿದ್ದು ಹೇಗೇ? ಇದು

ಬಿಡಿಸಲಾರದ ಪ್ರಶ್ನೆ. ಬಹುಶಃ ಇರಿವನೊಳಂಬ ಘಟೆಯಂಕಕಾರನಿಗೆ (ನನ್ನಿ ನೊಳಂಬನಿಗೆ) ಗಂಡು ಸಂತಾನವಿಲ್ಲದೆ ತನ್ನ ಸೋದರಿಯ ಮಗ ಅಥವಾ ತನ್ನ ಸೋದರಳಿಯ ಒಂದನೆಯ ಸೋಮೇಶ್ವರನ ಮೂರನೆಯ ಮಗನನ್ನು ದತ್ತು ಪಡೆದಿರಬಹುದು. ಇಲ್ಲವೆ ಘಟಯಂಕಕಾರನು ಸತ್ಯಾಗ ಅಪುತ್ರಕನಾಗಿದ್ದು ಅವನ ಸಾಮ್ರಾಜ್ಯಕ್ಕೆ ಇವನು ಉತ್ತರಾಧಿಕಾರಿಯಾಗಿ ತನ್ನ ಅಣ್ಣ ಇಮ್ಮಡಿ ಸೋಮೇಶ್ವರನಿಂದ ಪಟ್ಟಾಭಿಷಿಕ್ತನಾಗಿರಬೇಕು. ಬಹುಶಃ ಮೊದಲನೇ ಊಹೆ ಸಮಂಜಸವೆನಿಸುತ್ತದೆ. ಇದಕ್ಕೆ ಕಾರಣ ನೊಳಂಬರ ಪಾರಂಪರಿಕ ಬಿರುದುಗಳನ್ನು ಚಾಳುಕ್ಯ ಜಯಸಿಂಹ ಧರಿಸಿರುವುದು. ಉಚ್ಚಂಗಿಯ ಪಾಂಡ್ಯರು, ಚಾಳುಕ್ಯ ವಿಜಯಾದಿತ್ಯ ಮೊದಲಾದವರು ಈ ವಿಶೇಷಣದ ಕೆಲವು ಭಾಗಗಳನ್ನು ಧರಿಸಿದ್ದರೂ ಪೂರ್ಣವಾಗಿ ಅವರ ಬಿರುದುಗಳನ್ನು ಜಯಸಿಂಹನು ಮಾತ್ರ ಧರಿಸಿದ್ದುದು ಶಾಸನಗಳಿಂದ ತಿಳಿಯುತ್ತದೆ. ಹೀಗಾಗಿ ಇವನನ್ನು ನೊಳಂಬರು ದತ್ತಕ್ಕೆ ಪಡೆದಿರಬೇಕೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ವಿದ್ವಾಂಸರು ಸಹ ಇದೇ ಅಭಿಪ್ರಾಯವನ್ನು ಬಹು ಹಿಂದೆಯೇ ನೀಡಿರುತ್ತಾರೆ.[244] ಇವನ ಮೊದಲ ಪತ್ನಿ ಶ್ರೀದೇವಿಯೆಂದಿದೆ.[245] ಕಂಪಿಲಿಯ ನೆಲೆವೀಡಿನಿಂದಲೇ ಇವನು ರಾಜ್ಯಭಾರ ಮಾಡುತ್ತಾನೆ. ಈ ಕಾರಣಗಳಿಂದ ಇವನನ್ನು ನೊಳಂಬರ ಉತ್ತರಾಧಿಕಾರಿಯೆಂದೇ ನಾವು ಪರಿಗಣಿಸಿದ್ದೇವೆ.

ಅದೋನಿ ತಾಲೂಕು ಚಿನ್ನತಂಬಲಂ ಗ್ರಾಮದ ಕ್ರಿ.ಶ. ೧೦೬೮ರ ಶಾಸನದಲ್ಲಿ ಚಾಳುಕ್ಯ ಮಲ್ಲದೇವನು ಆಳ್ವಿಕೆ ಮಾಡುತ್ತಿರುವಾಗ ರಾಜ್ಯ ವಿದ್ಯಾಂಗನಾಭುಜಂಗ ಅಣ್ಣನ ಸಿಂಗ ತ್ರೈಳೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಘದೇವನು ನೊಳಂಬವಾಡಿ-೩೨೦೦೦, ಸಿಂದವಾಡಿ-೧೦೦೦ ವನ್ನು ಆಳುತ್ತಿರುವಾಗ ಕಂಪಿಲಿಯ ನೆಲೆವೀಡಿನಲ್ಲಿದ್ದಂತೆ ಹೇಳಿದೆ. ತುಂಬಳ ಶ್ರೀಸ್ವಯಂಭು ದಕ್ಷಿಣ ಸೋಮೇಶ್ವರದೇವನಿಗೆ ಮೋರಕಣ್ಡಿಯ ಡವಕೇಶ್ವರ ದಯಾಚಾರ್ಯ ಕಾಳಾಮುಖ ನಿರಂಜನಪಂಡಿತರ ಶಿಷ್ಯ ಅನನ್ತಶಕ್ತಿ ಪಂಡಿತನ ಶಿಷ್ಯನಿಗೆ ಭೂಮಿ ದಾನ ಕೊಟ್ಟ ವಿಷಯ ಉಲ್ಲೇಖಿಸಿದೆ. ಈ ಶಾಸನದಲ್ಲಿ ಜಯಸಿಂಘದೇವನನ್ನು ಸಮಸ್ತಭುವನಸ್ತುತ ಮಹಾಮಹಿ ಮೋದೆಂಗೋಲ್ಲಸಿತ ಪಲ್ಲವಾನ್ವಯ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಕಾಂಚೀಪುರವರೇಶ್ವರ ಎಂಬ ಪಾರಂಪರಿಕ ವಿಶೇಷಣಗಳ ಜೊತೆ 'ವಿದಗ್ಧವಿಳಾಸಿನೀ ವಿಳೋಚನ ಚಕೋರಚಂದ್ರ ಪ್ರತ್ಯಕ್ಷ ದೇವೇಂದ್ರ ವಿಕ್ರಾನ್ತಕಣ್ಠೀರವ ಮಣ್ಡಳೀಕ ಭೈರವ ಸಹಾಗತ ವಜ್ರಪಂಜರ ಚಾಳುಕ್ಯ ದಿಕ್ಕುಂಜರವನ್ದಿಬ್ರಿನ್ದಸನ್ತರ್ಪ್ಪಣಂ ವಿಜಯಲಕ್ಷ್ಮೀ ಮುಖದರ್ಪಣ ರಾಯಕುಮ್ಮಾರ ಚಮತ್ಕಾರಂ ಸಾಹಸಾಳಂಕಾರಂ ಕೀರ್ತಿವಲ್ಲರೀವಳಯಿತ ತ್ರಿಳೋಕ ಸತ್ಯಾವಳೋಕಂ ರಾಜವಿದ್ಯಾಂಗನಾ ಭುಜಂಗಂ ಅಣ್ಣನ ಸಿಂಗ ಶ್ರೀಮತ್ರೈಳೋಕ್ಯ ಮಲ್ಲ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಹದೇವ'ನೆಂದು ಕರೆಯಲಾಗಿದೆ.[246]

ಬಾಗುಳಿಯ ಕ್ರಿ.ಶ. ೧೦೬೮ ರ ಶಾಸನದಲ್ಲಿ ಚಾಲುಕ್ಯ ಭುವನೈಕಮಲ್ಲದೇವರು ರಾಜ್ಯವಾಳುತ್ತಿದ್ದಾಗ ತ್ರೈಳೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿ ಜಯಸಿಂಗದೇವನು ಕೋಗಳಿ–೫೦೦, ಕದಂಬಳಿಗೆ–೧೦೦೦, ಬಲ್ಲಕುಂದೆ–೩೦೦ ಆಳುತ್ತಿದ್ದಂತೆ ಉಲ್ಲೇಖವಿದೆ.[247] ರೋಣ ತಾಲೂಕಿನ ಸೂಡಿಗ್ರಾಮದ ಶಕ ೯೯೧/ಕ್ರಿ.ಶ.೧೦೬೯ ರ ಶಾಸನದಲ್ಲಿ ಭುವನೈಕಮಲ್ಲದೇವ (ಸೋಮೇಶ್ವರ–೨) ಆಳುತ್ತಿರುವಾಗ ಭುವನೈಕಮಲ್ಲ ನೊಳಂಬಾಧಿರಾಜ ಪೆರ್ಮಾನಡಿ ಸಿಂಗನದೇವನು ನೊಳಂಬವಾಡಿ–೩೨೦೦೦, ಕಿಸುಕಾಡು–೭೦ ನ್ನು ಆಳುತ್ತಿದ್ದಂತೆ ತಿಳಿಯುತ್ತದೆ. ಈ ಸಿಂಗದೇವನು ಮೇಲೆ ಉಲ್ಲೇಖಿತನಾಗಿರುವ ಜಯಸಿಂಹನೇ ಆಗಿರುತ್ತಾನೆ.[248] ಹರಪನಹಳ್ಳಿ ತಾಲೂಕು ಉಚ್ಚಂಗಿದುರ್ಗದ ಕ್ರಿ.ಶ. ೧೦೭೦ ರ ಶಾಸನದಲ್ಲಿ [ಜ]ಯಸಿಂಘದೇವನ ಆಳ್ವಿಕೆಯ ಉಲ್ಲೇಖವಿದೆ.[249] ಬಾದಾಮಿ ತಾಲೂಕು, ಪಟ್ಟದಕಲ್ಲಿನ ಕ್ರಿ.ಶ.೨೮–೧೨–೧೦೭೦ ರ ಶಾಸನದಲ್ಲಿ ಚಾಳುಕ್ಯ ಭುವನೈಕಮಲ್ಲದೇವನು ಆಳುತ್ತಿರುವಾಗ ಭುವನೈಕಮಲ್ಲ ನೊಳಂಬಪಲ್ಲವ ಪೆರ್ಮಾನಡಿ ಜಯಸಿಂಗದೇವನು ಕಿಸುಕಾಡು–೭೦, ಕಿಸುವೊಳಲು–೬, ಬಾಡವನ್ನು ಆಳುತ್ತಿರುವಾಗ ಸಮಸ್ತ ಭುವನಾಸ್ರಯ ಪ್ರಿಥುವೀವಲ್ಲಭ ಮಹಾವೀರ ಸಿಂಹಾಸನ ಶ್ರೀ ಚಾಳುಕ್ಯಾನ್ವಯ ಪಟ್ಟಬನ್ಧನೋತ್ಸಾಹ ಸಕಳ ವಿಷಯ ಪಟ್ಟಣಾಧಿಪತಿ ಕಿಸುವೊಳಲ ಮೂಲಸ್ತಾನದ ಮಹಾದೇವರುಪಭೋಗಕ್ಕೆ ಬಿಟ್ಟ ಭೂದಾನವನ್ನು ಉಲ್ಲೇಖಿಸಿದೆ. ಈ ಶಾಸನದಲ್ಲಿ ನೊಳಂಬರು ಆಳುತ್ತಿದ್ದ ಪಾರಂಪರಿಕ ರಾಜ್ಯಗಳ ಉಲ್ಲೇಖವಿಲ್ಲ. ಅದಕ್ಕೆ ಬದಲಾಗಿ ಕಿಸುಕಾಡು–೭೦ ನ್ನು ಆಳುತ್ತಿದ್ದಂತೆ ಹೇಳಿದೆ. ಬಹುಶಃ ಇವರ ರಾಜ್ಯಾಡಳಿತದ ಗಡಿಗಳು ಬದಲಾಗುತ್ತಿದ್ದುದನ್ನು ಇದು ಸೂಚಿಸುತ್ತದೆ.

ಮೊಳಕಾಲ್ಮೂರು ತಾಲೂಕು ರಾಮಸಾಗರದ ಕ್ರಿ.ಶ. ೧೦೭೨ ರ ಶಾಸನದಲ್ಲಿ ತ್ರೈಳೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಗದೇವನು ಗೋವಿಂದವಾಡಿಯಿಂದ ಆಳುತ್ತಿದ್ದುದನ್ನು ಉಲ್ಲೇಖಿಸುತ್ತದೆ.[250] ಚಿತ್ರದುರ್ಗದ ಹುಲೇಗುನ್ದಿಯ ಕ್ರಿ.ಶ. ೧೦೭೩ ರ ಶಾಸನದಲ್ಲಿ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾಡಿ ಜಯಸಿಂಗದೇವನ ಉಲ್ಲೇಖ ಬಂದಿದೆ. ಈ ಪ್ರದೇಶವೂ ಇವನ ಅಧೀನದಲ್ಲಿದ್ದಿರಬೇಕು.[251] ಶಿರಾ ತಾಲೂಕು ದೊಡ್ಡಬಾಣಗೆರೆಯ ಕ್ರಿ.ಶ.೧೦೭೩ ರ ಶಾಸನದಲ್ಲಿ ಉದಯಾದಿತ್ಯದೇವ ವೀರರಾಜೇಂದ್ರ ವೀರನೊಳಂಬ ಪೆರ್ಮಾನಡಿಯು ನೊಳಂಬವಾಡಿ–೩೨೦೦೦ ಆಳುತ್ತಿರುವಾಗ ಮಾರಯ್ಯ ದಾನ ಕೊಟ್ಟ ಉಲ್ಲೇಖವಿದೆ. ಶಿರಾ ತಾಲೂಖಿನ ಹುಲಿಕುಂಟೆ ಗ್ರಾಮದ ಕ್ರಿ.ಶ.೧೦೭೩ ರ ಶಾಸನದಲ್ಲಿ ಉದಯಾದಿತ್ಯದೇವ ವೀರರಾಜೇಂದ್ರ ವೀರನೊಳಂಬ ಎಂಬ ವ್ಯಕ್ತಿಯ ಉಲ್ಲೇಖವಿದ್ದು, ಈ ಉದಯಾದಿತ್ಯನು ಚೋಳರ ಆಶ್ರಯದಲ್ಲಿದ್ದವನಿರಬೇಕು. ಮೂಲಶಾಖೆಯ ಮತ್ತೊಂದು ಶಾಖೆ ಅಸ್ತಿತ್ವದಲ್ಲಿದ್ದು ಅದು ಚೋಳರ ಆಶ್ರಯದಲ್ಲಿ ಕೆಲವು ಕಾಲ ಆಳ್ವಿಕೆ

ಮಾಡಿದ್ದಿರಬೇಕು. ಉದಯಾದಿತ್ಯನು ರಾಜೇಂದ್ರನ ಹೆಸರನ್ನು ತನ್ನ ಹೆಸರಿನೊಂದಿಗೆ ಸೇರಿಸಿಕೊಂಡಿರುವುದರಿಂದ ಇವನು ಚೋಳರ ಸಾಮಂತನಾಗಿದ್ದನೆಂಬ ಸಂಗತಿ ತಿಳಿಯುತ್ತದೆ.[252]

ಅನಂತಪುರ ಜಿಲ್ಲೆಯ ಗೂಟಿ ತಾಲೂಕಿನ ಶಕ ೯೯೬ ರ (ಕ್ರಿ.ಶ.೧೦೭೪) ಆನಂದ ಸಂವತ್ಸರದ ಪು.ಶು. ೧[೩] ಆದಿತ್ಯವಾರ ಶ್ರೀಮನ್ನೊಳಂಬ ದೇವರಿಗೆ ಕುಡೆಪದೊಡೆ ದಣ್ಡನಾಯಕ ತಮ್ಮನು ವಿಷ್ಣುಗ್ರಿಹಕ್ಕೆ, ರಾಮೇಶ್ವರದೇವರಿಗೆ ಭಗವತೀದೇವರ ಕಣ್ಡಸ್ಫುಟಿತಸ್ನಾನ, ಗನ್ದ, ಧೂಪ, ದೀಪ ನಿವೇದ್ಯ, ಅರ್ಚನೆಗಾಗಿ ದಾನ ಕೊಟ್ಟಿದ್ದನ್ನು ಉಲ್ಲೇಖಿಸಿದೆ. ಇಲ್ಲಿ ನೊಳಂಬಪಲ್ಲವ ಜಯಸಿಂಹನು ಈ ಪ್ರದೇಶವನ್ನು ಆಳುತ್ತಿದ್ದಂತೆ ಹೇಳಿದೆ. ಈ ಶಾಸನದಲ್ಲಿ ಇವನು ಆಳುತ್ತಿದ್ದ ಪ್ರದೇಶಗಳ ಉಲ್ಲೇಖವಿಲ್ಲ.[253] ಹಾನಗಲ್ ತಾಲೂಕು, ಕಲ್ಕೇರಿಯ ಕ್ರಿ.ಶ.೨೪-೧೨-೧೦೭೬ ರ ಶಾಸನದಲ್ಲಿ ಚಾಳುಕ್ಯ ಭುವನೈಕಮಲ್ಲದೇವರು ಬಂಕಾಪುರದ ನೆಲೆವೀಡಿನಲ್ಲಿ ಆಳುತ್ತಿರುವಾಗ ಒಂದು ದಿನ ಒಲಗದಲ್ಲಿ ಭುವನೈಕಮಲ್ಲ ನೊಳಂಬನು ನೊಳಂಬವಾಡಿಯ ಜೊತೆಗೆ ಪಾನುಂಗಲ್ಲು ನಾಡು, ಬನವಾಸೆ ದೇಸವನ್ನು ಸಾಸನವರ್ತಿಯಾಗಿ ಪಡೆದಿದ್ದಂತೆ ತಿಳಿಯುತ್ತದೆ. ದಕ್ಷಿಣ ಸಮುದ್ರಂಬರಂ ಸಾಧಿಸಿಕೊಳ್ಳೆಂದು ಕೊಟ್ಟನೆಂದು ತಿಳಿಯುತ್ತದೆ. ಇದರಿಂದ ರಾಜ ಶಾಸನದ ಮೂಲಕ ದಕ್ಷಿಣ ಸಮುದ್ರದವರೆಗೆ ಸಾಮ್ರಾಜ್ಯವನ್ನು ವಿಸ್ತರಿಸಿಕೊಳ್ಳಲು ಅನುಮತಿ ನೀಡಿದನೆಂದು ತಿಳಿಯುತ್ತದೆ. ಈ ಶಾಸನದಲ್ಲಿ ಭುವನೈಕಮಲ್ಲನು ಉದಯಾದಿತ್ಯನಿಗೆ ಹೇಳಿದಂತೆ ತಿಳಿಸುತ್ತದೆ. ಇಲ್ಲಿ ಜಯಸಿಂಹನಿಗೆ ಉದಯಾದಿತ್ಯ ಎಂಬ ಹೆಸರಿತ್ತೆ ಎಂಬುದು ಪ್ರಶ್ನೆ. ಈತ ಚೋಳರ ಮೇಲೆ ಯುದ್ಧ ಮಾಡಿದಂತೆ ಉಲ್ಲೇಖವಿದೆ. ಅಲ್ಲದೆ ಇವನ ಬಗ್ಗೆ ವಿವರವಾದ ಮಾಹಿತಿ ಇದೆ. ಇವನ ಪತ್ನಿ ಮಾಳಲದೇವಿ. ಇವನಿಗೆ ಭುವನೈಕಮಲ್ಲ ವೀರನೊಳಂಬನೆಂಬ ಹೆಸರೂ ಇತ್ತು.[254]

ನವಲಗುಂದ ತಾಲೂಕು ಮೊರಬದ ಕ್ರಿ.ಶ.೧೦೭೭ ರ ಶಾಸನದಲ್ಲಿ ಚಾಳುಕ್ಯ ತ್ರಿಭುವನಮಲ್ಲದೇವನು ಆಳುತ್ತಿದ್ದಾಗ ಅವನ ತಮ್ಮ ತ್ರೈಲೋಕ್ಯಮಲ್ಲ ವೀರನೊಳಂಬ ಪಲ್ಲವ ಪೆರ್ಮ್ಮಾಡಿ ಜಯಸಿಂಘದೇವನು ಯುವರಾಜ ಪದವಿಯಲ್ಲಿದ್ದು ಕೋಗಳಿ-೧೦೦೦, ಕನ್ದೂರು-೧೦೦೦, ಪುಲಿಗೆರೆ-೩೦೦, ಬೆಳುವಲ-೩೦೦, ಮನನ್ತೆರಡನೂರು ರಾಜ್ಯವಾಳುತ್ತಿದ್ದಂತೆ ಶಾಸನ ತಿಳಿಸುತ್ತದೆ. ಮೊರಬದ ಪಿರಿಯ ಕೆರೆಗೆ ನೊಳಂಬಸಮುದ್ರವೆಂಬ ಹೆಸರನ್ನು ಕೊಟ್ಟು ಪರಮೇಶ್ವರ ದತ್ತಿಯಾಗಿ ಬಿಟ್ಟಿದ್ದನ್ನು ಉಲ್ಲೇಖಿಸುತ್ತದೆ. ಇಲ್ಲಿ ಊರ ಕೆರೆಗೆ ನೊಳಂಬ ಸಮುದ್ರವೆಂದು ಹೆಸರಿಟ್ಟಿರುವುದೂ ಸಹ ಈತ ನೊಳಂಬ ವಂಶದ ಬಗ್ಗೆ ಇಟ್ಟಿದ್ದ ಗೌರವವನ್ನು ಸೂಚಿಸುತ್ತದೆ. ಅಲ್ಲದೆ ಹಿಂದೆ ಊಹಿಸಿದ ಊಹೆಗೆ ಇದು ಆಧಾರವನ್ನೊದಗಿಸುತ್ತದೆ. ಆರನೆಯ ವಿಕ್ರಮಾದಿತ್ಯನ ಕಾಲದಲ್ಲೂ ಇವನ ಆಳ್ವಿಕೆಯು ಮುಂದುವರಿದದ್ದನ್ನು ಇದು ಸೂಚಿಸುತ್ತದೆ. ಬಿಜಾಪುರ ಜಿಲ್ಲೆಯ ಹುನಗುಂದದಲ್ಲಿಯೂ ಈ ಕಾಲಕ್ಕೆ ಸೇರಿದ (ಕ್ರಿ.ಶ. ೧೦೮೦) ಶಾಸನ ದೊರೆತಿದೆ.[255] ನರಗುಂದ ತಾಲೂಕಿನ ಸೋಮಪುರದ ಗ್ರಾಮದ ಕ್ರಿ.ಶ. ೧೦೮೦ ರ ಶಾಸನದಲ್ಲಿ ಚಾಳುಕ್ಯ ತ್ರಿಭುವನಮಲ್ಲದೇವನ

ಆಳ್ವಿಕೆಯಲ್ಲಿ ರಾಜೇಂದ್ರ ಚೋಳನ ಮೇಲೆ ಯುದ್ಧಮಾಡಿ ಅವನನ್ನು ಸೋಲಿಸಿದ ನೊಳಂಬಾಧಿರಾಜನನ್ನು ದಾನದಲ್ಲಿ ಧರ್ಮರಾಯನಿಗೆ, ಶಕ್ತಿಯಲ್ಲಿ ಭೀಮನಿಗೆ, ಸೇವೆಯಲ್ಲಿ ಲಕ್ಷ್ಮಣನಿಗೆ ಶಾಸನ ಕವಿ ಹೋಲಿಸಿದ್ದಾನೆ. ಅಷ್ಟೆ ಅಲ್ಲ ಇಮ್ಮಡಿ ಸೋಮೇಶ್ವರನ ಮೇಲೆ ಯುದ್ಧ ಮಾಡಿ ಅವನನ್ನು ಸೋಲಿಸಿ ವಿಕ್ರಮಾದಿತ್ಯನಿಗೆ ಪಟ್ಟಾಭಿಷೇಕ ಮಾಡಿಸಿದಂತೆ ಶಾಸನದಲ್ಲಿ ಉಲ್ಲೇಖವಿದೆ. ಬನವಾಸಿಯೇ ಮೊದಲಾದ ನಾಡುಗಳನ್ನು ಆಳುತ್ತಿದ್ದಂತೆ ಹೇಳಿದೆ.[256]

ಶಿಕಾರಿಪುರ ತಾಲೂಕು ಹಳೇಬನ್ನೂರಿನ ಕ್ರಿ.ಶ.೧೦೮೫ ರ ಶಾಸನದಲ್ಲಿ ತ್ರೈಳೋಕ್ಯಮಲ್ಲ ವೀರನೊಳಂಬ ಪಲ್ಲವ ಪೆರ್ಮಾನಡಿ ಜಯಸಿಂಗದೇವನ ಆಳ್ವಿಕೆ ಕಾಲದಲ್ಲಿ ನಡೆದ ಒಂದು ಘಟನೆಯನ್ನು ಈ ಶಾಸನ ದಾಖಲಿಸಿದೆ. ಪೆರ್ಗ್ಗಡೆ ಲೋಕನಾಥಯ್ಯನು ಅರಸನ ಹತ್ತಿರಕ್ಕೆ ಬಂದು ಹಿಂದಿದ್ದ ಅರಸರು ಹಲವು ಸಾರಿ ಕಟ್ಟಿಸಿದ ಕೆರೆಯು ನಿಲ್ಲದೆ ಹೋಯಿತು. ಧರ್ಮರಾಜನೆ ನಿನ್ನ ಹೆಸರಿನಲ್ಲಿ ಕಟ್ಟಿದರೆ ಕೆರೆ ಬಲಿಷ್ಟವಾಗಿ ನಿಂತು ಆ ಗ್ರಾಮದ ಪ್ರಜೆಗಳು ಸುಖವಾಗಿ ಬಾಳುತ್ತಾರೆ. ಅದರಿಂದ ನಿನಗೆ ಪುಣ್ಯ ಬರುತ್ತದೆ. ಆ ಕೆರೆಯನ್ನು ವಿಸ್ತಾರವಾಗಿ ಕಟ್ಟಿಸುವುದು ಎಂದು ಪ್ರಾರ್ಥಿಸಿಕೊಳ್ಳುತ್ತಾನೆ. ರಾಜನು ಇದು ಯಾವ ಗಹನ ವಿಚಾರವೆಂದು ಜಕ್ಕಗೋಸಿಯೆಂಬ ಶಿಲ್ಪಿಯನ್ನು ಕರೆಸಿ ಅವನ ತಲೆಯ ಮೇಲೆ ಕೈಯ್ಯನಿಟ್ಟು ನೀ ನನಗೆ ಪುತ್ರ ಸಮಾನವೆಂದು ಹೇಳಿ ಬನ್ನಿಯೂರಲೆರಡು ಗ್ರಾಹೆಯ ಸಿದ್ದಾಯದ ಪೊನ್ನು ಕೊಟ್ಟು ಕಟ್ಟಿಸಿ ಅದಕ್ಕೆ ತುಂಬ ಸಮುದ್ರವೆಂದು ಪೆಸರನಿಟ್ಟು ನೊಳಂಬದೇವರ ಆಜ್ಞೆಯಂತೆ ಬನ್ನಿಯೂರ ತುಂಬಸಮುದ್ರಕ್ಕೆ ಭೂಮಿಯನ್ನು ದಾನವಾಗಿ ಕೊಟ್ಟದ್ದು ಉಕ್ತವಾಗಿದೆ.[257]

ಮೇಲಿನ ಗ್ರಾಮದ ಕ್ರಿ.ಶ. ೧೦೮೧ ರ ಶಾಸನದಲ್ಲಿ ತ್ರೈಳೋಕ್ಯಮಲ್ಲ ವೀರನೊಳಂಬ ಪಲ್ಲವಪೆರ್ಮಾನಡಿ ಜಯಸಿಂಗದೇವ ವಿಗ್ರಹಹಣ್ಮರಿಪು ಬಳಕೃತಾನ್ತನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ದಣ್ಡನಾಯಕ ತಂಬರಸರು ಬನವಾಸಿ ಪನ್ನಿರ್ಚ್ಛಾಸಿರಮುಮಂ, ಸಾನ್ತಳಿಗೆ-೧೦೦೦ ವನ್ನು ಆಳುತ್ತಿದ್ದಂತೆ ಉಲ್ಲೇಖವಿದೆ.[258] ಗದಗ ತಾಲೂಕು ಕುರ್ತುಕೋಟಿಯ ಕ್ರಿ.ಶ. ೧೦೮೩ ರ ಶಾಸನದಲ್ಲಿ ಚಾಳುಕ್ಯ ತ್ರಿಭುವನ ಮಲ್ಲದೇವನು ರಾಜ್ಯವಾಳುತ್ತಿದ್ದಾಗ ನೊಳಂಬವಳವಂಪಾಳಿಸೆ ಸಕಳಾವನಿಯಂ ಎಂದಿದ್ದು ಯುವರಾಜನಾಗಿ ತ್ರೈಳೋಕ್ಯಮಲ್ಲ ವೀರನೊಳಂಬ ಪಲ್ಲವಪೆರ್ಮಾಡಿ ಜಯಸಿಂಗದೇವನು ಪುರಿಗೆರೆ-೩೦೦, ಬೆಳ್ವೊಲ-೩೦೦, ಬನವಾಸಿ ೧೨೦೦೦, ಕುನ್ದೂರು-೧೦೦೦ ಆಳುತ್ತಿದ್ದಂತೆ ಹೇಳಿದೆ.

ಈ ಶಾಸನದಲ್ಲಿ ಜಯಸಿಂಹನು ಹಿಂದಿನ ನೊಳಂಬವಾಡಿ-೩೨೦೦೦, ಕೋಗಳಿ-೫೦೦, ಮುಂತಾದ ಪಾರಂಪರಿಕ ನಾಡುಗಳನ್ನು ಆಳುತ್ತಿದ್ದ ಉಲ್ಲೇಖವಿಲ್ಲ. ಅದಕ್ಕೆ ಬದಲಾಗಿ ಮೇಲೆ ಉಲ್ಲೇಖಿತ ನಾಡುಗಳ ಹೆಸರು ದಾಖಲಾಗಿವೆ. ಇದರಿಂದ ತಿಳಿಯುವುದೇನೆಂದರೆ ನೊಳಂಬವಾಡಿ ಮೊದಲಾದ ನಾಡುಗಳು ಇವನ ಆಳ್ವಿಕೆಯಿಂದ ತಪ್ಪಿಹೋಗಿದ್ದವೆಂದು ಸ್ಪಷ್ಟವಾಗುತ್ತದೆ.

ಕ್ರಿ.ಶ.೧೦೮೨ ರಲ್ಲಿ ಈತ ಯುವರಾಜನಾಗಿಯೇ ರಾಜ್ಯಭಾರ ಮಾಡುತ್ತಿದ್ದ. ಇಲ್ಲಿಂದಾಚೆಗೆ ಇವನ ಶಾಸನಗಳು ದೊರೆಯುವುದಿಲ್ಲ. ಬಹುಶಃ ಇವನು ಕಾಲವಾಗಿರಬೇಕು. ಇದರೊಂದಿಗೆ ನೊಳಂಬ ವಂಶದ ಪಾರಂಪರಿಕೆಯ ಆಳ್ವಿಕೆ ನಿಂತು ಹೋಗುತ್ತದೆ.[259]

ಶಿವಮೊಗ್ಗ ಜಿಲ್ಲೆ, ಶಿಕಾರಿಪುರದ ತಾಣಗುಂಡ ಹೋಬಳಿ ಶಕ ೯೪೭ (ಕ್ರಿ.ಶ.೧೦೮೫)ರ ಶಾಸನದಲ್ಲಿ ನೊಳಂಬರ ಪಾರಂಪರಿಕ ಬಿರುದುಗಳನ್ನು ಧರಿಸಿದ್ದ ಚಾಲುಕ್ಯ ಮೂರನೆಯ ಜಯಸಿಂಹನು ದಕ್ಷಿಣ ದಂಡಯಾತ್ರೆಯ ಕಾಲದಲ್ಲಿ ಬಳ್ಳಿಗಾವೆಯಲ್ಲಿ ಬೀಡು ಬಿಟ್ಟಿರುತ್ತಾನೆ. ತನ್ನನ್ನು ಅಣ್ಣನ ಪ್ರೀತಿಯ ತಮ್ಮನೆಂದು ಕರೆದುಕೊಂಡಿದ್ದಾನೆ. ಈ ಜಯಸಿಂಹನ ಜೊತೆಯಲ್ಲಿ ತಂಬರಸನೆಂಬ ದಂಡನಾಥನಿದ್ದ. ಅವನನ್ನು ಶಾಸನದಲ್ಲಿ ಮಹಾ ಪ್ರಚಂಡದಂಡನಾಯಕ, ವಿಭುದ ವರದಾಯಕ, ಗೋತ್ರಪವಿತ್ರ, ಜಗದೇಕಮಿತ್ರ, ವಿವೇಕ ಬೃಹಸ್ಪತಿ, ಶೌಚಮಹಾಪತಿ, ಪರನಾರಿ ಸಹೋದರ, ವಿದಗ್ಧ ವಿದ್ಯಾಧರ, ನಿಜವಂಶ ದಿವಾಕರ, ಸತ್ಯರತ್ನಾಕರ, ಸಕಳಗುಣನಿವಾಸ, ಉಭಯರಾಯ ಸಂತೋಷ, ಜಯಸಿಂಹದೇವ, ಪೇಸಣಹನುಮಂತ, ವೈರಿಕೃತಾಂತ, ಶ್ರೀಮನ್ ಮಹಾಪ್ರಧಾನ ಏರಿಸಂಧಿವಿಗ್ರಹಿ ದಂಡನಾಯಕ ಎಂಬುದಾಗಿ ಕರೆದಿದೆ. ಈತ ಸಾಂತಳಿಗೆ-೧೦೦೦, ಮಂಡಳಿ-೧೦೦೦, ಜಿಡ್ಡುಳಿಗ-೭೦, ನಾಗರ ಖಂಡ-೭೦, ಎಡೆನಾಡು-೨೦, ಮೂಗುನ್ದ-೧೨, ಸಮಸ್ತದೇವ ಭೋಗಂಗಳನ್ನು ಆಳುತ್ತಾ ರಾಜಧಾನಿ ಬಳ್ಳಿಗಾವೆಯಲ್ಲಿ ನೆಲೆಸಿದ್ದಂತೆ ಶಾಸನ ತಿಳಿಸುತ್ತದೆ. ತನ್ನನ್ನು ಸಹ ನೊಳಂಬ ತಂಬರಸನೆಂದು ಹೇಳಿಕೊಂಡಿದ್ದಾನೆ.[260]

ಕೊಲ್ಲಾಪುರದ ಕ್ರಿ.ಶ.೨೮-೧೦-೧೧೧೫ ರ ತಾಮ್ರಶಾಸನದಲ್ಲಿ ಆರನೆಯ ವಿಕ್ರಮಾದಿತ್ಯನಿಂದ ಗಂಡರಾದಿತ್ಯನು ನಿಸ್ಸಂಕಮಲ್ಲ ಎಂಬ ಬಿರುದನ್ನು ಪಡೆದ. ಗಂಡರಾದಿತ್ಯನು ತನ್ನ ಅಧಿಕಾರಿ ನೊಳಂಬನಿಗೆ ಮಿರೆಂಜೆ ದೇಶದ ವ್ಯಾಪ್ತಿಯಲ್ಲಿದ್ದ ಅಡಗೆಯ ೨ ಗ್ರಾಮಗಳನ್ನು ಕಾಣಿಕೆಯಾಗಿ ನೀಡಿದ ವಿವರವಿದೆ. ನೊಳಂಬರ ವಂಶಾವಳಿಯೂ ಇಲ್ಲಿ ಉಲ್ಲೇಖವಾಗಿದೆ. ಈ ವಂಶವನ್ನು ನಿಗುಂಬ ವಂಶವೆಂದು ಕರೆಯಲಾಗಿದೆ.



ಈ ನೊಳಂಬನನ್ನು ಸುವರ್ಣಮತ್ಸ್ಯೇರುಗೇಂದ್ರಧ್ವಜನೆಂದು ಕರೆದಿದೆ. ಮೂಲ ನೊಳಂಬರಿಗೂ ಇವರಿಗೂ ಇದ್ದ ಸಂಬಂಧಗಳು ತಿಳಿಯುವುದಿಲ್ಲ. ಆದರೂ ನೊಳಂಬರ ಹರವು ಇಲ್ಲಿಯವರೆವಿಗೂ ಇತ್ತೆಂಬುದು ತಿಳಿಯುತ್ತದೆ.[261]

ಹರಪನಹಳ್ಳಿ ತಾಲೂಕು ಬಾಡಗ್ರಾಮದ ಕ್ರಿ.ಶ. ೨೭-೬-೧೧೭೩ ರ ಶಾಸನದಲ್ಲಿ ಜಗದೇಕಮಲ್ಲ ಆಳುತ್ತಿದ್ದಾಗ ಹರಿಹರ ಕ್ಷೇತ್ರದಲ್ಲಿ ಶ್ರೀ ನೊಣಬೇಶ್ವರದೇವರಿಗೆ ನೊಳಂಬ ಚಕ್ರವರ್ತಿ ಬಿಟ್ಟ ಭೂಮಿಯ ಬಗ್ಗೆ ತಿಳಿಸುತ್ತದೆ. ಈ ಕಾಲಕ್ಕೆ ಚಾಳುಕ್ಯ ಸಾಮ್ರಾಜ್ಯ ಕಳಚೂರ್ಯರ ಪಾಲಾಗಿತ್ತು. ಈ ನೊಳಂಬ ಚಕ್ರವರ್ತಿ ಯಾರು ಎಂಬುದು ಸ್ಪಷ್ಟವಿಲ್ಲ. ಹಿಂದಿನ ಉಲ್ಲೇಖವನ್ನು ಈ ಶಾಸನದಲ್ಲಿ ದಾಖಲಿಸಿರಬಹುದು.

**ಅರ್ವಾಚೀನ ನೊಳಂಬರು**

ಚಿತ್ರದುರ್ಗ ತಾಲೂಕು, ಗಂಗಿಗಟ್ಟೆಗ್ರಾಮ ಶಕ ೧೧೨೪ (ಕ್ರಿ.ಶ.೧೨೦೨) ರಲ್ಲಿ ಹೊಯ್ಸಳ ಬಳ್ಳಾಳನ ಮಗ ಕುಮಾರ ಯಾದವಚಕ್ರವರ್ತಿ ನಾರಸಿಂಗದೇವನು ಆಳುತ್ತಿರುವಾಗ ಅವನ ಸಾಮಂತ ಮಚಿದೇವನ ಉಲ್ಲೇಖ ಬಂದಿದೆ. ಈ ಮಾಚಿದೇವನನ್ನು ಪಲ್ಲವಾನ್ವಯ ಪ್ರದೀಪಕನೆಂದು ಕರೆದಿದ್ದು ಈ ಪಲ್ಲವಾನ್ವಯ ಬಿರುದು ನೊಳಂಬರಿಗೆ ಇದ್ದುದರಿಂದ ಈ ಮಾಚಿದೇವನು ನೊಳಂಬನೇ ಆಗಿರಬೇಕು. ಅವನನ್ನು ಶಾಸನದಲ್ಲಿ ಕೆಳ್ಳಲೆಗುದ್ದಾಮಂ ಶ್ರೀ ಬಂಮಿದೇವನೆಂಬಂ ನೆಗಳ್ದಂ ಆನೆಗಳ್ದ ಬಂಮಿದೇವನ ಮಾನಸ ಸತುಪ್ರಿಯೆಯೆನಿಪ್ಪ ಕೆಳ್ಳಲೆಗೆ ಸುತಂತಾ ನಾದನಖಿಳ ಸಾಮನ್ತಾನತ ಪದಕಮಳ ಮಂಡಳೀಕಂ ಸೋಮಂ। ಆಸೋವಿದೇವ ಕೀರ್ತಿ ವಿಳಾಸಂಗಂ ಹಂಸಯನೆ ಮೈಲವ್ವೆಗ ಮುದ್ದಾಬಿ ಮದನಾವ ತಾರಂಭಾಸುರತೇಜ ಮಾಚಿದೇವಂ ನೆಗಳ್ದಂ। ಸ್ವಸ್ತಿ ಶ್ರೀಮತು ಪಲ್ಲವಾನ್ವಯ ಪ್ರದೀಪಕಂ ಕುಮಾರ ಮಾಚಿದೇವರಸರುಂ ಶ್ರೀಮನ್ಮಹಾಸಾಮನ್ತ ಕಲಿಗಳಂಕುಶಂ ಹುಲ್ಲೂರ ಮಾಚಿದೇವನ ಪ್ರಿಯಪುತ್ರಂ ಮಾರೆಯ ನಾಯಕನುಂ ಶ್ರೀಮದಗ್ಗಪ ವೆಗ್ಗಡೆಯರು ರಾಜದ್ಯಕ್ಷವಾಮನ ಕ್ರಮಿತರುಂ ಹೊಳಲಕೆರೆನಾಡು ಹೊಂಕುಂದ-೩೦ ನ್ನು ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನೆಯಿನಾಳುತ್ತಿರುವಾಗ ಎಂಬುದುದರಿಂದ ಬಹುಶಃ ನೊಳಂಬ ಪಲ್ಲವಾನ್ವಯನೆಂಬ ಬಿರುದಿನಿಂದ ಮಾಚಿದೇವನು ಮತ್ತು ಅವನ ಮಗ ಮಾರೆಯನಾಯಕ ಮತ್ತು ಅಗ್ಗಪವೆಗ್ಗಡೆ ಎಂಬುವವರು ಹೊಳಲಕೆರೆ ನಾಡನ್ನು ಹೊಂಕುಂದ-೩೦ ನ್ನು ಆಳುತ್ತಿದ್ದಂತೆ ಶಾಸನದಲ್ಲಿ ಉಲ್ಲೇಖವಾಗಿದೆ. ಇವನು ನೊಳಂಬರ ಅರ್ವಾಚೀನರೆಂದು ತಿಳಿಯಬಹುದಾಗಿದೆ.[262]

ಇಲ್ಲಿಂದ ಮುಂದೆ ನೊಳಂಬರ ಉಲ್ಲೇಖಗಳು ಅವರು ಗ್ರಾಮಗಳಿಗೆ ನೀಡಿದ ಹೆಸರಿನಿಂದ ದೇವಾಲಯಗಳಿಂದ ಮಾತ್ರ ಉಳಿದುಕೊಂಡು ಬಂದಿದೆ.[263]

✦✦

## ಟಿಪ್ಪಣಿಗಳು

1. EC.XII.SI.28
2. SII.IX.pt.1.No.41
3. ಕ.ವಿ.ಶಾ.ಸಂ.೧.ಹಗರಿ.೨೪
4. ಪ್ರ.ಕ. ಸಂ.೩೪ ಸಂಚಿಕೆ.೨.ಪು.೬೩-೮೧
5. EI.XI.P.34
6. EI.XVIII.p.6; EI.XI.P.340; ARIE.1908. P.70 para 72
7 The Nolambas, p.8
8. EC.IV (R) Ch.347
9. Inscription of pallavas. Pl.VII
10. EC.XI.Cl. 33, 34
11. SII..IX.Pt.1.No.23; ಕ.ವಿ.ಶಾ.ಸಂ.೪,ನಂ.೮೮
12. EC.XII.SI.24,38
13. EC.XII.Mi.52
14. EC.XII.Mi.27
15. EC.IX.Db.9
16. SII.IX.Pt.1,No.23
17. EC.X.Ml.63
18. EC.IX.Ht.111
19. ಕ.ವಿ.ಶಾ.ಸಂ.೧.ಬಳ್ಳಾ೪
20. MAR.1941.p.220; Ins.45
21. EC.XI.Cl.8
22. EC.XI.Cl.5.
23. EC.X.Sppl.57,65;Mb.80; MAR.1924,p.83,Ins.85.
24. EC.VIII.Nr.35.
25. EC.XXII.P.112.
26. EC.V.(R).Tn.253.
27. EC.V.(R).Tn.194.
28. Bom.Gaz.I.Pt.II.P.403.n.3.
29. SII.III.Pt.1.No.47.
30. EC.X.Kl.16, Mb.80, Sp.15,57.
31. MAR.1924,Md.46.
32. ಕನ್ನಡ ನುಡಿ ಸಂ ೪-೬
33. EC.XI.Cl.33.
34. EC.XI.Cl.33.
35. JMU.XII.P.211,n.59.
36. EC.X.Kl.79.

37. Gangas of Talkad.p.77
38. SII.IX.Pt.No.17.
39. EC.XVI.Suppl.No.118.
40. EC.XI.Cl.No.7.
41. EC.XVII.Bg.86.
42. EC.XVII.Sp.27.
43. ARIE.1913.No.588.
44. EC.X.Kl.79.
45. EC.XII.Tp.47.
46. ಕ.ವಿ.ಶಾ.ನಂ.೧ ಬಳ್ಳಾ.೪.
47. EI.IX.P.51.
48. SII.1.P.39-42.
49. EI.IV.P.239.
50. ಉದ್ಧೃತ ಮಾ.ವಿ.ಕ.೯–೧
51. EI.V.P.125.
52. EC.IX.Ht,9;EC.X.Bp,64; MAR.1919.p.31.
53. SII.VI.No.560.
54. EC.XII.Si.38;SII.VI.No.560
55. EC.XII.Si.24
56. EC.XII.Si.24.
57. ಕ.ವಿ.ಶಾ.ಸಂ.೪ ನಂ.೯೨
58. EC.X.Kl.79
59. MAR.1926,p.83; EC.XBp.64; EC.IX.Ht.9.
60. SII.IX.Pt.1.No.18; ಕ.ವಿ.ಶಾ.ಸಂ.೫.ಭಾಗ–೧.ನಂ.೧೭೦.
61. EC.X.Mb.227.
62. EC.IX.Db.3.
63. EC.VIII.(R)Ha.62.
64. EC.X.Sd.39.
65. EC.X.Kl.116.
66. EC.III (R) Ng.139.
67. Inscriptions of Pallavas.No.189
68. EC.VII(R)57
69. EC.IX.Dv.1
70. ಕ.ವಿ.ಶಾ.೪.ನಂ.೧೨೨
71. EC.IX.Dv.1
72. Ar.No.245.of 1977-78
73. EC.X.Mb.228; Ct.30.
74. ಇತಿ.ದ.೧೧.ಪು.೧೧೧

75. EC.X(R)Ak.215
76. EC.XI.(R)Cm.129.
77. EC.IX.Bn.83.
78. ಕ.ವಿ.ಶಾ.ಸಂ.೪.ನಂ.೧೧೦
79. ಕ.ವಿ.ಶಾ.ಸಂ.೪.ನಂ.೯೧
80. EC.XI.Ct.62
81. EC.XII.Si.39.
82. SII.IX.Pt.1.p.10
83. EC.X.Sp.29.
84. EC.X.Bp.42.
85. EC.XI.Jl.29.
86. ಕ.ವಿ.ಶಾ.ಸಂ.೧.ಹರಪ.೨೧೦.
87. ಕ.ವಿ.ಶಾ.ಸಂ.೪.ನಂ.೮೮.
88. ಕ.ವಿ.ಶಾ.ಸಂ.೧.ಹರಪ.೫೩.
89. EC.XII.Mi.27
90. EC.XVI.Mi.133
91. ಕ.ವಿ.ಶಾ.ಸಂ.೧.ಹರಪ.೨೧೧.
92. ARIE.No.242 of 1967-68.
93. EC.XI.Cl.6.
94. ಕ.ವಿ.ಶಾ.ಸಂ.೪ ನಂ.೪, ೯೭, ೧೧೦.
95. EC.X.Sp.64
96. EC.XII.Si.59.
97. EC.X.Gb.85,86,87
98. EC.X.Kl.57
99. EC.XVII.Supp.p.24.
100. EC.X.Gb.4.
101 EC.XI.Ct.56
102. EC.X.Ct.43,44
103. ಕ.ವಿ.ಶಾ.ಸಂ.೪.ನಂ.೪
104. ARIE.No.277, 278 of 1972-73
105. EC.X.Kl.9.
106. EC.X.Sp.28.
107. MAR.1932.No.37.
108. MAR.1945.No.13.
109. SII.IX.Pt.1.No.24.
110. IWG.No.138.
111. EI.IV.P.289.
112. SII.IX.Pt.No.23.
113. SII.IX.Pt.No.38.

114. EC.X.Sp.14
115 EC.X.Kl.4.
116. SII.VI.No.561.
117. EC.XI.Ht.37.
118. SII.IX.Pt.1.No.25.
119 EC.IX.Ht.47.
120. EC.X.Kl.31.
121. EC.X.Kl.158.
122. SII.IX.Pt.1.No.26.
123. EC.X.Ct.No.49.
124. EC.X.Ct.143
125. SII..IX.Pt.1.No.28.
126 SII.IX.pt.1.No.29.
127. SII.IX pt.1.No.30.
128. EC.X.Pt.2.Kl.No.245.
129. EC.X.Mb.126.
130. MAR.1923, No.35, No.34; MAR.1927,No.99;100;
EC.X. Mb.264,93,94,96
131. EC.XVII.Supp.No.306.
132. EC.X.Sp.25.
133 EC.X.Mb.198.
134. EC.X.Kl.198.
135. SII.IX.pt.1.No.27.
136. EC.IX.Ht.37.
137. EC.XII.Mi.52.
138. EC.XVI.Supp.29.
139. SII.IX.Pt.I.No.34.
140. EC.X.Mb.59.
141. SII.IX.Pt.1.No.32.
142 SII.IX.Pt.1.No.33.
143. SII.IX.Pt.1.No.37.
144. A.R.665. 1957-59.
145. MAR.1927.No.101.
146. MAR.1930.No.8.
147. EC.X.Bp.40,44.
148. EC.X.Mb.93,94,96,264.
149. EC.X.Ct.6.

150. EC.X.Mb.51.

151. EC.X.Sp.27

152. MAR.1923,No.34,35,99;MAR.1927.No.34,100.

153. MAR.1923.No.49.

154. EC.X.Ml.63.

155. MAR.1924.No.65.

156. MAR.1924.No.55.

157. MAR.1923.No.32.

158. EC.X.Kl.158.

159. EC.X.Mb.31.

160. EC.X.Mb.59

161. MAR.1947-56 No.10.

162. EC.II.SB.59.

163. EC.XII.Si.26.

164. EC.X.Ml.122.

165. EC.X.Sp.7.

166. EC.XI.Hr.1.

167. EC.X.(R)Ak.284; Cn.128. 102.

168. SII.IX.Pt.1.No.31.

169. SII.IX.Pt.1.No.40.

170. EC.IX.Ht.111.

171. EC.VI.Nj.82.

172. ಕ.ವಿ.ಶಾ.ಸಂ.೪.ನಂ.೧೦೦.

173. EC.IX.Pt.1.No.40.

174. EC.X.Cb.45.

175. EC.III.Md.113.

176. SII.IX.Pt.1.No.39.

177. ಕ.ವಿ.ಸ್ಗಾ.ಸಂ.೧.ಸಿರಗು.೩೮.

178. EC.X.Mb.38.50.

179. EC.X.Mb.38.

180. EC.IX. Ht.111; Mb.208; SII.III.No.7.

181. EC.VIII.Hn.119.

182. EC.XII.Si.29.

183. EC.X.Mb.91.

184. ಕ.ವಿ.ಶಾ.ಸಂ.೧.ಸಿರಗು.೨೭.

185. SII.IX.Pt.41.

186. ARIE.1930-34.No.208.

187. ಕ.ವಿ.ಶಾ.ಸಂ.೧.ಬಳ್ಳಾ.೬೦.

188. EC.X.Mb.84.
189. EC.X.Ct.118.
190. ಕ.ವಿ.ಶಾ.ಸಂ.೧.ಹೊ.ಪೇ.೪೦.
191. ಕ.ವಿ.ಶಾ.ಸಂ.೧.ಸಿರಗು.೫೯.
192. ಕ.ವಿ.ಶಾ.ಸಂ.೧.ಬಲ್ಲ.೩೦.
193. ಕ.ವಿ.ಶಾ.ಸಂ.೧.ಬಾಗಳಿ.೯೭. ೧೩೭.
194. ಕ.ವಿ.ಶಾ.ಸಂ.೧.ಸಿರಗು.೫೫.
195. ಕ.ವಿ.ಶಾ.ಸಂ.೧.ಹರಪ.೩೦.
196. SII.XI.Pt.1 No.61.
197. ಕ.ವಿ.ಶಾ.ಸಂ.೧.ಕಲ್ಯಂಭ.೪೯;SII.IX.Pt.1.No.42.
198. ಕ.ವಿ.ಶಾ.ಸಂ.೧.ನಂ.೪೮.
199. ಕ.ವಿ.ಶಾ.ಸಂ.೧.ಹರಪ.೪೦.
200. ಕ.ವಿ.ಶಾ.ಸಂ.೧.ಬಳ್ಳಾ.೭೦.
201. ಕ.ವಿ.ಶಾ.ಸಂ.೧.ಬಳ್ಳಾ.೫೮.
202. ಕ.ವಿ.ಶಾ.ಸಂ.೧.ನಂ.೩೦.
203. EC.XI.Ni.71.
204. ಕ.ವಿ.ಶಾ.ಸಂ.೧.ಹರಪ.೨೧೭.
205. ಕ.ವಿ.ಶಾ.ಸಂ.೧.ಹಗರಿ.೨೮.
206. ಕ.ವಿ.ಶಾ.ಸಂ.೧.೪೩.೪೪.
207. EC.XI.Dg.126.
208. ಕ.ವಿ.ಶಾ.ಸಂ.೧.ಹಡಗ.೭೦.
209. ಕ.ವಿ.ಶಾ.ಸಂ.೧.ಹಡಗ.೯೭.
210. ಕ.ವಿ.ಶಾ.ಸಂ.೧.ಹರಪ.೨೮.
211. EC.XI.10.
212. ಕ.ವಿ.ಶಾ.ಸಂ.೧.ನಂ.೭೫.
213. ಕ.ವಿ.ಶಾ.ಸಂ.೧.ನಂ.೫೮.
214. SII.XI.Pt.No.75.
215. EC.XI.Ins.No.19.
216. ಕ.ವಿ.ಶಾ.ಸಂ.೧.ನಂ.೫೪.
217. SII.IX.Pt.No.96.
218. ಕ.ವಿ.ಶಾ.ಸಂ.೧.ನಂ.೭೩.
219. EC.XI.20.
220. ಕ.ವಿ.ಶಾ.ಸಂ.೧.ಹರಪ.೨೯.
221. ಕ.ವಿ.ಶಾ.ಸಂ.೧.ನಂ.೪೫.
222. ಕ.ವಿ.ಶಾ.ಸಂ.೧.ಬಳ್ಳಾ.೪೫.
223. ಕ.ವಿ.ಶಾ.ಸಂ.೧.ಹಗರಿ.೨೪.
224. ಕ.ವಿ.ಶಾ.ಸಂ.೧.ಸೊಂಡೂರು.೪೪.
225. ಕ.ವಿ.ಶಾ.ಸಂ.೧.ಹಗರಿ.೧೭.

226. EC.VII.Sm.8. 9.
227. SII.XI.Pt.1.No.105.
228. ಕ.ವಿ.ಶಾ.ಸಂ.೧.ಬಳ್ಳಾ.೬೦.
229. ಕ.ವಿ.ಶಾ.ಸಂ.೧.ಹಡಗ.೨೬.
230. ಕ.ವಿ.ಶಾ.ಸಂ.೧.ಹಗರಿ.೯.
231. EC.VII.Sm.107.
232. ಕ.ವಿ.ಶಾ.ಸಂ.೧.ಬಳ್ಳಾ.೫೦.
233. ಕ.ವಿ.ಶಾ.ಸಂ.೧.ಹರಪ.೧೦೬.
234. SII.XI.Pt.1.No.83.
235. EC.XI.Dg.124.
236. SII.IX.Pt.1.111.
237. ಕ.ವಿ.ಶಾ.ಸಂ.೧.ಹಗರಿ.೪೧.
238. SII.IX.Pt.1.No.110.
239. ಕ.ವಿ.ಶಾ.ಸಂ.೧.ಹರಪ.೩೧.
240. SII.IX.Pt.1.No.114.
241. EC.XI.Jl.10.
242. ಕ.ವಿ.ಶಾ.ಸಂ.೧.ಹಗರಿ.೧೯೦.
243. SII.IX.Pt.1.116.
244. I.A.VIII.P.97-98.
245. EC.X.(R).Ak.95.
246. SII.IX.Pt.1.133.
247. ಕ.ವಿ.ಶಾ.ಸಂ.೧.ನಂ.೧೩೨
248. SII.XI.Pt.1.No.109.
249. ಕ.ವಿ.ಶಾ.ಸಂ.೧.ನಂ.೪.
250. EC.XI.Mk.28.
251. EC.XI.Cd.10.
252. EC.XII.Si.9.
253. SII.VII.No.369.
254. SII.XX.No.49.
255. SII.XI.Pt.2.124; IBID.No.123.
256. SII.XVIII.No.89.
257. MAR.1930.P.236 to 242.
258. MAR.1929.No.54.
259. SII.XI.Pt.1.No.127.
260. MAR.1929.P.239.
261. ಕ.ವಿ.ಶಾ.ಸಂ.೬.ನಂ.೩೦.
262. EC.XI.Cd.23.
263. ಕ.ವಿ.ಶಾ.ಸಂ.೧.ಬಳ್ಳಾ.೨೦೩.

# ಅಧ್ಯಾಯ – IV

## ಮಾಂಡಲೀಕರು : (ಮಂಡಳೇಶ್ವರರು)

ಪ್ರಾಚೀನ ಕರ್ನಾಟಕದ ಆಡಳಿತ ವ್ಯವಸ್ಥೆ ರಾಜನಿಗೆ ಸೇರಿತ್ತು. ಒಂದು ರಾಜ್ಯದ ಅಥವಾ ದೇಶದ ಜನಜೀವನವೂ ಆ ರಾಜನ ಏಳು–ಬೀಳುಗಳನ್ನು ಅವಲಂಬಿಸಿರುತ್ತಿತ್ತು. ಹೀಗಾಗಿ ರಾಜ ತನ್ನ ಪ್ರಜೆಗಳನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದ. ಪ್ರಜೆಗಳಿಗೆ ರಾಜ ಪ್ರತ್ಯಕ್ಷದೇವತೆ ಮತ್ತು ದೈವಾಂಶ ಸಂಭೂತ. ಪ್ರಜೆಗಳನ್ನು ರಕ್ಷಿಸುವುದು ಅವನ ಕರ್ತವ್ಯವಾಗಿತ್ತು. ಅದಕ್ಕಾಗಿ ರಾಜನಾದವನು ರಾಜ್ಯವನ್ನು ನಗರ, ಪಟ್ಟಣ, ನಾಡು, ಬಾಡ, ವಿಷಯ, ಗ್ರಾಮ, ಹಳ್ಳಿ ಮುಂತಾಗಿ ವಿಂಗಡಿಸಿಕೊಂಡು ಅಲ್ಲಿನ ಆಡಳಿತವನ್ನು ರಾಜನ ಪರವಾಗಿ ನೋಡಿಕೊಳ್ಳಲು ಮಾಂಡಳೀಕ, ಮಂತ್ರಿ, ದಂಡನಾಯಕ, ಪೆರ್ಗಡೆ, ಪಟ್ಟಣಾಧಿಪತಿ, ಗಾವುಂಡ ಇತ್ಯಾದಿ ಹೆಸರುಗಳಿಂದ ರಾಜ್ಯದ ಅಧಿಕಾರಿಗಳನ್ನಾಗಿ ನಿಯಮಿಸಿಕೊಳ್ಳುತ್ತಿದ್ದ.

ನೊಳಂಬರ ಕಾಲದ ಆಡಳಿತದ ಸಮಗ್ರ ಚಿತ್ರಣ ನಮಗೆ ದೊರೆಯುತ್ತಿಲ್ಲ. ಇವರ ಸಮಕಾಲೀನ ಅರಸರ ಆಳ್ವಿಕೆಯಂತೆಯೇ ಇವರ ಕಾಲದಲ್ಲಿಯೂ ಆಡಳಿತ ನಡೆದಿರಬೇಕು. ರಾಜ್ಯಾಡಳಿತದ ಅಭಿವೃದ್ಧಿಗಾಗಿ ತೆರಿಗೆ ಹಾಕುವುದು, ಧಾರ್ಮಿಕ ಕಾರ್ಯಗಳಾದ ದೇವಾಲಯದ ರಚನೆ, ಕೆರೆ, ಕಟ್ಟೆಗಳನ್ನು ಕಟ್ಟಿಸುವ ಅಥವಾ ಕಟ್ಟಿಸುವಂತೆ ಪ್ರಚೋದನೆಯೂ ನಡೆಯುತ್ತಿತ್ತು. ನೆರೆರಾಜ್ಯಗಳೊಡನೆ ಯುದ್ಧ ಮಾಡಲೇಬೇಕಾಗಿ ಬಂದಂತ ಸಂದರ್ಭಗಳಲ್ಲಿ ಅಥವಾ ಯುದ್ಧ ನಡೆಸುವ ಅಥವಾ ಸಂಧಿ ಮಾಡಿಕೊಳ್ಳುವ ಅಥವಾ ಇತರೆ ಅರಸರಿಗೆ ತಮ್ಮ ನೆರವು ನೀಡಬೇಕಾಗಿ ಬರುವ ಈ ಎಲ್ಲಾ ಸಂದರ್ಭಗಳಲ್ಲಿ ತನ್ನ ಆಡಳಿತದಲ್ಲಿನ ಅಮಾತ್ಯ, ಸಂಧಿವಿಗ್ರಹಿ, ಸೇನಾ ದಂಡನಾಯಕ ಮುಂತಾದ ಹಿರಿಯ ಅಧಿಕಾರಿಗಳನ್ನು ಸೇರಿಸಿ ಒಂದು ನಿರ್ಧಾರಕ್ಕೆ ಬರುತ್ತಿದ್ದರು.

ರಾಜನಾದವನು ತನ್ನ ನಂಬಿಕೆಗೆ ಅರ್ಹನಾದ ವ್ಯಕ್ತಿಗಳಿಗೆ ಅಧಿಕಾರ ನೀಡುತ್ತಿದ್ದ. ಅದಕ್ಕೆ ಕಾರಣ ಹಿಂದೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಓಡಾಡಲು ಇದ್ದ ತೊಡಕುಗಳು, ರಾಜ ಒಂದು ಕಡೆ ಯುದ್ಧ ಮಾಡಿ ಗೆದ್ದು ಹಿಂದಿರುಗಿದ ತಕ್ಷಣ ಅಲ್ಲಿಯ ಅಧಿಕಾರ ನಿರ್ವಹಿಸುತ್ತಿದ್ದ

ಮಾಂಡಲೀಕ ಅಥವಾ ಅಧಿಕಾರಿ ನಿಷ್ಠೆ ಬದಲಾಯಿಸುತ್ತಿದ್ದ ಘಟನೆಗಳೂ ನಡೆಯುತ್ತಿದ್ದವು. ಅನೇಕ ಮಾಂಡಲೀಕರು, ಅಧಿಕಾರಿಗಳು ತಮ್ಮನ್ನು 'ರಾಜ್ಯ ಮೂಳಸ್ತಂಭ'ರೆಂದು ಕರೆದುಕೊಂಡಿದ್ದಾರೆ. ಇದರಿಂದ ಅರಸರು ಅಧಿಕಾರಿ ಅಥವಾ ಮಾಂಡಳೀಕರ ಮೇಲೆ ಅವಲಂಬಿಸಿದ್ದುದ್ದನ್ನು ತಿಳಿಯಬಹುದು. ಇಂತಹ ಅಧಿಕಾರಿಗಳಿಂದ ಅಧಿಕಾರದ ದುರುಪಯೋಗವಾಗಿರುವ ಸಾಧ್ಯತೆಗಳೂ ಇಲ್ಲದಿಲ್ಲ. ಹೀಗಾಗಿ ತನಗೆ ನಿಷ್ಠೆ ಮತ್ತು ಅರ್ಹರಾಗಿದ್ದವರನ್ನು ಪರೀಕ್ಷಿಸಿ ರಾಜ ಅಧಿಕಾರ ನೀಡುತ್ತಿದ್ದ.

ಧಾರ್ಮಿಕ ಕಾರ್ಯಗಳನ್ನು ರಾಜ ಮಾಡುತ್ತಿದ್ದುದು ಸರಿಯಷ್ಟೆ. ಆದರೆ ಅಧಿಕಾರಿಗಳು ಅಥವಾ ಪುರಜನರು ರಾಜನ ಹೆಸರಿನಲ್ಲಿ ದಾನ-ದತ್ತಿಗಳನ್ನು ನೀಡುತ್ತಿದ್ದರು. ಅಂತಹ ಧಾರ್ಮಿಕ ಕಾರ್ಯಗಳನ್ನು ಮಾಡಿದವರನ್ನು ಗೌರವಿಸಿ ಪ್ರಶಸ್ತಿ ಪ್ರಧಾನ ಮಾಡುತ್ತಿದ್ದುದೂ ಉಂಟು. ರಾಜ ತನ್ನ ಅಥವಾ ತನ್ನ ವಂಶದ ಹಿರಿಯರ ಹೆಸರಿನಲ್ಲಿ ಬಿರುದು ಬಾವಲಿಗಳನ್ನು ನೀಡುತ್ತಿದ್ದ. ಬಿದಿಂಯೆಱೆಂಯ ಎಂಬುವವನು ಕೆರೆ ಕಟ್ಟಿಸಿದಾಗ ವೀರನೊಳಂಬನು ಅವನನ್ನು ಗೌರವಿಸಿ ನೊಱಂಬದೊಡ್ಡನೆಂದು ಹೆಸರನ್ನು ಕೊಟ್ಟು ಕಡಗವಿಡುತ್ತಾನೆ. ಶ್ರೀಮುಖರಾಮನ ಹೆಸರಿನಲ್ಲಿ ಶ್ರೀಮುಖದೊಡ್ಡನೆಂದು, ಪೊನ್ನೇಱರರಸನ ಹೆಸರಿನಲ್ಲಿ ಪೊನ್ನೇಱದೊಡ್ಡನೆಂದು ಕಡಗಗಳನ್ನು ತೊಡಿಸಿ ಗೌರವಿಸುತ್ತಾರೆ.[1] ಇಱಿವನೊಱಂಬ ಘಂಟೆಯಂಕಕಾರ ಪಲ್ಲವಾದಿತ್ಯನು ಕರವಯ್ಯ ಎಂಬುವವಟಗೆ ಮುಮ್ಮಡಿ ಗವಱೆ ಪಲ್ಲವಾದಿತ್ಯ ನೊಱಂಬಸೆಟ್ಟಿ ಎಂದು ಹೆಸರನಿಟ್ಟು, ಪಟ್ಟವನ್ನು ಕಟ್ಟಿ, ಕೊಡೆ, ಕುದುರೆ, ಅಡ್ದಣಿಗೆ, ಏರಲ್ ಕುದುರೆ, ಕುಂಚ, ತಳಿಗೆ ಮುಂತಾದವುಗಳನ್ನು ಕೊಡುತ್ತಾನೆ.[2] ವೀರಮಹೇಂದ್ರ ನೊಱಂಬ ಅರಸನು ಕೀರ್ತಿಗಾವುಂಡನ ಮಗನಿಗೆ ನೊಱಂಬ ಗಾವುಂಡನೆಂದು ಹೆಸರನ್ನು ಕೊಟ್ಟು ಪಟ್ಟ ಕಟ್ಟಿದ ವಿವರವನ್ನು ಒಂದು ಶಾಸನ ತಿಳಿಸುತ್ತದೆ.

ನೊಳಂಬರ ಶಾಸನಗಳು ಒಬ್ಬ ವ್ಯಕ್ತಿಯನ್ನು ಮಹಾಪ್ರಧಾನಿ, ಮಹಾಮಾತ್ಯ, ದಂಡನಾಯಕ, ಮಹಾದಂಡನಾಯಕ, ಸಂಧಿವಿಗ್ರಹಿ ಮುಂತಾದ ವಿಶೇಷಣಗಳಿಂದ ಕರೆದಿದೆ. ಈ ವಿಶೇಷಣಗಳಿಂದ ಅವರು ಇಂತಹದೇ ನಿರ್ದಿಷ್ಟ ಕರ್ತವ್ಯವನ್ನು ನಿರ್ವಹಿಸುತ್ತಿದ್ದರೆಂದು ಹೇಳುವುದು ಕಷ್ಟ. ರಾಜನ ಕೈಕೆಳಗೆ ಮಂಡಳೇಶ್ವರ, ಅವನ ಕೈಕೆಳಗೆ ನಾಡಪ್ರಭು, ಅವನ ಕೈಕೆಳಗೆ ಊರಗಾವುಂಡ, ಊರೊಡೆಯ ಮುಂತಾದ ಕ್ರಮದಲ್ಲಿ ಅಧಿಕಾರ ನಿರ್ವಹಿಸುತ್ತಿದ್ದರೆಂದು ತಿಳಿಯುತ್ತದೆ. ಮಂಡಲೇಶ್ವರನಿಗೂ, ನಾಡ ಪ್ರಭುವಿಗೂ ನಡುವೆ ಮನ್ನೆಯ ಎಂಬ ಹೆಸರಿನ ಅಧಿಕಾರಿಯ ಹೆಸರು ಕಾಣಬರುತ್ತದೆ. ಮನ್ನೆಯ ಎಂದರೆ ವಂಶಪಾರಂಪರ್ಯವಾಗಿ ಗ್ರಾಮವನ್ನು ಉಪಭೋಗಿಸುವ ಅಥವಾ ಗ್ರಾಮದ ಉತ್ಪನ್ನದ ಕೆಲವು ಭಾಗವನ್ನು ಉಪಯೋಗಿಸುವ ಅಧಿಕಾರ ಪಡೆದಿದ್ದವರು.

ಅಧಿರಾಜರ ಅಧೀನದಲ್ಲಿದ್ದು ಬೇರೆ ಬೇರೆ ರಾಜ್ಯಗಳನ್ನು ಆಳುತ್ತಿದ್ದವರು ಸಾಮಂತರು

ಮತ್ತು ಮಡಲೇಶ್ವರರು. ಮಹಾಮಂಡಲೇಶ್ವರರನ್ನು ಅಧಿರಾಜರು ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಇಡುತ್ತಿದ್ದರು. ಅವರವರ ಆಳ್ವಿಕೆಯ ಪ್ರದೇಶದಲ್ಲಿ ಅಧಿರಾಜರಿಗಿದ್ದ ಸ್ಥಾನ–ಮಾನಗಳೇ ಇವರಿಗೂ ಇರುತ್ತಿದ್ದವು. ಇವರು ಸಹ ಅಧಿರಾಜರಂತೆ ಮಂತ್ರಿಗಳನ್ನು ಸೇನೆಯನ್ನು ಇತರ ಅಧಿಕಾರಿ ವರ್ಗದವರನ್ನು ಹೊಂದಿರುತ್ತಿದ್ದರು. ಅನೇಕ ಮಿತ್ರರಾಜರನ್ನೂ ಅವರ ಪಾರಂಪರಿಕ ಆಳ್ವಿಕೆಯ ಪ್ರದೇಶಗಳಲ್ಲಿಯೇ ತಮ್ಮ ಮಾಂಡಳೀಕರಾಗಿ ಆಳ್ವಿಕೆ ಮಾಡಲು ಬಿಡುತ್ತಿದ್ದರು. ಇಂತಹ ಮಾಂಡಳೀಕರು ಬೇರೆ ಬೇರೆ ಕಾರಣಗಳಿಂದ ತಮ್ಮ ಮೂಲ ನೆಲೆಯನ್ನು ಕಳೆದುಕೊಂಡಾಗ ಅಂತಹವರನ್ನು ತಮ್ಮ ರಾಜ್ಯಾಡಳಿತದ ಮತ್ತೊಂದು ನೆಲೆಯಲ್ಲಿ ಜಾಗ ಕಲ್ಪಿಸುತ್ತಿದ್ದರು.

ಸಾಮಂತರು ಮೊದಲಿನಿಂದಲೇ ಒಂದು ಪ್ರದೇಶದ ಆಳ್ವಿಕೆ ಮಾಡುತ್ತಿದ್ದವರು. ಅಧಿರಾಜರು ಅವರನ್ನು ಗೆದ್ದಿರುವುದರಿಂದ ಅವರ ಅಧೀನದಲ್ಲಿದ್ದು ಅವಕಾಶ ಒದಗಿದಾಗ ಸ್ವತಂತ್ರರಾಗಲು ಹವಣಿಸುತ್ತಿದ್ದರು. ಅಂತಹ ಒಬ್ಬ ಸಾಮಂತಾಧಿಪತಿ ಪಙ್ಚಲದೇವನ ಹೆಸರು ಉಲ್ಲೇಖವಾಗಿದೆ. ಕ್ರಿ.ಶ. ೯೭೫ರಲ್ಲಿ ಪಡುವಗೆರೆಯಯ್ಯೂರರ ಭೋಗಪತಿಯಾಗಿ ಪೆರ್ಗ್ಗಡೆ ಗುಣ್ಡಮಯನನ್ನು ಅಯ್ಯಪಮಂಗಲವನ್ನು ಆಳುತ್ತಿರುವಾಗ ಈತನ ಮೇಲೆ ಪೂರ್ವಮರ್ಯ್ಯಾದೆದಪ್ಪಿ ಆಕ್ರಮಣ ಮಾಡಿದಾಗ ಮಾರಮಯ್ಯನ ಮಗನಾದ ಏಚಯ್ಯನು ಆಕ್ರಮಣ ಮಾಡಿದವನನ್ನು ಇರಿದು ಕೊಂದು ಪೆರ್ಗ್ಗಡೆ ಗುಣ್ಡಯ್ಯನಿಗೆ ಕ್ಷಮೆ ಗೊಟ್ಟದ್ದನ್ನು ತಿಳಿಸುತ್ತದೆ.[3]

ದಂಡನಾಯಕ :

ಕ್ರಿ.ಶ.ಸು. ೯೩೫ರಲ್ಲಿ ಅಣ್ಣಯ್ಯ ಬೀರನೊಳಂಬನು ಆಳುತ್ತಿದ್ದಾಗ ಪ್ರಚಂಡ ದಂಡನಾಯಕನ ಮಗ ಗೊಗ್ಗಿಲ್ಯಾಟಿಲ್ಮ್ಮೞಿಯನ್ನು ಆಳುತ್ತಿದ್ದ. ಆಗ ಗುಂಡಣ್ಣ ದಂಡನಾಯಕನಿದ್ದುದನ್ನು ಉಲ್ಲೇಖಿಸುತ್ತದೆ. ಈ ಗುಂಡಣ್ಣ ದಂಡನಾಯಕ ನಿಕ್ಕಪಯ್ಯನ ಮಗ ಕಾನ್ತದ ಗೊಗ್ಗಿಯು ಊೞಳಿವಿನಲ್ಲಿ ಸತ್ತದ್ದನ್ನು ತಿಳಿಸುತ್ತದೆ.[4] ಅಗಳಿ ಗ್ರಾಮದ ಕ್ರಿ.ಶ.ಸು ೯೫೦ರಲ್ಲಿ ಶಾಸನದಲ್ಲಿ ನೊಳಂಬಾಧಿ ರಾಜನು ಆಳುತ್ತಿರಲು ಬಲ್ಲಹನ (ರಾಷ್ಟ್ರಕೂಟರ) ದಂಡನಾಯಕ ಕೋಟಯ್ಯನು ನೊಳಂಬರಲ್ಲಿ ಮಣ್ಣನ್ನು ಪಡೆದು ವಿಷ್ಣುಗೃಹ ಕಟ್ಟಿಸಿ ದಾನ ಮಾಡಿದ್ದನ್ನು ತಿಳಿಸುತ್ತದೆ.[5] ಕಮ್ಮಸಂದ್ರದ ಕ್ರಿ.ಶ.೧೦೦೧ರ ಶಾಸನದಲ್ಲಿ ಅಯ್ಯಪದೇವನ ಮಗ ಗನ್ನರಸನು ದೞಿಗವಾಡಿಯ ಕುೞುಕ್ಷನ್ದಙ್ಚ .. ಆಳುತ್ತಿರುವಾಗ ಅವನ ದಂಡನಾಯಕ ಶ್ರೀಧರಯ್ಯನು ನಾಡುಂ ನಾೞ್ಗಿವುಣ್ಡಂ, ಸಿದ್ಧಗಾವುಂಡಂ ಸೇರಿ ಸತ್ತಿ ಮಂಗಲದ ಭೂಮಿಯ ಸಮ್ಮನ್ದ ಮಾರಮಯ್ಯನು ಪುಣಿಸಿಯಮ್ಮ ಮೊದಲಾದವರು ಸೇರಿ ಚಾವುಂಡಯ್ಯನಿಗೆ ದಾನ ಸಾಸನ ನೀಡಿದ್ದನ್ನು ತಿಳಿಸುತ್ತದೆ.[6] ಮೊರಿಗೇರಿಯ ಕ್ರಿ.ಶ.೧೦೪೫ರ ಮತ್ತು ೧೦೪೯ರ ಶಾಸನಗಳಲ್ಲಿ ನನ್ನಿನೊಳಂಬ ಪಲ್ಲವಪೆರ್ಮ್ಮಾನಡಿಗಳು ಆಳುತ್ತಿರುವಾಗ ದಂಡನಾಯಕ ತಿಕಣ್ಣ ಪ್ರಮುಖ ಲೆಂಕಸಾಸಿರ್ವ್ವರು ಅರ್ಮ್ಮೆಳೆ, ನೆಲ್ಲಿಕುದಿರು,

ಸೊನ್ನ, ಪೊಬಿಲ್ಗುಂದೆ, ಸೂಗೂರು ಮೋರಿಂಗೇಱ ಮೊದಲಾದ ಆರು ಬಾಡವನ್ನು ಆಳುತ್ತಿದ್ದಂತೆ ಉಲ್ಲೇಖಿಸಿದೆ. ಈ ಲೆಂಕರಿಗೆ ಆರು ಗ್ರಾಮಗಳನ್ನು ಅವರ ಉಪಯೋಗಕ್ಕಾಗಿ ರಾಜ ನೀಡಿದ್ದಿರಬೇಕು. ಇವರು ಆ ಗ್ರಾಮದ ಉತ್ಪತ್ತಿಯನ್ನು ಸ್ವತಂತ್ರವಾಗಿ ಅನುಭವಿಸುತ್ತಾ, ಆ ಗ್ರಾಮಗಳಲ್ಲಿ ಕೆಲವು ಸತ್ಕಾರ್ಯಗಳನ್ನು ಮಾಡಿಸುತ್ತಾರೆ. ಈ ಲೆಂಕರ ಪ್ರಮುಖನಾದ ತಿಕಣ್ಣನು ಬ್ರಾಹ್ಮಣನೆಂಬುದು ಗಮನಾರ್ಹ. ಇದೇ ಶಾಸನದಲ್ಲಿ ಬಲ್ಲವಾಡಿಯೆಪ್ಪತ್ತರ ಪ್ರದೇಶವನ್ನು ಮನ್ನೆಯ ಚಟ್ಟರಸ ಅನುಭವಿಸುತ್ತಿದ್ದ.[7]

ಹಿರೇ ಮ್ಯಾಗಳಗೇರಿಯ ಕ್ರಿ.ಶ ೧೦೫೪ರ ಶಾಸನದಲ್ಲಿ ದಂಡನಾಯಕ ಜಗದೇಕಮಲ್ಲ ನೊಳಂಬ ಬ್ರಹ್ಮಾದಿ ರಾಜನ ಉಲ್ಲೇಖವಿದ್ದು ಇವನು ನೊಳಂಬ ಬಿರುದುಗಳನ್ನೇ ಧರಿಸಿ ಅವರ ಸಾಮಂತನಾಗಿ ಹಿರೇ ಮ್ಯಾಗಳಗೇರಿಯಲ್ಲಿ ಆಳ್ವಿಕೆ ಮಾಡುತ್ತಿದ್ದ.[8] ಉಚ್ಚಂಗಿ ದುರ್ಗದ ಕ್ರಿ.ಶ.೧೦೬೦ ರ ಶಾಸನದಲ್ಲಿ ನೊಳಂಬ ಪಲ್ಲವಪೆರ್ಮಾಡಿದೇವ ಜಯಸಿಂಘದೇವನು ಆಳುತ್ತಿರುವಾಗ ದಂಡನಾಯಕ ಮಾಳಪಯ್ಯಗಳ ಮಹಾಸನ್ದಿವಿಗ್ರಹಿ ದಂಡನಾಯಕರ ಉಲ್ಲೇಖವಿದೆ. ಇವನನ್ನು ಕವಿಯು ವಿಶೇಷಣಗಳ ಸರಮಾಲೆಯಲ್ಲಿ ವರ್ಣಿಸಿದ್ದಾನೆ.

ಮಹಾಸಾಮನ್ತಾಧಿಪತಿ ಮಹಾಪ್ರಚಣ್ಡದಂಡನಾಯಕ ಆಸ್ಥಾನ ವಸ್ತುನಾಯಕ ಸಕಟಿ ವಿದ್ವಜ್ಜನಮೃತಾರ್ಣ್ಣವ ಪೂರ್ಣಚನ್ದ್ರಸೂನ್ಯತ ಹರಿಶ್ಚನ್ದ್ರಂ ಚತುರ ಚತುರ್ಮುಖಂ ಪರಾಂಗನಾ ಪರಾಙ್ಮುಖಂ ವಿನಯ ವಿಭೂಷಣಂ ಪರಿವಾರ ಪರಿತೋಷಣಂ ಪರಮಣ್ಡಳ ಖಾಣ್ಡವ ಪಾಣ್ಡುನನ್ದನಂ। ವಿಭವ ಸರಿಕ್ರನ್ದನಂ ಬಂಧುಜನ ಚನ್ತಾಮಣಿ। ದಂಡನಾಯಕ ಸಿಖಾಮಣಿ। ಭಾಷಾಚತುರ್ಭುಜಂ। ಸುಜನ ಮಖರಧ್ವಜಂ। ಕಾನ್ತಾಕೌನ್ತೇಯಂ। ಪತಿಹಿತವೈನತೇಯಂ ಪರಚಕ್ರವಕ್ರಂ ಶಿಂಘನ ಚಕ್ರಂ ನಾಮಾದಿ ಪ್ರಸಸ್ತಿ ಸಹಿತಂ ಶ್ರೀಮದ್ದಣ್ಡ ನಾಯಕ ದಾಮಪಯ್ಯಂ ಉಚ್ಚಂಗಿ ಮೂವತ್ತುಮನಾಳುತ್ತಿದ್ದಂತೆ ಹೇಳಿದೆ.[9] ಇಲ್ಲಿ ದಾನ ಕೊಟ್ಟ ವಿಷಯಕ್ಕಿಂತ ಹೆಚ್ಚಾಗಿ ದಂಡನಾಯಕ ಮೊಳಪಯ್ಯನ ಬಗೆಗಿನ ಗೌರವವನ್ನು ವ್ಯಕ್ತಪಡಿಸುತ್ತದೆ. ಗುತ್ತಿಯ ಕ್ರಿ.ಶ. ೧೦೬೪ ರ ಶಾಸನದಲ್ಲಿ ನೊಳಂಬ ಪಲ್ಲವಪೆರ್ಮಾಡಿ ಜಯಸಿಂಗದೇವನು ಆಳುತ್ತಿರುವಾಗ ದಂಡನಾಯಕ ಚಾವುಂಡಯ್ಯನ ಉಲ್ಲೇಖವಿದೆ.[10] ಹಳೆಬ್ಬೂರು ಗ್ರಾಮದ ಕ್ರಿಶ ೧೦೮೧ ರ ಶಾಸನದಲ್ಲಿ ಜಯ ಸಿಂಗದೇವನ ದಂಡನಾಯಕ ತಂಬರಸರು ಬನವಾಸಿ ಸಾನ್ತಳಿಗೆಯನ್ನು ಆಳುತ್ತಿದ್ದುದನ್ನು ಹೇಳಿದೆ.[11] ಕುರ್ತುಕೋಟೆಯ ಕ್ರಿ.ಶ.೧೦೮೨ ರಲ್ಲಿ ವೀರನೊಳಂಬ ಜಯಸಿಂಗದೇವನು ಆಳುತ್ತಿರುವಾಗ ಅವನ ಮಹಾಪ್ರಧಾನ ಮನವೆರ್ಗಡೆ ದಂಡನಾಯಕ ವಾಮದೇವ ಎಂಬುವವನು ಕಡಲಗೆರೆಯ ಪೂರ್ವ ಮರಿಯಾದೆಯನ್ನು ಪುನರ್ದತ್ತಿಯಾಗಿ ನೀಡಿದ.[12] ಬಳ್ಳಿಗಾವೆಯ ಕ್ರಿ.ಶ.ಸು.೧೦೮೫ರಲ್ಲಿ ವೀರನೊಳಂಬ ಜಯಸಿಂಹದೇವನು ಆಳುತ್ತಿರುವಾಗ ಅವನ ಮಹಾಪ್ರಧಾನ ಹಿರಿಸಂಧಿವಿಗ್ರಹಿ ದಂಡನಾಯಕ ತಂಬರಸರ ಸಾನ್ತಳಿಗೆಯನ್ನು ಆಳುತ್ತಿದ್ದಂತೆ ತಿಳಿಸುತ್ತದೆ.[13] ಹೇಮಾವತಿಯ ಕ್ರಿ.ಶ. ೧೧೨೬ ರಲ್ಲಿ

ಪಾವಣ ದಣ್ಣಾಯಕನು ಸೀರೆನಾಡೊಳಗಣ ಹೆಂಜೇರು ಪಟ್ಟಣದ ಮಹಾಘಟಿಕಾಸ್ಥಾನದ ಶ್ರೀನೊಣಂಬೇಶ್ವರ ದೇವರಿಗೆ ದಾನ ಮಾಡಿದ.[14] ಈ ದಂಡನಾಯಕನನ್ನು, ಮಹಾಪ್ರಧಾನರಾಗಿ, ಹಿರಿಯ ಸಂಧಿವಿಗ್ರಹಿಯಾಗಿ ಆಳುತ್ತಿದ್ದುದನ್ನು ಶಾಸನ ಹೇಳುತ್ತದೆ.

ಪೆರ್ಗ್ಗಡೆ

ರಾಜನ ಪರವಾದ ಸ್ಥಳೀಯ ಅಧಿಕಾರಿಗಳಾಗಿ ರಾಜ್ಯದ ಸುಂಕ ವಸೂಲಿ ಮುಂತಾದವುಗಳ ಜವಾಬ್ದಾರಿಯುನ್ನು ಪೆರ್ಗ್ಗಡೆ / ಹೆಗ್ಗಡೆಗಳು ವಹಿಸಿಕೊಂಡಿದ್ದರು. ಸ್ಥಳೀಯವಾಗಿ ಪ್ರಭಾವಿಗಳಾಗಿದ್ದರು. ಸಾಮಾನ್ಯವಾಗಿ ಬ್ರಾಹ್ಮಣರು ಈ ಹುದ್ದೆಗಳಲ್ಲಿದ್ದರು. ಹಿರೇಮದರಿ ಗ್ರಾಮದ ಶಾಸನದಲ್ಲಿ (ಕ್ರಿ.ಶ.ಸು. ೯೨೦) ಸನ್ನಿಗಾವುಣ್ಡ .. ಲಗಾವುಣ್ಡ. ನಾಗಗಾವುಣ್ಡ. ಟಯ್ಯ ಎಳವರಿಗಾವುಣ್ಡ ಎಱೆಮಾರಂ ಎಚೆಯಮ್ಮ ಗಾವುಂಡ ನೊಱಂಬ ಗಾವುಂಡನಮಗ ಅಣ್ಣಿಗಂ ಇನಿಬರುಮೀಮಣ್ಣ .. ರಕ್ಷಿಸಲು ... ಎಂದು ಹೇಳಿದೆ.[15] ಶಿಥಿಲವಾದ ಈ ಶಾಸನದಲ್ಲಿ ಈ ಗಾವುಂಡರು ಊರಱವಿನಲ್ಲಿ ಸತ್ತಿರುವುದನ್ನು ತಿಳಿಸುತ್ತದೆ. ಬಲ್ಲಕುಂದೆ ಗ್ರಾಮದ ಕ್ರಿ.ಶ.೯೬೬ ಶಾಸನದಲ್ಲಿ ಪೆರ್ಗ್ಗಡೆ (ಜಿ)ನಮಯ್ಯ ... ಎಂಬುವನ ಉಲ್ಲೇಖವಿರುತ್ತದೆ.[16]

ತುಂಬಿಗರೆಯ ಕ್ರಿ.ಶ.ಸು. ೧೦೧೮ ರಲ್ಲಿ ಪೆರ್ಗ್ಗಡೆ ಚನ್ದಿಮಯ್ಯ[17] ಬಾಗುಳಿಯ ಇದೇ ಕಾಲದಲ್ಲಿ ಪೆರ್ಗ್ಗಡೆ ನರಸಿಂಘಯ್ಯನು[18] ಹಿರೇಮ್ಯಾಗಳಗೇರಿಯ ಕ್ರಿ.ಶ. ೧೦೩೪ ರಲ್ಲಿ ಮನೆವೆರ್ಗ್ಗಡೆ ಪಲ್ಲವ ಬ್ರಹ್ಮಾಧಿರಾಜರನ್ನು ಉಲ್ಲೇಖಿಸಿದೆ.[19] ಇದೇ ಕಾಲದ ಚಿಮ್ಮನಹಳ್ಳಿಯ ಶಾಸನದಲ್ಲಿ ಮನೆವೆರ್ಗಡೆ ಕೇತನಾಯಕ ನೆಲ್ಕುದುರೆಯನ್ನು ಆಳುತ್ತಿದ್ದ.[20] ಮುದಿಹಡದಿಯ ಕ್ರಿ.ಶ. ೧೦೩೬ರ ಶಾಸನದಲ್ಲಿ ಬ್ರಹ್ಮಾಧಿರಾಜನು ಮಹಾಮಾತ್ಯ ಪದವೀ ಮತ್ತು ಮನೆ ವೆರ್ಗ್ಗಡೆಯ ಕಾರ್ಯಗಳನ್ನು ನೋಡಿಕೊಂಡು ಪದಡೆಪನ್ನೆರಡನ್ನು ಆಳುತ್ತಿದ್ದುದನ್ನು ತಿಳಿಸುತ್ತದೆ.[21] ಕಂಚಿಕೇರಿಯ ಕ್ರಿ.ಶ. ೧೦೩೯ರ ಶಾಸನದಲ್ಲಿ ಪೆರ್ಗ್ಗಡೆ ಬಾಚಿಮಯ್ಯ ಗಂಚಿಕೆರೆಯನ್ನು ಆಳುತ್ತಿದ್ದ. ಸಂಧಿವಿಗ್ರಹಿ ಅರಿದಾಸಯ್ಯ ಎಂಬುವವನ ಹೆಸರು ಉಲ್ಲೇಖವಾಗಿದೆ.[22] ತುಂಬಿಗೆರಯ ಕ್ರಿ.ಶ. ೧೦೪೦ರ ಶಾಸನದಲ್ಲಿ ವೆರ್ಗ್ಗಡೆ ಚನ್ದಿಮಯ್ಯ ನಾಯಕನು ದೊರೆಗೆ ಬಿನ್ನಹ ಮಾಡಿ ಆಲೂರಿನ ಮೂಲಸ್ಥಾನದೇವರಿಗೆ ಭೂದಾನ ಮಾಡುತ್ತಾನೆ.[23] ಬದನೆ ಹಾಳು ಕ್ರಿ.ಶ. ೧೦೫೫ ರ ಶಾಸನದಲ್ಲಿ ಪೆರ್ಗ್ಗಡೆ ವೀರರಾಕ್ಷಸ ಹಿರಾಯನ ಎಂಬುವವನು ಕವತಾಳು ಪನ್ನೆರಡರ ಬಳಿಯ ನೇಱುಲ ಬದಲಪಾಳದಲ್ಲಿದ್ದ ಧರ್ಮ್ಮೋತದ ಬಾವಿಗೆ ದಾನ ಕೊಟ್ಟ ಉಲ್ಲೇಖವಿದೆ.[24] ಕ್ರಿ.ಶ.ಸು. ೯೨೦ರಲ್ಲಿ ಅಣ್ಡಿಗನು ಬಿಲ್ಲಕೊತ್ತಮಂಗಲ ಆಳುತ್ತಿರುವಾಗ ಪೆರ್ಗ್ಗಡೆ ಬೆಣಯ್ಯಂನು ಗಂಗರ ಆನೆಯ ಕುಂಮ್ಬ ಸ್ಥಳಕ್ಕೆ ಕುದುರೆಯಿಂಪಾಯಿಸಿ ಸತ್ತದ್ದಕ್ಕೆ ಕಲ್ನಾಡು ಕೊಟ್ಟ.[25] ಕುಡ್ಕೊಜಿ ಗ್ರಾಮದ ಕ್ರಿ.ಶ. ೧೦೬೮ರ ಈ ಶಾಸನದಲ್ಲಿ ಮಹಾಸಾಹಾಣಿ ಎಂದು ಬಲ್ಲರಸನನ್ನು ಕರೆದಿದೆ.[26] ಹುಲೇಗುಂದಿಯ ಕ್ರಿ.ಶ. ೧೦೭೩ರಲ್ಲಿ ಮಹಾಸಾಮಂತ ಕೆರೆಯೂರ ಮಂಗಿಯೇಚಯ್ಯ

ಸೂಳ್ಗಲ್ಲೆಪ್ಪತ್ತುನ್ನು ಆಳುತ್ತಿದ್ದುದನ್ನು ಹೇಳಿದೆ.[27]

ಗಾವುಂಡರು

ಗಾಮುಂಡರು ಸ್ಥಳೀಯ ಅಧಿಕಾರಿಗಳು. ಇವರ ಅಧಿಕಾರ ವಂಶಪಾರಂಪರ್ಯ ವೃತ್ತಿಯಾಗಿರುತ್ತಿತ್ತು. ಊರಿನಲ್ಲಿ ತಮ್ಮ ಹೊಲಗದ್ದೆಗಳ ಕೆಲಸದ ಜೊತೆಗೆ ಊರಿನ ಆಗುಹೋಗಿಗಳನ್ನು ನಿಯಂತ್ರಿಸುತ್ತಿದ್ದವರು. ಊರಳಿವು ಪೆಂಡಿರುಡೆಯುರ್ಚು, ತುರುಗಾಳೆಗ ಮುಂತಾದವು ನಡೆದಾಗ ಮುನ್ನುಗ್ಗಿ ಹೋರಾಡುತ್ತಿದ್ದವರು ಇವರೇ ಆಗಿದ್ದರು. ಕೆಲವು ಶಾಸನಗಳಲ್ಲಿ ಪೆರ್ಗ್ಗಡೆ, ಗಾವುಂಡರು ನೊಳಂಬ ದೊಡ್ಡ, ಪಾರ್ವರು ಮುಂತಾದವರು ಸೇರಿ ದಾನ ಮಾಡಿದ ಊಲ್ಲೇಖ ಬರುತ್ತದೆ. ಕಂಬದೂರಿನ ಕ್ರಿ.ಶ. ೮೮೩ರ ಶಾಸನದಲ್ಲಿ ಸರ್ವಾಧಿಕಾರಿ ಪೆರ್ಗ್ಗಡೆ, ಕುರುಗಾಮುಂಡ, ದಂಡಿಗಾವುಂಡ, ನೊಳಂಬ ಗಾವುಂಡ, ನೊಳಂಬ ದೊಡ್ಡ, ಗಾಮುಂಡಸಾಮಿ, ಹೆಸರುಗಳು ಬಂದಿವೆ. ಗಾವುಂಡರು ಎಂದರೆ ಆ ಊರಿನ ಮುಖ್ಯಸ್ಥರನ್ನು ಗೌಡರೆಂದು ಕರೆಯುತ್ತಿದ್ದಿರಬೇಕು. ಇವರು ದಾನ ನೀಡುವ ಅಥವಾ ಸ್ವೀಕರಿಸುವ ಸಮಯದಲ್ಲಿರುತ್ತಿದ್ದು, ಊರಿನ ಆಗು ಹೋಗುಗಳನ್ನು ಗಮನಿಸುತ್ತಿದ್ದರು. ಬೆಳ್ದುಗೊಂಡೆಯ ಗೌಡರುಗಳು ಸೇರಿ ಒಂದು ಕೊಲಿಮೆಗೆ ಭೂದಾನ ಕೊಟ್ಟ ಉಲ್ಲೇಖವಿದೆ.[28] ನಂಬಿಹಳ್ಳಿಯ ಎರೆಯಗಾವುಂಡನೆಂಬುವವನು ತುರುಗಾಳೆಗದಲ್ಲಿ[29] ಮತ್ತು ಬಲ್ಲಗ್ರಾಮದ ನೋಲಂಬ ಗಾವುಂಡ ಬಲ್ಲದ ಎಂಬುವವನು ಊರಳಿವಿನಲ್ಲಿ ಸತ್ತದ್ದನ್ನು ಉಲ್ಲೇಖಿಸುತ್ತದೆ.[30] ಹೇಮಾವತಿಯ ಕ್ರಿ.ಶ. ೯೪೨ ರ ಶಾಸನದಲ್ಲಿ ಪೆಂಚೇರುವಿನ ನೊಳಂಬ ಗಾವುಂಡ, ಕಲಿನೊಳಂಬ ಗಾವುಂಡ ಸೀಯುವುರದ ಮಾಂಗಿ ಗಾವುಂಡ ಮಾಧವ ಗಾವುಂಡರ ಹೆಸರುಗಳು ಬರುತ್ತದೆ.[31] ಯೆಲ್ದೂರಿನ ಶಾಸನದಲ್ಲಿ ಮಜ್ಗ ಸಿಜ್ಗ ಪರಾಕ್ರಮನ ಮಗ ತಿರವೆಜ್ಗಡಯ ತುರುಗಾಳೆಗದಲ್ಲಿ ಸತ್ತ. ಪೃತಿವೀಗಮ್ಮುಂಡಸ್ವಾಮಿಯ ಮಗ, ಗಾಮುಂಡ ಸ್ವಾಮಿಯ ಬಾಮಯ್ಯದೇವರಿಗೆ ದಾನ ಕೊಟ್ಟ[32] ಎಂಬುದನ್ನು ತಿಳಿಸುತ್ತದೆ. ಮಡಿವಳ ಗ್ರಾಮದ ಸು. ೯೬೮ ರಲ್ಲಿ ಇರಿವ ನೊಳಂಬನ ಕಾಲದಲ್ಲಿ ಕೆಸಂಬಲದ ಬಾಸಕ್ಕಮೆಂಡಿ ಗಾವುಂಡ ತುರುಗಾಳೆಗದಲ್ಲಿ ಸತ್ತನೆಂದು ತಿಳಿಸುತ್ತದೆ.[33]

ನಿಟ್ಟೂರಿನ ಕ್ರಿ.ಶ. ೧೦೩೪ ರ ಶಾಸನದಲ್ಲಿ ಗಾವುಂಡ ಬಲಯ್ಯ ಎಂಬುವವನು ಕದಂಬಳಿಗೆ ಸಾಯಿರದ ಬಳಿಯ ಕಂಡಣಕುನ್ದುರೆಪ್ಪತರೊಳಗಣ ಕುನ್ದೂರು ಬನ್ನಿಕೋಡು ಹಪ್ಪವನ ಹಾಳು ನಿಟ್ಟೂರನ್ನು ಅಳುತ್ತಿದ್ದುದನ್ನು ಹೇಳುತ್ತದೆ. ಬಹುಶಃ ಇವನು ಪ್ರಭಾವಶಾಲಿಯಾದ ಗಾವುಂಡ ನಿದ್ದಿರಬೇಕು.[34] ಮಾನ್ಯರ ಮಸಲವಾಡದ ಕ್ರಿ.ಶ. ೧೦೩೬ ರ ಶಾಸನದಲ್ಲಿ ಪನ್ನೆರಡರ ಮನ್ನೆಯ ಅಯ್ಯಣ ಭೀವಜೋಗರಸ, ಮಾರಗಾವುಂಡ, ರಾಚಮ್ಮ ಗಾವುಂಡ, ಬೋಗಯ್ಯಯ್ಯ, ಸಹಾದೇವಯ್ಯ ಇವರು ಕಲಿದೇವರ ಸೇವಾಕಾರ್ಯಕ್ಕೆ ಭೂದಾನ ಕೊಟ್ಟರು.[35] ಅವರಗೆರೆಯ ಕ್ರಿ.ಶ. ೧೦೪೨ರಲ್ಲಿ

ಚಳಕಿ ಅಯ್ಯ ಹರಸಂನಾಳ್ಗಾವುಂಡನು, ಇಂದರಗಾವುಂಡನ ಮಗ ಬಮ್ಮಿಸೆಟ್ಟಿಗೆ ದಾನ ಕೊಟ್ಟರು.[36] ಕಮ್ಮರಚೇಡುವಿನ ಕ್ರಿ.ಶ. ೧೦೫೪ ರಲ್ಲಿ ಮಹಾಮಂಡಳೇಶ್ವರ ವೀರನೊಳಂಬ ಘಟ್ಟದೇವನು ಸಿಂದವಾಡಿಯನ್ನು ಆಳುತ್ತಿರುವಾಗ, ಕಮ್ಮಾರಚೇಡುವಿನ ಚಟ್ಟಗಾವುಂಡ, ಪಿರಿಯನಾಮ ಗಾವುಂಡ, ಮಾಚಿ ಗಾವುಂಡ, ಆಚಗಾವುಂಡ, ಚಾಮಣ್ಣ ಗಾವುಂಡ, ತೆಕ್ಕಲಗಾವುಂಡ, ರುದ್ರಮಾರ ಚಿಕ್ಕಗಾವುಂಡ, ಕೇತಗಾವುಂಡ ಕಂಪಿಲಿಯ ಮೂಲಸ್ಥಾನದೇವರಿಗೆ ದಾನ ಕೊಟ್ಟರು.[37]

## ಯತಿಗಳು

ಪ್ರಾಚೀನ ಕರ್ನಾಟಕದಲ್ಲಿ ಕಾಳಾಮುಖ ಯತಿಗಳು ತಾವು ನಿರ್ಮಿಸಿದ ದೇವಾಲಯದಲ್ಲಿಯೆ ವಾಸಿಸುತ್ತಿದ್ದು ಅಲ್ಲಿ ಅನೇಕ ಸಾಮಾಜಿಕ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಬಹುತೇಕ ಈ ಯತಿಗಳು ಶೈವರಾಗಿದ್ದು ಅಲ್ಲಿನ ದೇವಾಲಯದ ಸ್ಥಾನಿಕರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು. ಇವರಿಗೂ ಮಹಾಜನರಿಗಿರುತ್ತಿದ್ದ ಸ್ಥಾನ-ಮಾನಗಳೇ ಇರುತ್ತಿತ್ತು. ಈ ಯತಿಗಳನ್ನು ಅನೇಕ ಶಾಸನಗಳು ವಿಶೇಷವಾಗಿ ವರ್ಣಿಸಿವೆ. ಇವರನ್ನು ಶಾಸನಗಳಲ್ಲಿ ಸ್ಥಾನದ ಆಚಾರ್ಯರೆಂದೂ, ಯತಿಗಳೆಂದೂ, ಗುರುಗಳೆಂದೂ ಕರೆಯಲಾಗಿದೆ. ಮಹಾಜನರು ಇಲ್ಲದಿದ್ದ ಗ್ರಾಮಗಳಲ್ಲಿ ಈ ಯತಿಗಳು ಪ್ರಮುಖ ಪಾತ್ರವಹಿಸುತ್ತಿದ್ದರು. ಇವರು ಸ್ಥಾನಿಕರಾಗಿದ್ದ ಗ್ರಾಮದಲ್ಲಿನ ದೇವಾಲಯಗಳ ಆಗುಹೋಗುಗಳನ್ನು ನೋಡಿಕೊಳ್ಳುವುದು ಮತ್ತು ಅವುಗಳ ನಿರ್ವಹಣೆಯ ಕಾರ್ಯ ಮಾಡುವುದು ಇವರ ಕರ್ತವ್ಯವಾಗಿತ್ತು.

ಈ ಯತಿಗಳು ಇದ್ದ ದೇವಾಲಯಗಳಲ್ಲಿ ಮಠಗಳೂ ಇರುತ್ತಿದ್ದವು. ಬಹುತೇಕವಾಗಿ ಈ ಮಠಗಳು ಬ್ರಹ್ಮಚಾರಿ ಮಠಗಳಾಗಿರುತ್ತಿದ್ದವು. ಅಂತಹ ಒಂದು ಮಠದ ಬಗ್ಗೆ ಶಾಸನದಲ್ಲಿ '... ಪ್ರತಿಪಾಳಿಪ ಸ್ಥಿತಿ ಬ್ರಹ್ಮಚಾರಿಯಪ್ಪುದು. ಬ್ರಹ್ಮಚಾರಿಯಲ್ಲದಾಹ್ವ ಮಠಪತಿಯು ಮಾತನಾಳಿಸಿದರಸರುಂ ನಾಡು ಮೂರು ಕೊತ್ತಜಿಯುಮಯ್ದುಂ ಪಾತಕಙ್ಗಳ ಫಲಮನೆಯ್ದುವರ್' ಎಂದು ಹೇಳಿದೆ.[38] ಇಂತಹ ಉದಾಹರಣೆಗಳಿಂದ ಇಲ್ಲಿ ಯತಿಯಾಗಿದ್ದವನು ಬ್ರಹ್ಮಚಾರಿಯಾಗಿರಬೇಕೆಂಬ ನಿಬಂಧನೆ ಹಾಕಿರುವುದಲ್ಲದೆ ಈ ಮೂಲಕ ಮಠದ ಪರಂಪರೆಯು ಬ್ರಹ್ಮಚಾರಿ ಮಠವೆಂಬುದನ್ನು ಧ್ವನಿಸುತ್ತದೆ.

ಹೀಗೆ ನೊಳಂಬರ ಕಾಲದಲ್ಲಿಯ ನೀತಿ ನಿಯಮಗಳು ಕರ್ನಾಟಕದ ಇತರೆ ಭಾಗಗಳಿಗಿಂತ ಭಿನ್ನವಾಗಿರಲಿಲ್ಲವೆಂದು ತಿಳಿಯುತ್ತದೆ. ಪ್ರಸ್ತುತ ನೊಳಂಬರ ಶಾಸನಗಳಲ್ಲಿ ಶಕ್ತಿಪಂಡಿತ, ದೇವ, ಮುನಿ, ಭಟಾರ ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ಒಂದನೆಯ ಮಹೇಂದ್ರನ ಕಾಲದಲ್ಲಿಯೇ ಸೋಮಭಟಾರನ ಉಲ್ಲೇಖ ಬಂದಿದೆ. ಆತ ಬರಗೂರಿನಲ್ಲಿದ್ದಂತೆ ತಿಳಿಯುತ್ತದೆ.[39] ಹಿರೇಹಡಗಲಿಯ ಕ್ರಿಶ ೮೪೯ರ ಮಹೇಂದ್ರನ ಕಾಲದ ಈ ಶಾಸನದಲ್ಲಿ ಯತಿಯ ಸಂತಾನವಲ್ಲದೆ ಬೇರೆಯವರು ಈ

ಸ್ಥಾನದ ಧರ್ಮವನ್ನು ಆಚರಿಸಬಾರದೆಂದು ಸ್ಪಷ್ಟವಾಗಿ ಹೇಳಿರುವ ಒಂದು ಅಪರೂಪದ ಶಾಸನ.

ಪೆಱಗ್ಗುಂ ಸಲ್ಲದೀ ಸ್ಥಾನದಲು ಪುಟ್ಟಿದ ಸೋಮಸಂಭು
ತಪೋಧನರ ಸತಾನಮಲ್ಲದೆ ಪೆಱಗ್ಗಿರಸಲಿ ಈ ಧರ್ಮ
ವನಗ್ರಹಾರಂ ಸರ್ವಭಾದಾ ಪರಿಹಾರವಾಗಿ ರಕ್ಷಿಸುವರು[40]

ಒಂದನೆಯ ಮಹೇಂದ್ರನ ಕಾಲದಲ್ಲಿ ದೇವಾಲಯವನ್ನು ಕಟ್ಟಿಸಿ ಅಲ್ಲಿಯ ಭೈರವಶಕ್ತಿ ಭಟಾರರ ಕಾಲನ್ನು ತೊಳೆದು ಭೂದಾನ ಮಾಡಿದ ಉಲ್ಲೇಖವಿದೆ.[41] ಮಹೇಂದ್ರನ ಇನ್ನೊಂದು ಶಾಸನದಲ್ಲಿ ವಿದ್ಯಾರಾಶೀಂದ್ರನ ಹೊಗಳಿಕೆ ಬಂದಿದೆ. ಇಡೀ ಶಾಸನ ಪದ್ಯಮಯವಾಗಿದ್ದು ಅವನನ್ನು ವರ್ಣಿಸುವುದೇ ಈ ಶಾಸನದ ಗುರಿಯಾಗಿದೆ.

ಕಲಿಚೋರೇಶ್ವರ ಪಲ್ಲವೇಶ್ವರ ಮಹಾಭೋಗೇಶ್ವರೊತ್ತುಂಗ ನಿ
ರ್ಮ್ಮಲ ನನ್ನೇಶ್ವರ ಕೀರ್ತ್ತಿ ಶಾಸನಲಸತ್ಕಾಞ್ಚೀ ಭುಜಂಗೇಶ್ವರ
ವಲಿ ಕಣ್ಡೀರವ ಕೂಪ ನನ್ದನವನ ಪ್ರಾಕಾರನಂ ಸ್ಥಾನದಿ
ನ್ನೆಲ್ಲ ಕೆಲ್ಲಂ ಪಡಿ ಚಂದಮಾಯ್ತು ತಗಡೂರೀವಿದ್ದೆರಾಶೀನ್ದ್ರರೀಂ ॥ ೧ ॥

ಅಕ್ಕರಗಂಗ ಬೇಡಿದ ನರಂಗೆ ತಪಸ್ವಿಗೆ ದೇಸಿಗಂಗೆ ಕ
ಟ್ಟಕ್ಕಲಿಗಂಗ ದೀನ ನಟಪಾಠಕವನ್ದ ಜನಕ್ಕೆ ರಾಗದಿ
ನ್ನ ಕೊಡೆ ನಿನ್ದು ನೋಡಿದೊಡೆ ಮೆಚ್ಚಿದೊಡೋ ತೊಡೆಕೂರ್ತ್ತುಡೀಗಳು
ಬ್ಬುಕ ಡಲ್ ವೆನೆಂಬುದಿದು ವೀವಗುಣಂ ಸಲೆವಿದ್ದರಾಶಿಯ ॥ ೨ ॥

ಗುರುಗಳ್ರುದ್ರ ಬೊಜಂಗರಾ ಗುರುಗೃಹನ್ತುಂಬೇಶ್ವರರನ್ತದ್ಬುಜಂ
ಗರ ಶಿಷ್ಯರ್ವ್ವರಲಾಕುಳಾಗಮಿಕ ವಿದ್ಯಾರಾಶಿಗಳ್ಪಾಸ ನಂ ॥

ಶಿವ ಪೂಜೆಯೊಳೊಂದು ಸದಾ
ಶಿವ ಯೋಗದೊಳ್ದೊಂದು ರೂಪ ಮಳ್ದಿ
ರೆವಾರಾಶಿವ್ರತಧರೆಗೆ ವಿದ್ಯ
ರಾಶಿಶಿವಜ್ಞಾನಕರ್ಮ್ಮ ನಿರ್ಮ್ಮತರಾದರ್ ॥ ೪ ॥[42]

ಅಯ್ಯಪದೇವನ ಕಾಲದಲ್ಲಿ ಪೆರ್ಬಟ ಗ್ರಾಮವನ್ನು ಭಾವಶಿವನು ತಪೋರಾಜ್ಯವನ್ನಾಗಿ ಮಾಡಿಕೊಂಡಿದ್ದಂತೆ ಈಗಿನ ಹೆಬಟ ಗ್ರಾಮದ ಶಾಸನದಿಂದ ತಿಳಿಯುತ್ತದೆ.[43] ಗುಣಿಮೊರು ಬಾಗಲಿನ ಕ್ರಿ.ಶ. ೯೩೬ರ ಶಾಸನದಲ್ಲಿ ಬೀರನೊಳಂಬ ಅಣ್ಣಿಗನ ಕಾಲದಲ್ಲಿ ವರುಣಶಿವ ಭಟಾರನು ನೊಳಂಬೇಶ್ವರದ ಸ್ಥಾನವನ್ನು ಆಳುತ್ತಿದ್ದಂತೆ ಹೇಳಿದೆ. ಈತನನ್ನು ಶಾಸನದಲ್ಲಿ 'ಸ್ವಸ್ತಿ ಸಮಧಿಗತ ಮಹಾಶಬ್ದ ಮಹಾಸಾಮಂತಾಧಿಪತ್ಯ ಪರಮೇಶ್ವರ ಪರಮಭಟ್ಟಾರಕಂ ಜಪ ನಿಯಮ ತಪೋಪವಾಸ ಸತ್ಯಶೌಚಾಚಾರನ್ವಿತರ ತಪೋವನಾನುರಾಗ ಶ್ರೀಮತು ಪಱುವಾಳ ಬಾಳಗ್ರಾಮ ಮಾನ್ಯಾದ ಶಿವಸತ್ರಾನು ರಂಜಿತ ಭಗವತ್ಪಾದೈಕಾಭರಣ ಶ್ರೀಮತು ವರುಣ ಶಿವಬಟಾರರ್' ಎಂದು ಕರೆದಿದೆ. ಈತನ

ಸನ್ನಿಧಿಯಲ್ಲಿ ಊರಿನ ಮಹಾಜನರು ಕೆರೆಗಳಿಗೆ ಬಿತ್ತು ವಟ್ಟವ ಕೊಟ್ಟಿರುತ್ತಾರೆ.

ಮಡಕಶಿರಾ ತಾಲೂಕಿನ ಕ್ರಿ.ಶ. ೯೪೩ ರ ಶಾಸನದಲ್ಲಿ ಇರಿವ ನೊಳಂಬನೇಕವಾಕ್ಯ ದಿಲೀಪರಸನು ಆಳುತ್ತಿರುವಾಗ ನನ್ನೇಶ್ವರ ದೇವರಿಗೆ ಬಾಣಗೆರೆಯ ಪಿರಿಯ ಕೆರೆಗೆ ವಕ್ಕಾಣಿಭಟಾರರ ಶಿಷ್ಯ ಚಿಲುಕಭಟಾರರ ಕಾಲನ್ನು ತೊಳೆದು ಕೀೞ್ಕೆರೆ-೩೦೦ ಗಂಡುಗ ರಾಜಮಾನವ ಕೊಟ್ಟ ಉಲ್ಲೇಖವಿದೆ. ಚಿಲುಕ ಭಟಾರರನ್ನು ಶಾಸನವು ಹೀಗೆ ವರ್ಣಿಸಿದೆ.

ಹರನರಸಂ ಸುರರ್ನ್ನೆ ದಂಗುಣ್ಡು ಜಟಾವಳಿ ತೊಂಗಲಿನ್ದ್ರದು
ರ್ದ್ದರಗಿರಿಸೇತು ಧರ್ಮಗಜೆಯಂಕದ ಮದ್ದಳೆ ಧೂಮವೇಳೆವಿ
ಸ್ಫುರಿತ ಸಿವಾಗಮಂ ಸುರಿಗೆಯಾಗಿರೆ ಪಾಪವನೆತ್ತಿ ಕುತ್ತಿ ನಿ
ಷ್ಠುರ ಮಿೞೆದಿನ್ತು ಕೊನ್ದ ತಪದಂಕ ಮಿದೀತಪದಂಕಕಾರನ ॥

ಲಕುಳೀಶೋ ನಿಜನಾವ್ನೋವಿಸ್ಪರಣಾ ಶಂಕಯೇವಧರ್ಮಾಣಾಂ ।
ಪುನರಪ್ಯವತೀರ್ಣ್ನ ಭುವಿಮುನಾಥ ಶ್ಚಿಲ್ಲು ಕೋಜಾತಃ।

ಇಲ್ಲಿ ಲಕುಲೀಶನೇ ಇವನು ಎಂಬಂತೆ ಶಾಸನದಲ್ಲಿ ಹೇಳಲಾಗಿದೆ.

ಬಲ್ಲಪುರದ ಕ್ರಿ.ಶ.ಸು ೯೫೦ ರ ಶಾಸನದಲ್ಲಿ ಇರಿವ ನೊಳಂಬನ ಕಾಲದಲ್ಲಿ ಪಿರಿಯ ಮೆಟಿಪಿಯಲ್ಲಿ ಬಾಳಶೋಮ ಭಟಾರರು ಇದ್ದಂತೆಯೂ ಅವರಿಗೆ ಸಿದ್ದಾಯವನ್ನು ಬಿಟ್ಟಂತೆಯೂ ಶಾಸನ ತಿಳಿಸುತ್ತದೆ.[44] ಮುಂದೆ ಇದೇ ರಾಜನ ಶೃಂಗೇರಿ ಸದುಮನಹಳ್ಳಿ, ಬಲ್ಲ, ಆವನಿ, ಮುಂತಾದ ಕಡೆಯಲ್ಲಿನ ಶಾಸನಗಳಲ್ಲಿ ತ್ರಿಭುವನ ಪಂಡಿತ ಭಟಾರನು ಆವಣ್ಯದ ಸ್ಥಾನವನ್ನು ಆಳುತ್ತಿದ್ದಂತೆ ತಿಳಿಯುತ್ತದೆ.[45] ಆದರೆ ಈ ಎಲ್ಲಾ ಶಾಸನಗಳಲ್ಲಿ ತುರುಗಾಳೆಗ ನಡೆದ ಊಲ್ಲೇಖ ಬಂದಿದೆ. ಬಲ್ಲಗ್ರಾಮದಲ್ಲಿ ಎಮ್ಮೆಯ ತುರುಗಾಳೆಗದಲ್ಲಿ ಆನೇಕರು ಸತ್ತಂತೆಯೂ ಹೇಳಿದೆ. ಮತ್ತೊಂದರಲ್ಲಿ ಆವನ್ಯಸ್ಥಾನದ ಪುರಪರಮೇಶ್ವರ ತ್ರಿಭುವನ ಕರ್ತಾರ ಪಂಡಿತನು [ತಪೋ]ರಾಜ್ಯಂಗೆಯ್ಯುತ್ತಿರೆ ಎಂದಿರುವುದರಿಂದ ಈ ತ್ರಿಭುವನಕರ್ತಾರನು ರಾಜನಿಗೆ ಸಲ್ಲಬಹುದಾದ ಬಿರುದುಗಳನ್ನು ಧರಿಸಿರುವುದು ಇವನ ಹೆಚ್ಚುಗಾರಿಕೆಯುನ್ನು ತಿಳಿಸುತ್ತದೆ. ಈತನು ಗಂಗವಾಡಿ-೯೬೦೦೦, ಬಾಣರವಾಡಿಯ ಪನ್ನೀರ್ಚಾಸಿರದ ವ್ಯಾಪಾರಿಗಳಿಗೆಲ್ಲಾ ಬೇಕಾದವನಾಗಿದ್ದ. ಈ ತ್ರಿಭುವನ ಕರ್ತಾಭಟರನು ರಾಜ್ಯವಾಳುತ್ತಿರಬೇಕಾದರೆ ಅವನ ಸಾತ್ವಿಕ ಗುಣವನ್ನು ದುರುಪಯೋಗ ಪಡಿಸಿಕೊಂಡು ತುರುಗಾಳೆಗಗಳು ನಡೆದಿರಬಹುದು ಅಥವಾ ಚೋಳರ, ಗಂಗರ ಧಾಳಿಗಳು ನೊಳಂಬರ ಮೇಲೆ ಪದೇಪದೇ ನಡೆಯುತ್ತಿದ್ದುದರಿಂದ ರಾಜ್ಯದಲ್ಲಿ ಸ್ಥಿರತೆಯಿಲ್ಲದೆ ಇದ್ದದ್ದು ತುರುಗಾಳೆಗಗಳಿಗೆ ಅವಕಾಶವಾಗಿರಬಹುದು.

ಈ ತ್ರಿಭುವನ ಕರ್ತಾರದೇವನು ದಿಲೀಪನ ಕಾಲದಿಂದ ಇಮ್ಮಡಿ ಮಹೇಂದ್ರನ ಕಾಲದವರೆಗೆ ಅಂದರೆ ೪-೫ ದಶಕಗಳು ಆವನ್ಯದಸ್ಥಾನವನ್ನು ಆಳಿದಂತೆ ತಿಳಿಯುತ್ತದೆ. ಈ

ಅವಧಿಯಲ್ಲಿ ಇವನು ಎರಡು ದೊಡ್ಡ ಕೆರೆಗಳನ್ನು ೩೦ ದೇವಾಲಯಗಳನ್ನು ಕಟ್ಟಿಸಿದಂತೆಯೂ ಕಲಿಯುಗ ರುದ್ರನೆಂದು ಪ್ರಸಿದ್ಧನಾಗಿದ್ದನೆಂದು ಶಾಸನಗಳು ಉಲ್ಲೇಖಿಸುತ್ತವೆ.[46] ಇವನು ಸತ್ತಾಗ ಇವನ ಶಿಷ್ಯ ಇವನ ನನೆಪಿನಲ್ಲಿ ದೇವಾಲಯವೊಂದನ್ನು ಆವನಿಯಲ್ಲಿ ಕಟ್ಟಿಸಿದಂತೆ ಶಾಸನ ಉಲ್ಲೇಖಿಸಿದೆ.

ನೊಳಂಬ ಅರಸನ ಕಾಲದಲ್ಲಿ ಪುಸುಗೂರನ್ನು ಬ್ರಹ್ಮಶಿವಭಟಾರನೆಂಬ ಯತಿ ಆಳುತ್ತಿದ್ದಂತೆ ಶಾಸನವೊಂದು ಹೇಳುತ್ತದೆ.[47] ಮರೋಳ್ ಗ್ರಾಮದ ಕ್ರಿ.ಶ. ೧೦೨೪ ರ ಶಾಸನದಲ್ಲಿ ಘಟೆಯಂಕಕಾರನು ಆಳುತ್ತಿಗುವಾಗ ಕಮಳದೇವ ಭಟ್ಟಾರಕನನ್ನು 'ಎಸೆವೈತ್ರೈ ಕಾಲ್ಲ್ಯಯೋಗಂ ತಮಗಮರಪಾದದಯ್ದುವು ಮೆರಡುಂ ಸೋಭಿಸೆ ಮೂಱುಂಗುಯುಂ ವೇರ್ವ್ವಡೆ ಸಮತಿಗಳಯ್ದುಂ ಸುಮಂ ನಿನ್ದಿರಾರಾರಾಜಸೆ ಪತ್ರಂ ವಿಂಶದ್ಗುದಿನ್ತ ಪೆಸಕಂ ತ್ರೈಗರ್ಮ್ಮಿಸನ್ದರ್ತಪಾದ ಮಹಿಮೆಯಿಂ ಶ್ರೀಮಿಮುಕ್ತವ್ರತೀನ್ದರ್ [ಮಹೀ]ಯನ್ತು ಭಾಗ ... ನೆಯ ನರಂ ಬ್ರಹ್ಮಚರ್ಯ್ಯ ವ್ರತಂ ಬಂದಿಸುಂ ಸಿದ್ಧಾನ್ತದೇವನಾಸಂ ಮಂದಿಗ ಕಲಾಚತುರ ತ್ರೈವಿದ್ಯ ಪ್ರಸಭಂ ವ್ಯಾವೃತ್ತ ... ನ್ಮತಿಗಥಾ ... ಱೆನ್ದಾ ... ದೇವ ಸ್ಥಾನಂಗಳ ವನಿವಳ ಕಲಿಮಾತ್ಸರ್ಯಮುಂಟೆ ನಿಯಮಾಚಾರ ವಿಚಾರ ಸಾರಗುಣಭಾರ ಜ್ಞಾನ ಸಂಸಾರ ನಿರ್ಣ್ನಯ ನಿರ್ವ್ಯಕ್ತಿನುಯೋಗ ನಿರ್ಮ್ಮಾಣ ಚಿತ್ರಮಾರ್ಯ್ಯಾ... ಮಯಿಂತಾಱ್ದಿದತಿ ... ವೆನಿಸುತಲೀ ಅಣ್ಣೆಯ ಭಟ್ಟಾರಕರನ್ನವಲ್ಲಿ ಮುನಿಪರ್ವ್ವಿಶ್ವಮ್ಬರಾಭಾದೊಳ್ ॥ ಸಂತತ . ಪರ್ಣ್ನವತ್ಸಳ ವಂಶೋನ್ನತಿಂಯೊಳ್ ಜಿನ ವಕ್ತ್ರನಿರ್ಗತ ಪಾತ್ರಕಳಾ ಪ್ರಪೂರ್ಣ್ನಮಂರ್ಮೆಯಿಂ ಸುಜನೋದ್ಭಾಟರಿಷ್ಟ ... ವಿಂಶ್ವದ್ಭವ ... ರಿನ್ದು ಚನ್ದ್ರಂ ಪ್ರಭಾಚನ್ದ್ರ ಮುನೀನ್ದರುಂ ಪೊಗಳುತಿರ್ಪ್ಪುದು ವಾಗ್ವಿದೆರೀ . ಭೋತಳಂ ॥ ಸಕಳ ವ್ಯಾಕರಣಂ ನಿಘಂಟು ಗಣಿತಂ ವಾತ್ಸ್ಯಾಯನಂ, ಜ್ಯೋತಿಶಂ ಶಕುನಂ ಛನ್ದಮನುವು ಗಾಂಧರಮಳಂಕಾರಂ ಮಹಾಕಾವ್ಯನಾಟಿಕ ಮಧ್ಯಾತ್ಮಿಕ ಮರ್ತ್ಥ ಶಾಸ್ತ್ರತತಿ ಸಿದ್ಧಾನ್ತ ಪ್ರಮಾಣಂಗಳೆಂಬ ಕಳಾವಿದ್ಯೆಗನನ್ತವೀರ್ಯ್ಯ ಮುನಿಪರ್ಸ್ಸರ್ವ್ವಮೀ ಬ್ರಹ್ಮಾಣ್ಡ ... ನಹಿಪನೆ ಪೇಳೆ ಯೀ ಬೀಳ ... ನೀಳ್ದುಂ ಪಾಂ ... ಕೀರ್ತ್ತಿದೇವ ಮುನಿಪತಿಯ ... ಎಂದು ಉಲ್ಲೇಖಿಸಿದೆ.[48]

ದೊಮ್ಮೂರು ಕಗ್ಗಲ್ಲು ಗ್ರಾಮದ ಕ್ರಿ.ಶ.೧೦೩೩ ರ ಶಾಸನದಲ್ಲಿ ಉತ್ತಮರಾಶಿಪಂಡಿತನಿಗೆ ಉದಯಾದಿತ್ಯಯ್ಯ ಎಂಬುವವನು ಭೂದಾನ ಮಾಡಿದ್ದನು ತಿಳಿಸುತ್ತದೆ.[49] ಇನ್ನೊಂದು ಶಾಸನದಲ್ಲಿ ತ್ರೈಳೋಕ್ಯಮಲ್ಲ ನೊಳಂಬನ ಕಾಲದಲ್ಲಿ ಚಾಳುಕ್ಯಮಲ್ಲದೇವನ ಪತ್ನಿ ಮೈಳಲದೇವಿ ಹೊನ್ನವಾಡಿಯಲ್ಲಿ ಯಮನಿಯಮ ಮಾನಸ ಪ್ರಾಣಾಯಾಮ ಪ್ರತ್ಯಾಹಾರ ದ್ಯಾನಧಾರಣ ಜಪ ಸಮಾಧಿ ಸಂಪನ್ನರಪ್ಪ ಪಾಶುಪಥಯೋಗಾಚಾರ್ಯ ಜ್ಞಾನರಾಶಿ ವ್ಯಾಖ್ಯಾನದೇವರಿಗೆ ಆ ಊರಿನ ದೇವಾಲಯದ ಆಗುಹೋಗುಗಳಿಗೆ ಭೂದಾನ ನೀಡಿದ ಉಲ್ಲೇಖವಿದೆ. ಈ ಶಾಸನದಲ್ಲಿ ಜ್ಞಾನರಾಸಿಯು ಪಾಶುಪಥಯೋಗವನ್ನು ಆಚರಿಸುತ್ತಿದ್ದಂತೆ ಹೇಳಿದೆ.

ಮೊಸಳೆ ಮಡುವಿನ ಕ್ರಿ.ಶ. ೧೦೩೬ ರ ಶಾಸನದಲ್ಲಿ ಗುರುದೇವನ ಉಲ್ಲೇಖ ಬಂದಿದ್ದು ಆತನನ್ನು 'ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಪಾರಾಯಣ ಷಡಂಗೋಪಾಹಾರಾದಿ ಸಂಪನ್ನರಪ್ಪ ಶ್ರೀಮತ್ ಗುರುದೇವರ್' ಎಂದು ಕರೆಯಲಾಗಿದೆ.[50] ಕಮ್ಮರಚೇಡು ಗ್ರಾಮದ ಕ್ರಿ.ಶ. ೧೦೫೪ರ ಶಾಸನದಲ್ಲಿ ಇದೇ ಗ್ರಾಮದ ಕೆಲವು ಗಾವುಂಡಗಳು ಆ ದೇವಾಲಯಕ್ಕೆ ದಾನ ನೀಡಿದಾಗ ಮಠದ ಆಚಾರ್ಯ ಬ್ರಹ್ಮೇಶ್ವರ ಜೀಯರನ್ನು ಉಲ್ಲೇಖಿಸುತ್ತದೆ.[51] ಹಿರೇಮ್ಯಾಗಳಗೇರಿಯ ಕ್ರಿ.ಶ. ೧೦೫೪ ರ ಶಾಸನದಲ್ಲಿ ಆ ಊರಿನ ದೇವಾಲಯದ ಸ್ಥಾನಪತಿಯಾದ ಚಂದ್ರಭೂಷಣಪಂಡಿತರ ಕಾಲು ತೊಳೆದು ಭೂದಾನ ನೀಡಿದ್ದನ್ನು ತಿಳಿಸುತ್ತದೆ.[52]

ಅಸಗೊಡು ಗ್ರಾಮದ ಕ್ರಿ.ಶ. ೧೦೫೪ ರ ಶಾಸನದಲ್ಲಿ ನಾರಸಿಂಗದೇವನ ಆಳ್ವಿಕೆಯಲ್ಲಿ ಕಾಳಾಮುಖ ಕರ್ತ್ತಾರರನ್ನು ನಿರೂಪಿಸುತ್ತದೆ.

ಮೇರು ವಿನುದ್ಧುಮಾಪತಿಯೆ ದಕ್ಷಿಣ ಭಾಗದ ಭೂಮಿಯಲ್ಲಿ ತಾಂ
ಸಾರ ಮಿದೆ ನ್ದಿದೀಯಸಗೋಡಿನೊಳಿನ್ತು ಸಯಂಭುವಾಗಿಕ
ರ್ತ್ತಾರ ಜಿತೇಂದ್ರಿಯರಿಗೆ ಕನಸಿನ್ದೆಮೆತೋಱಿ ವಿಶೇಷದಿನ್ದವಿ
ಸ್ತಾರದೆ ಈಶ್ವರಾಲಯಮನೆತ್ತಿಸಿದರ್ದ್ದರೆಗೇನಪೂರ್ವಮೋ ॥

ಜ್ಞಾನ ಪರಶ್ಯಾಸ್ತ್ರಜ್ಞ
ಮ್ಮೌನಾನುಷ್ಠಾಣ ತತ್ಪರರ್ಸ್ವಂ ಯಮರಿ
ನ್ನೇ ನೆನ್ಧಭಿ ವರ್ಣಿಪೆಸ
ನ್ಮಾನದ ನಿರವದ್ಯಾ ದಾನಿಕರ್ತ್ತಾರಕರಂ॥

ವಾರಿಧಿ ಸಮಸ್ತ ವಸುಧಾ
ಧಾರಿಣಿಯೊಳು ನೆಗಟ್ದಿದಿವ್ಯ ಪೋ
ಭಾರಂ ಪಿರಿದೆನ್ದಹಿ ಚರ
ಣಾರಾಧನೆ ಗೆಯ್ದು ಪೇಡಿಗಳಂ ಪಸರಿಸುವಂ ॥

ಏವೇಳ್ವುದಣ್ಣ ಶಬದೀ
ಭಾವನೆಯಿಂ ಕರ್ಮ್ಮಬನ್ಧಮಂ ಕಿಡಿಸಿಯೆಸ
ದ್ಭಾವದೆ ಶಿವನಂ ಚಿತ್ತದೊ
ಳಾವಗಮವಯವದೆ ತಾಳ್ದಿದರ್ಕ್ಕರ್ತ್ತಾರರ್ ॥

ಸ್ವಸ್ತಿ ಯಮನಿಯಮ ಸ್ವಾಧ್ಯಾಯಧ್ಯಾನಧಾರಣ
ಮೌನಾನುಷ್ಠಾಣ ಜಪಸಮಾಧಿ ಸಂಪನ್ನರಪ್ಪ
ಶ್ರೀಮಟ್ಚಿ.... ನ್ದಭುವನ ಕರ್ತಾರ
ಪಂಡಿತ ದೇವರು[53]

ನಂದಿಬೇವೂರಿನ ಕ್ರಿ.ಶ. ೧೦೫೪ ರ ತ್ರೈಲೊಕ್ಯಮಲ್ಲನೊಳಂಬ ಪಲ್ಲವಪೆರ್ಮಾಡಿದೇವನ ಕಾಲದ ಶಾಸನದಲ್ಲಿ ಜೈನಯತಿಯೊಬ್ಬನನ್ನು ಹೀಗೆ ಹೊಗಳಿದೆ.

ಪರಮ ಶ್ರೀಜೈನಮಾರ್ಗ ಪ್ರಕಟಿತ ಮಹಿಮಾಕಾರ ರೌದಾರ್ಯರೀ ಸಂ
ಪರಣಾಂಭೋರಾಸಿಯಿನ್ದಂ ಪೋಱಮಡುವ ಸುಖೋಪಾಯಮಂತೋಱ ಜೈನೋ
ತ್ಕರಮಂ ಕಾರುಣ್ಯದಿಂದಂ ನಡೆಯಿಸುವ ಗುಣ ... ಜಿಗರ್ ಮೂಲ ಸಂಗಾ
ಭರಣರ್ ದೇಸಿಗಗಣರ್ ಪೊತ್ತಗೆವಳಿ... ಸರ್ವ್ವ ಶಾಸ್ತ್ರಪ್ರವೀಣರ್ ॥

ಕಂತುಮದಾವಶರ್ ಸಕಳದಯಾ ಪರರುದ್ವಭೋಧರ
ತ್ಯಂತ ತಪೋ ಮಯಜ್ಞೀನಮ ... ರಾರಿಯ ದೇವದ್ವಪ
ರ್ಯ್ಯಂತರ ವರ್ಗೆ ಶಿಸ್ಯರಖಿಳಾಗ . ಗವೀರಣಂದಿ ಸಿ
ದ್ದಾನ್ತಿ ಗರೆಂದೆಡೇ ಪೊಗಳ್ವದುನನ್ನತಿಯಂ ಮಾ.... ರಿರ್ವ್ವರಂ ॥

ಅಷ್ಟೋಪವಾಸಿ ಮುನಿಪತಿ
ಗಷ್ಟ ಮಹಾ .. ಹಾರ್ಯ ವಿಭವಂಗಂ ಹು
ಗಷ್ಟ ವಿಧ ಕರ್ಮ್ಮ ರ ....
ಷ್ಟ ವಿದಾರ್ಚನ ನಿಮಿತ್ತ ಮೆಂದಿದ ನಿತ್ತರ್ ॥

ವಿನಯ ಸತ್ಯಸೌಚ ಪ್ರಯುಕ್ತ ನಸ್ಖಳಿತ ವಿತ್ತನು ... ತ್ರಂ ಪ್ರಿಯ ವ
ಚನಂ ಶಿಷ್ಟ ದಿನಾಶ್ರಯನೆನಿಸಿದನ ... ಣ ವಿಶಾಳಂ ಮಾಳಂ ಬೇಹೂ ।
ರೊಳಂ ಮುನ್ನಾರುಂ ದೇಹಾರ ಮನಷ್ಟುಪಾಸಿ ಮುನಿಪತಿಗಿತ ॥[54]

ಚಿನ್ನತುಂಬಲಂ ಗ್ರಾಮದ ಕ್ರಿ.ಶ. ೧೦೬೮ರ ಜಯಸಿಂಘದೇವನ ಆಳ್ವಿಕೆಯಲ್ಲಿ 'ಡವಕೇಶ್ವರ ದಯಾಚಾರ್ಯ್ಯ ಕಾಳಾಮುಖ ನಿರಂಜನ ಪಣ್ಡಿತರ ಸಿಸ್ಸೆರನನ್ತಸಕ್ತಿಪಣ್ಡಿತರ ಸಿಸ್ಯರ್ ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣಾ ಜಪ ಸಮದಿ ಸಡಂಗೋಪಹಾರಾದಿ ಸಂಪನ್ನರ ಮಳಿನ ಚರಿತ್ರನೇಕ ತರ್ಕ್ಕಾದಿ ಸಾಸ್ತ್ರ ಪಾರಾವಾರ ಪಾರಗರವದಾತ್ತ ಕೀರ್ತ್ತಿಧ್ವಜರಪ ಶ್ರೀಮತುಚಂದ್ರಭೂಷಣ ಪ್ಪಣ್ಡಿತರ್ಗ್ಗೆ ...' ಡವಕೇಶ್ವರದಯಾಚಾರ್ಯರ ಮತ್ತು ಅವರ ಶಿಷ್ಯರ ಬಗ್ಗೆ ಹೇಳಿದೆ.[55]

ಉಚ್ಚಂಗಿದುರ್ಗದ ಕ್ರಿ.ಶ. ೧೦೭೦ ರ ಶಾಸನದಲ್ಲಿ 'ನನ್ನೇಶ್ವರದಾಚಾರ್ಯ್ಯ ಕಾಳಾಮುಖ ತಪೋಧನರ್ ಸಕಟಿಕಳಾ ರಕ್ಷಾ ಪ್ರವೀಣಸ್ಸ್ಯಮಸ್ತ ಗುಣಗಣಾಲಂಕೃತ ಸರೀರರಾತ್ರೇಯ ಗೋತ್ರ ಪವಿತ್ರರ್ಚ್ಚತುರ್ದ್ದಸ ಪ್ರಮಾಣ ಸಿದ್ಧಾನ್ತ ಬ್ಯಾಖ್ಯಾತರ್ತ್ತರ್ಕ್ಕಿತ ಚಕ್ರವರ್ತಿ ಶ್ರಿಮತ್ಕಂಟೆಯ ವಖ್ಖಾಣಿದೇವರು ಅವರ ಶಿಷ್ಯರು ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೌನಾನುಷ್ಠಾನ ಜಪ ಸಮಾಧಿ ಷಡಂಗೋಪಹಾರಾದಿ ಸಂಪಾನ್ನರ್ಸ್ಯ ಕವಿ ಶಾಸ್ತ್ರ ಪಾರಾವಾರ ಪಾರಗರ್ಸ್ಸರಸ್ವತೀ ಕರ್ಣಾವತಂ ಸರಾತ್ರೇಯ ಗೋತ್ರಪವಿತ್ರರ್ಗ್ಗುರು ಕುಲಸಮುದ್ಧಾರಣರ್ಶ್ಶಿವ ಪಾದಪಂಕಜ ಭ್ರಮರನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ'[56] ಎಂದು ಉಚ್ಚಂಗಿಕೋಟೆಯ ಸೋಮೇಸ್ವರ

ಪಂಡಿತರನ್ನು ಹೊಗಳಿದೆ. ಗೃಹಪ್ರವೇಶದ ಕಾಲದಲ್ಲಿ ಇದೇ ತಪಸ್ವಿಗಳ ಪಾದಗಳನ್ನು ತೊಳೆದು ದೇವರಿಗೆ ದಾನ ಕೊಟ್ಟಿದ್ದನ್ನು ಹೇಳಿದೆ.

ನೊಳಂಬರ ಶಾಸನದಲ್ಲಿ ಉಕ್ತವಾಗಿರುವ ಮಳೆಯಾಳಪಂಡಿತನಂತಹ ಯತಿಯು ಈ ಸ್ಥಳದಲ್ಲಿಯೆ ಅಲ್ಲದೆ ದೂರದ 'ಮುದಿನೀರು' ಎಂಬ ಸ್ಥಳದಲ್ಲಿಯೂ ಪ್ರಸಿದ್ಧನಾಗಿದ್ದ. ಹೀಗೆ ಯತಿಗಳು ತಮ್ಮ ವರ್ಚಸ್ಸಿನಿಂದ ತಾವಿದ್ದ ಸ್ಥಳದಲ್ಲಿಯ ಜನರನ್ನು ಒಗ್ಗೂಡಿಸಿ ಆ ಗ್ರಾಮದ ದೇವಾಲಯ ಹಾಗೂ ಅದಕ್ಕೆ ಹೊಂದಿಕೊಂಡಿದ್ದಂತಹ ಮಟಕ್ಕೆ ಅವರಿಂದ ದಾನ-ದತ್ತಿಗಳನ್ನು ಪಡೆಯುತ್ತಿದ್ದರು. ಆ ಮೂಲಕ ಧರ್ಮ ಪ್ರಸರಣವನ್ನೂ ಮಾಡುತ್ತಿದ್ದರು.

ನೊಳಂಬರ ಶಾಸನಗಳಲ್ಲಿ ಉಲ್ಲೇಖವಾಗಿರುವ ಅನೇಕ ಯತಿಗಳು ತಾವು ಇದ್ದ ಗ್ರಾಮಗಳಿಗೆ ತಾವೇ ಸ್ಥಾನಿಕರಾಗಿದ್ದು, ಆ ಸ್ಥಾನವನ್ನು ಆಳುತ್ತಿದ್ದ ವಿವರಗಳು ಹೆಬ್ಬಟ,ಆವನಿ ಮುಂತಾದ ಗ್ರಾಮಗಳಲ್ಲಿ ಉಲ್ಲೇಖವಾಗಿವೆ. ಇಲ್ಲೆಲ್ಲಾ ಆ ಊರಿನ ಆದಾಯ ನೇರವಾಗಿ ಈ ಯತಿಗಳಿಗೇ ಸೇರುತ್ತಿತ್ತು. ಇಲ್ಲಿ ರಾಜನ ಅಥವಾ ಅವನ ಕೈಕೆಳಗಿನ ಯಾವ ಅಧಿಕಾರಿಗಳಿಗೂ ಇಂತಹ ಗ್ರಾಮಗಳ ಉತ್ಪತ್ತಿಯ ಮೇಲೆ ಅಧಿಕಾರವಿರುತ್ತಿರಲಿಲ್ಲ. ಇಂತಹ ಗ್ರಾಮಗಳನ್ನು ತಪೋರಾಜ್ಯಗಳೆಂದು ನೊಳಂಬರ ಶಾಸನಗಳಲ್ಲಿ ಕರೆಯಲಾಗಿದೆ.

ಕ್ರಿ.ಶ. ೧೦೭೨ ರ ನೊಳಂಬ ಪಲ್ಲವಪೆರ್ಮಾಡಿ ಜಯಸಿಂಹನ ಶಾಸನದಲ್ಲಿ ಅಮೃತರಾಶಿಯ ಪಂಡಿತರ ಕಾಲು ತೊಳೆದು ದೇವಾಲಯಕ್ಕೆ ದಾನ ನೀಡಿದುದನ್ನು ತಿಳಿಸುತ್ತದೆ.[57] ಹುಲೇಗುಂದಿಯ ಕ್ರಿ.ಶ. ೧೦೭೩ ರ ಶಾಸನದಲ್ಲಿ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವಪೆರ್ಮಾನಡಿ ಜಯಸಿಂಗದೇವನ ಸಾಮಂತ ಮಂಗಿ ಏಚಯ್ಯ ಎಂಬುವವನು ಕೆರೆಯೂರ ಜ್ಞಾನಶಿವದೇವ ಮೌನಿ ಮುನಿಪರ ಕಾಲನ್ನು ತೊಳೆದು ದಾನ ನೀಡುತ್ತಾನೆ.[58] ರಾಜೇಂದ್ರ ವೀರನೊಳಂಬನ ಇದೇ ಕಾಲದ ಶಾಸನದಲ್ಲಿ ಬಾಣಗೆರೆಯನ್ನು ಚಲ್ಲುಕ ಭಟಾರರಿಗೆ ದಾನ ಕೊಟ್ಟಿದ್ದನ್ನು ತಿಳಿಸುತ್ತದೆ.

ಕೆರೆಗಳನಯ್ದುಂ ಕಟ್ಟಿಸಿ
ಗುಱಿಯಾಗಿರೆ ನಿಱಸಿ ನೆಗಟ್ದಿ ನನ್ನೀ
ಶ್ವರಮಂ ಕಱೆಯಲ್ಲದ ತಪದೊದವಂ
ಮೆಱೆಯಲ್ತು ಪದಂಕ ಕಾಱರನ್ನರು ಮೊಳರೆ ॥

ಕೊರಲ ವಿಷಾಹಿಯೊಳ್ಪೊಸಲಕಣ್ಣ ಶಿಖಾಳಿಗಳ ಸಹಸ್ರ ಬಾ
ಸ್ಕರವು ವುವ್ವೊಳೆಧಗಳಿಗಿ ... ದೊಳದ್ಭುತ ಭೂತ ಕೋಟಿಗಳ
ವೆರಸಿದೋಳಿ ಜಗಂ ಕಿಡುಗೆ ಮೆನ್ದಿವನಿಲ್ಲದೆ ಬನ್ದು ಪುಟ್ಟದೀ
ಶ್ವರನೆದಲೆನ್ದು ಕೀರ್ತಿಸುವದೀ ಜಗಮೀತ ಪದಂಕ ಶ್ರೀಚಿಲುಕ ಭಟಾರರ್[59]

ಕಲ್ಕೇರಿಯ ಕ್ರಿ.ಶ. ೧೦೭೮ರ ವೀರನೊಳಂಬ ಮತ್ತು ಮಾಳಲದೇವಿಯನ್ನು ಉಲ್ಲೇಖಿಸುವ ಈ ಶಾಸನದಲ್ಲಿ

'ಪರಹಿತರೆಂದು ದಾತ್ತಯಶರೆಂದು ಜಿತೇಂದ್ರಿಯರೆಂದು ಯೋಗ ಪಂ
ಕರುಹದಿನೇಶರೆಂದು ಸಕಳಾಗಮ ಕೋವಿದರೆಂದು ಧರ್ಮತ
ತ್ಪರರಿವರೆಂದು ಕೂರ್ತು ಮಲೆಯಾಳ ತಪೋನಿಧಿ ದೇವಸಿಂಗಿ ಜೀ
ಯರ ಪದಯುಗ್ಮಮಂ ಪಡೆದು ಕಟ್ಟಿದರರ್ತ್ಥಿಯೆ ಪುಣ್ಯಮೂರ್ತಿಗಳ'||

'ಕಾಳಾಮುಖ ನೈಷ್ಠಿಕ ತಪೋಧನರ್ಗ್ಗವಲ್ಲಿಯ ಪಾವುಳಕ್ಕಂ ಖಣ್ಡಸ್ಫುಟಿತಕ್ಕಂ' ಎಂದು ಹೇಳಿ ಮುಂದುವರಿದು ನೈಷ್ಠಿಕರಲ್ಲದ ತಪೋಧನರಲ್ಲದವರು ಇರಲಾಗದು ಎಂಬ ಕಟ್ಟುಪಾಡುಗಳನ್ನು ವಿಧಿಸಿರುವುದನ್ನು ಗಮನಿಸಬಹುದು.

ಅಂಬೋನಿಧಿ ಪರಿವೃತ ವಿ
ಶ್ವಂಭರೆಯೊಳ್ ನೆಗರ್ದಿರ್ದ್ದ ಲಿಂಗಮಂ ಪೊಗೞ್ದರ್ ಸ್ವಾ
ಯಂಭು ಗಡಂ ಕಡಂ ಸ್ವಾ
ಯಂಭು ಮಳಲ್ ದಿವ್ಯಲಿಂಗಮಂ ಕಲ್ಕೆಱೆಯೊಳ್ ||

ಅದು ನೈಷ್ಠಿಕ ಸಂಯಮಿಯ
ಲ್ಲದರ್ಗ್ಗೆ ಪೂಜಿಸುವುದರಿದಿರುಳ್ಗಡುಗೆ ಗುಡ
ಲ್ಕದು ದಿವ್ಯ ಮೂರ್ತಿಯಂ ತೋ
ರ್ಪುದು ಬಿಡದಾರಾಧಿಪರಿಗೆ ಕುಡುವುದು ಬರಮಂ ||

ಅಲ್ಲಿಯ ದಾಸಗಾವುಣ್ಡಂ ಜೀಯರ್ಗ್ಗೆ ಅಕ್ಕಿ ಬಟ್ಟೆಯಿಂತಿಱುವ ಈ ಸ್ಥಾನದಲಿ ನೈಷ್ಠಿಕರಲ್ಲದ ತಪೋಧನರಿರಲಾಗದು ಎಂದು ಹೇಳಿದೆ.[60]

ಮೇಲೆ ಉಲ್ಲೇಖಿಸಿರುವ ಯತಿಗಳಲ್ಲದೆ ಇನ್ನೂ ಅನೇಕ ಯತಿಗಳನ್ನು ಶಾಸನಗಳು ಹೇಳಿವೆ. ಅಂತಹ ಯತಿಗಳ ಪಟ್ಟಿಯನ್ನು ಈ ಮುಂದೆ ನೀಡಲಾಗಿದೆ.

### ಯತಿಗಳ ಪಟ್ಟಿ

| ಊರು | ಕಾಲ | ರಾಜ | ಯತಿ | ಶಾಸನ |
|---|---|---|---|---|
| – | ೮೪೧ | ನೊಳಂಬಾಧಿರಾಜ | ಧರ್ಮಶಕ್ತಿ ಪಂಡಿತ | EC.X.Cb.26. |
| ಬರಗೂರು | ಕ್ರಿಶ ೮೭೮ | ಮಹೇಂದ್ರ I | ಸೋಮಭಟಾರ | EC.XII.Si.38. |
| ಬಾಗುಳಿ | ಕ್ರಿಶ ೧೦೧೮ | ನೊ.ಉದಯಾದಿತ್ಯ | ಸೋಮಸಿಂಗಭಳಾರ | ಕವಿಶಾಸಂ.೧.ಹರಪ.೯೭ |
| ಬಳ್ಳಾರಿ | ಕ್ರಿಶ ೧೦೩೩ | ಜಗದೇಕಮಲ್ಲ ನೊಳಂಬ | ಉತ್ತಮರಾಶಿ ಪಂಡಿತ | ಅದೇ. ಬಳ್ಳಾ.೩೮ |
| ಹಿರೇ– | ಕ್ರಿಶ ೧೦೩೪ | ಜಗದೇಕಮಲ್ಲನೊಳಂಬ | ವಖ್ಖಣಿಜೀಯರ ಶಿಷ್ಯ | ಅದೇ. ೩೦ |

| | | | | |
|---|---|---|---|---|
| ಮ್ಯಾಗಳಗೇರಿ | | ಚಂದ್ರಾಭರಣಜೀಯ | | |
| ಚಿಮ್ಮಹಳ್ಳಿ | ಅದೇ. | ಅದೇ. | ದುಗ್ಗರಾಜ ಪಂಡಿತ | ಅದೇ. ಹಗರಿ.೨೮ |
| ನಿಟ್ಟೂರು | ಅದೇ. | ಉದಯಾದಿತ್ಯ | ಸೇವರಾಶಿ ಬಳಾರ | EC.XI.Dg.71. |
| ಮುದಿಹಡದಿ | ಕ್ರಿಶ ೧೦೩೪ | ಇರ್ಮಡಿನೊಳಂಬ | ಬ್ರಹ್ಮವೇದಿಜೀಯ | EC.XI.Dg.126 |
| ಮಾಸ್ಕರ | ಕ್ರಿಶ ೧೦೩೬ | ಅದೇ. | ಅನಂತವೀರ್ಯಯತಿ | ಕವಿಶಾಸಂ.೧.ಹಡಗ ೬೦ |
| ಮಸಲವಾಡ | | | ಮೊಸಳೆಮಡು ಆಳುತ್ತಿದ್ದ | |
| ಸೋಗಿ | ಕ್ರಿಶ ೧೦೩೮ | ಅದೇ. | ಅನಂತವೀರ್ಯಯತಿ | ಅದೇ. ೯೬. |
| ಸಿರಿವಾರ | ಕ್ರಿಶ ೧೦೪೫ | ನನ್ನಿನೊಳಂಬ | ಜೇಷ್ಠರಾಶಿ ಬಳಾರ | ಅದೇ. ಬಳ್ಳಾರಿ ೬೩. |
| ಮೊರಿಗೆರೆ | ಕ್ರಿಶ ೧೦೪೫ | ಅದೇ. | ಕೋಗಳಿಮಳೆಯಾಳಪಂಡಿತ | ಅದೇ. ಹಗರಿ.೨೪. |
| ಕೋಗಳಿ | ಅದೇ. | ಅದೇ. | ಇಂದ್ರನಂದಿ ಪಂಡಿತ | ಅದೇ. ೧೬. |
| ಮೋರಿಗೆರೆ | ಕ್ರಿಶ.೧೦೪೬ | ಅದೇ. | ಸೋಮೇಶ್ವರ ಪಂಡಿತ | ಅದೇ. ೨೬. |
| ಶಿರಸ್ತಹಳ್ಳಿ | ಕ್ರಿಶ.೧೦೫೦ | ನಾರಸಿಂಗದೇವ | ವಿದ್ಯಾನಿಧಿ ಪಂಡಿತ | SII.IX.Pt.1.107. |
| ಚಿನ್ನತಂಬುಲಂ | ಕ್ರಿಶ.೧೦೫೨ | ನೊಳಂಬಘಟ್ಟದೇವ | ಮಹಾವಾದಿಭಕ್ತಪಂಡಿತ | SII.IX.Pt.1.111. |
| ಅಸಗೋಡು | ಕ್ರಿಶ.೧೦೫೪ | ನಾರಸಿಂಗದೇವ | ತ್ರೈಲೋಕ್ಯಕರ್ತರ ಭಟ್ಟಾರ | EC.XI .Jl .10. |
| ಹಿರೇ–<br>ಮ್ಯಾಗಳಗೇರಿ | | ಜಗದೇಕ ಮಲ್ಲ<br>ಬ್ರಹ್ಮಾಧಿರಾಜ | ಚಂದ್ರಭೂಷಣ ಪಂಡಿತ | ಕವಿಶಾಸಂ.೧.ಹರಪ.೩೧. |
| ನಂದಿಬೇವೂರು | ಕ್ರಿಶ ೧೦೬೮ | ನೊ.ಪ.ಪೆ.ದೇವ | ಅಷ್ಟೋಪವಾಸಿಭಳರ್ | SII.IX.Pt.1.115. |
| ಚಿನ್ನತಂಬುಲುಂ | ಕ್ರಿಶ ೧೦೬೮ | ಜಯಸಿಂಗದೇವ | ಚಂದ್ರಭೂಷಣ ಪಂಡಿತ | ಕವಿಶಾಸಂ.೫ |
| ಸೂಡಿ | ಕ್ರಿಶ ೧೦೬೯ | ಜಯಸಿಂಗದೇವ | ಸೋಮೇಶ್ವರ ಪಂಡಿತ | SII.XI.Pt.1.109 |
| ಉಚ್ಚಂಗಿ | ಕ್ರಿಶ ೧೦೭೦ | ಜಯಸಿಂಗದೇವ | ಅದೇ. | ಕವಿಶಾಸಂ.೧.ಹರಪ.೪. |
| ಕಲ್ಕೇರಿ | ಕ್ರಿಶ ೧೦೭೬ | ವೀರನೊಳಂಬ<br>ಉದಯಾದಿತ್ಯ | ಮಲಯಾಳತಪೋನಿಧಿ<br>ದೇವಸಿಂಗಿಜೀಯ | SII.XX.49 |
| ಕೋಳೂರು | | | ನರಕೇಶ್ವರದ<br>ವಿನಿತಾಚಾರ್ಯರಶಿಷ್ಯ<br>ಪರಮೇಶ್ವರರು | EC.XI.Cl.33. |

## ಮಹಾಜನರು

ಡಾ॥ ಎಂ. ಚಿದಾನಂದಮೂರ್ತಿಯವರು 'ಅಗ್ರಹಾರವನ್ನು ದಾನವಾಗಿ ಪಡೆದ ಬ್ರಾಹ್ಮಣರೇ ಮಹಾಜನಗಳು, ಅವರೇ ಅಗ್ರಹಾರದ ಪ್ರಭುಗಳು' ಎಂದಿರುತ್ತಾರೆ. ಆದರೆ ಅನೇಕ ಅಗ್ರಹಾರಗಳನ್ನು ಅಭ್ಯಾಸ ಮಾಡಿದಾಗ ಅಗ್ರಹಾರಗಳಲ್ಲಿ ಬೇರೆ ಬೇರೆ ಜನರು ಕೂಡ ವಾಸಿಸುತ್ತಿದ್ದರೆಂಬುದು ತಿಳಿಯುತ್ತದೆ. ಹೀಗಾಗಿ ಬ್ರಾಹ್ಮಣರು ಅಗ್ರಹಾರವನ್ನು ದಾನವಾಗಿ ಪಡೆದಿದ್ದರೆಂಬ ವಿವರಣೆಯನ್ನು ಎಲ್ಲಾ ಅಗ್ರಹಾರಗಳಿಗೂ ಅನ್ವಯಿಸುವುದು ಸರಿಯಲ್ಲ. ಆದರೆ ಅಗ್ರಹಾರದ ಉತ್ಪತ್ತಿಯನ್ನು ಮಾತ್ರ ನಿಗದಿ ಪಡಿಸಿದ ಬ್ರಾಹ್ಮಣರಿಗೆ ಸಂದಾಯವಾಗುತ್ತಿತ್ತೆಂಬುದು ನಿರ್ವಿವಾದ. ಯಾವುದೇ ಗ್ರಾಮಗಳಲ್ಲಿನ ಬ್ರಾಹ್ಮಣ ಕುಟುಂಬಗಳನ್ನು ಗುರ್ತಿಸಿ ಮಹಾಜನರ ಸಂಖ್ಯೆಯನ್ನು ಉಲ್ಲೇಖಿಸುತ್ತಿದ್ದರು. ಇದರಿಂದ ಶಾಸನಗಳಲ್ಲಿ ಮಹಾಜನರು ೫೨, ಮಹಾಜನರು ೫೦೦, ಇತ್ಯಾದಿ ಸಂಖ್ಯೆಗಳು ಉಲ್ಲೇಖವಾಗಿವೆ.

ಊರಿನಲ್ಲಿಯ ಮಹಾಜನರು ಆಡಳಿತಾಂಗದ ಭಾಗವಾಗಿರದೆ ದೈನಂದಿನ ಬ್ರಾಹ್ಮಣ

ಚಟುವಟಿಕೆಗಳನ್ನು ನಡೆಸುವವರು ಮಾತ್ರ ಮಹಾಜನರಾಗಲು ಅರ್ಹರಾಗುತ್ತಿದ್ದರು. ಇವರಿಗೆ ಮಾತ್ರ ದಾನವನ್ನು ಪಡೆಯುವ, ಬ್ರಾಹ್ಮಣಿಕ ಕ್ರಿಯೆಗಳನ್ನು ನಡೆಸುವ ಅಧಿಕಾರವಿತ್ತು. ಉಳಿದ ಆಡಳಿತಾಂಗ ವಿಭಾಗದ ಬ್ರಾಹ್ಮಣರಿಗೆ ಈ ಅಧಿಕಾರಗಳಿರಲಿಲ್ಲ. ಇಂತಹವರಿಗೆ ದಾನವನ್ನು ಪರಿಗ್ರಹಿಸುವ ಅಂದರೆ ಸ್ವೀಕರಿಸುವ ಅಧಿಕಾರವೂ ಇರಲಿಲ್ಲ. ಮಹಾಜನರು ಊರಿನಲ್ಲಿ ಯಾವುದೇ ಧಾರ್ಮಿಕ ಚಟುವಟಿಕೆ ನಡೆಯುವ ಸಂದರ್ಭದಲ್ಲಿ ಆ ಎಲ್ಲಾ ವಿಧಿ-ವಿಧಾನಗಳು ಇವರ ಸಮಕ್ಷಮದಲ್ಲಿ ನಡೆಯಬೇಕಿತ್ತು. ದಾನವನ್ನು ನೀಡುವಂತಹ ಸಮಯಗಳಲ್ಲಿ ಮಹಾಜನರ ಪಾದವನ್ನು ತೊಳೆದು ಅವರ ಸಾಕ್ಷಿಯಲ್ಲಿ ದಾನವನ್ನು ನೀಡಬೇಕಾಗಿತ್ತು. ಅಲ್ಲದೆ, ಯಾವುದೇ ದೇವಾಲಯಕ್ಕೆ ದಾನವನ್ನು ನೀಡಿದಾಗ ಆ ದಾನದ ಉಪಯೋಗ, ಉಸ್ತುವಾರಿ ಈ ಮಹಾಜನರಿಗೆ ಸೇರಿತ್ತು. ಅಂದರೆ ಗ್ರಾಮದಲ್ಲಿ ನಡೆಯುವ ಯಾವುದೇ ಧಾರ್ಮಿಕ, ಸಾಂಸ್ಕೃತಿಕ ಚಟುವಟಿಕೆ ಇವರ ವಶದಲ್ಲಿರುತ್ತಿದ್ದವು. ಅತ್ತಿಮಬ್ಬೆ ಲಕ್ಕಿಗುಂಡಿಯಲ್ಲಿ ಬಸದಿಯನ್ನು ಕಟ್ಟಿಸಿದಾಗ ಬಸದಿಯ ಪೂಜಾ ನಿಮಿತ್ತವಾಗಿ ಅಗ್ರಹಾರದ ಮಹಾಜನರ ಅನುಮತಿ ಪಡೆದು ಬಸದಿಗೆ ದಾನ ನೀಡಿದ್ದಲ್ಲದೆ, ಆ ಅಗ್ರಹಾರದ ಬ್ರಾಹ್ಮಣರನ್ನು ಸಂಪ್ರೀತಗೊಳಿಸಲು ಬ್ರಹ್ಮನ ಮೂರ್ತಿಯನ್ನು ಸ್ಥಾಪಿಸುತ್ತಾಳೆ. ಇಷ್ಟರ ಮಟ್ಟಿಗೆ ಮಹಾಜನರು ಪ್ರಭಾವಿಗಳಾಗಿದ್ದರು. ಇಂತಹ ಅನೇಕ ಉದಾಹರಣೆಗಳನ್ನು ನಾವು ಶಾಸನಗಳಲ್ಲಿ ಗಮನಿಸಬಹುದು. ಅನೇಕ ಬ್ರಾಹ್ಮಣರು (ಮಹಾಜನರು) ಜಿನಬಸದಿಗಳಿಗೆ ಕಟ್ಟಿಸಿ ಆ ಬಸದಿಗಳನ್ನು ಬ್ರಹ್ಮೇಶ್ವರ, ಏಕ್ಕೋಟಿ ಜಿನಾಲಯ ಎಂಬ ಹೆಸರನ್ನು ನೀಡಿರುತ್ತಾರೆ.

ಮಹಾಜನರು ದಾನವನ್ನು ಮಾತ್ರ ಸ್ವೀಕರಿಸುವವರಾಗಿರಲಿಲ್ಲ. ಅದರೊಂದಿಗೆ ತಾವು ದಾನ ಸ್ವೀಕರಿಸಿದ ಭೂಮಿಯಲ್ಲಿನ ಉತ್ಪತ್ತಿಯ ಕೆಲವು ಭಾಗವನ್ನು ದೇವರಿಗೆ ಮತ್ತು ವಿದ್ಯಾದಾನಕ್ಕೆ ನೀಡಿರುವ ಉದಾಹರಣೆಗಳು ಸಾಕಷ್ಟಿವೆ.

ನೊಳಂಬರ ಶಾಸನಗಳಲ್ಲಿ ತಾಯಲೂರು, ಕುರುಬೂರು, ಶಿವಾರ ಪಟ್ಟಣ, ಗುಣಿಮೊರು ಬಾಗಿಲು, ಅಗಳಿ, ಹಿಂದೂಪುರ, ಮಧೂಡಿ, ಎಲ್ಲೂರು, ಬಾಗುಳಿ, ವಡ್ಡನಹಳ್ಳಿ, ಶಿರಸ್ತಹಳ್ಳಿ, ನಂದಿಬೇವೂರು, ಕುರ್ತುಕೋಟೆ, ಹಳೆಬನ್ನೂರು, ಸೋಮಪುರ ಮುಂತಾದ ಊರುಗಳಲ್ಲಿ ಮಹಾಜನರಿದ್ದಂತೆ ಶಾಸನಗಳು ಉಲ್ಲೇಖಿಸುತ್ತವೆ. ಈ ಎಲ್ಲಾ ಗ್ರಾಮಗಳಲ್ಲಿನ ಮಹಾಜನರ ಸಂಖ್ಯೆ ಒಂದೇ ತೆರನಾಗಿರುವುದಿಲ್ಲ. ಆ ಗ್ರಾಮದ ಫಲವತ್ತತೆ, ವಾಸನಾನುಕೂಲ ಇವುಗಳ ಅಧಾರದ ಮೇಲೆ ಮಹಾಜನರ ಸಂಖ್ಯೆ ಏರಿಳಿತವಾಗುತ್ತಿತ್ತು.

ಇವರ ಕಾಲದಲ್ಲಿ ಬ್ರಾಹ್ಮಣರಿಗೆ ದಾನ ನೀಡಿದ್ದ ಗ್ರಾಮಗಳನ್ನು 'ಮಂಗಲ'ವೆಂದು ಕರೆದಿದ್ದು, ಮಂಗಲವೆಂದರೆ ಅಗ್ರಹಾರವೆಂದೇ ಅರ್ಥವಾಗುತ್ತದೆ. ಉದಾಹರಣೆಗೆ ಪ್ರಭುರಾಮ ಮಂಗಲ, ಅಯ್ಯಪಮಂಗಲ ಪೊಜಿರಮಂಗಲ ಮೆಣ್ಡಿಮಂಗಲಗಳನ್ನು ಉದಾಹರಿಸಬಹುದು. ಹೀಗೆ

ಮಂಗಲಗಳನ್ನು ನಿರ್ಮಿಸಿ ಅಲ್ಲಿನ ಭೂಮಿಯನ್ನು ಆ ಮಂಗಲಕ್ಕೆ ಸಂಬಂಧಿಸಿದ ಮಹಾಜನರಿಗೆ (ಬ್ರಾಹ್ಮಣರಿಗೆ) ಅವರ ವೃತ್ತಿಗೆ ಅನುಗುಣವಾಗಿ ಹಂಚುತ್ತಿದ್ದರು.

ಹಿರೇಹಡಗಲಿಂಯ ಕ್ರಿ.ಶ.೮೪೮ ರ ಶಾಸನದಲ್ಲಿ ಅನಾದಿಂಯಗ್ರಹಾರಂ ಪೊಸವಡಂಗಿಲೆಯೂರಡೆಯ ಪ್ರಮುಖ ೧೨೦ ಮಹಾಜನರು ದಾನ ಕೊಟ್ಟ ಭೂಮಿಯನ್ನು ರಕ್ಷಿಸುವಂತೆ ಹೇಳಿದೆ.[61] ತಾಯಲೂರಿನ ಕ್ರಿ.ಶ. ೮೯೫ ರ ಶಾಸನದಲ್ಲಿ ನಾಲ್ವದಿಂಬರು ಅಂದರೆ ೪೨ ಜನರನ್ನು ನಾವು ಮಹಾಜನರೆಂದೇ ಭಾವಿಸಬಹುದು.[62] ವರ್ತೂರಿನ ಕ್ರಿ.ಶ. ಸು. ೯೧೦ ರ ಶಾಸನದಲ್ಲಿ ಏಱೆಯಪಮಂಗಲದ ಮಹಾಜನರ ಸಾಕ್ಷಿಯಾಗಿ ಕೈಲಾಸಪಂಡಿತರು ಬರೆದ ಶಾಸನವೊಂದು ಇರುವುದರಿಂದ ಮಹಾಜನರ ಸಾಕ್ಷಿಯಾಗಿ ದಾನ ನೀಡಿದ ಉದಾಹರಣೆ ದೊರೆಯುತ್ತದೆ.[63] ಬೇತಮಂಗಲದ ಕ್ರಿ.ಶ.ಸು. ೯೨೦ ರ ಶಾಸನದಲ್ಲಿ ಕಯ್ವಾರ-೫೦೦ ಮಹಾಜನರು ವಿಜಯಾದಿತ್ಯ ಮಂಗಲದ ಪಿರಿಯಕೆರೆಯ ಭಿನ್ನಪ್ರತಿ ಸನ್ನಾಧನಜ್ಗೆಯ್ದು ಸ್ಥಿರೀಕರಿಸಿದ್ದನ್ನು ಹೇಳುತ್ತದೆ.[64] ಕುರುಬೂರಿನ ಕ್ರಿ.ಶ.೯೩೧ ರ ಶಾಸನದಲ್ಲಿ ಕಣ್ಣಯ್ಯ, ಸಂಕರಯ್ಯ ಮತ್ತು ಕುಱುಮ್ಬೂರ ೧೦೮ ಮಹಾಜನರು ೧೫ ಗದ್ಯಾಣ ಪೊನ್ನು ಕೊಟ್ಟ ಉಲ್ಲೇಖವಿದೆ.[65] ಈ ಶಾಸನದಲ್ಲಿ ಮಹಾಜನರೇ ದಾನ ನೀಡಿದ್ದನ್ನು ತಿಳಿಯಬಹುದು. ಕ್ಯಾಲನೂರಿನ ಕ್ರಿ.ಶ.ಸು. ೯೨೫ ರ ಶಾಸನದಲ್ಲಿ ಕೆರೆನೂರ ೫೨ ಮಹಾಜನರು ಮತ್ತೆ ಕೆಲವರು ೨೦ ಗದ್ಯಾಣ ಪೊನ್ಗೊಟ್ಟು ಪಡೆದ ವಿಷಯವಿದೆ.[66] ಈ ಶಾಸನದಲ್ಲಿ ದಾನ ಕೊಡುವ ಸಂದರ್ಭದಲ್ಲಿ ತಾವೇ ಕೊಂಡದ್ದು ತಿಳಿಯುತ್ತದೆ. ಶಿವಾರಪಟ್ಟಣದ ಕ್ರಿ.ಶ.ಸು ೯೩೫ ರ ಶಾಸನದಲ್ಲಿ ನಾಗಮಯ್ಯ ಮತ್ತು ಕೊಣ್ಡಮಯ್ಯ ಇತರರು ಕ್ರಮೇಣ ಮಂಗಲದ ಮಹಾಜನರಿಗೆ ೧೬ ಗದ್ಯಾಣ ಪೊಜ್ಗೊಟ್ಟುಕೊಂಡ ಧರ್ಮವೆಂದಿದೆ. ಗುಣಿಮೊರು ಬಾಗಿಲಿನ ಕ್ರಿ.ಶ. ೯೩೬ ರ ಶಾಸನದಲ್ಲಿ ನೊಳಂಬೇಶ್ವರದ ಸ್ಥಾನವನ್ನು ಕಾಳಾಮುಖಯತಿ ವರುಣಶಿವಭಟಾರ ಆಳುತ್ತಿದ್ದು ಮಹಾಜನರ ಉಲ್ಲೇಖವೂ ಬಂದಿದ್ದು, ಅವನ ಸಮಕ್ಷಮದಲ್ಲಿ ದಾನ ಮಾಡಿರುವುದನ್ನು ತಿಳಿಸುತ್ತದೆ.[67] ಹಿಂದೂಪುರದ ಕ್ರಿ.ಶ.ಸು. ೯೫೦ ರ ಶಾಸನದಲ್ಲಿ ೩೦೦ ಮಹಾಜನರ ಉಲ್ಲೇಖ ಬಂದಿದ್ದು ಇವರೆಲ್ಲರೂ ಸೇರಿ ಕೆರೆಗೆ ತೂಬನ್ನಿಡಿಸಿದ ಉಲ್ಲೇಖವಿದೆ.[68] ಮಹಾಜನರು ಜನೋಪಕಾರಿ ಕೆಲಸಗಳನ್ನು ಕೈಗೊಳ್ಳುತ್ತಿದ್ದರೆಂದು ತಿಳಿಯುತ್ತದೆ. ಕೆಲವು ಶಾಸನಗಳು ದಾನ ಪಡೆದದ್ದನ್ನು ಕೊಟ್ಟದ್ದನ್ನು ತಿಳಿಸಿದರು. ದಾನವಾಗಿ ನೀಡಿದ ಅಥವಾ ಪಡೆದ ಬಗೆಗೆ ಯಾವ ವಿವರಗಳೂ ದೊರೆಯುವುದಿಲ್ಲ. ಆಗಳಿಯ ಕ್ರಿ.ಶ. ೯೫೦ ರ ಶಾಸನದಲ್ಲಿ ೨೨ ಮಹಾಜನರು ದಾನವಾಗಿ ಕೊಟ್ಟ ಭೂಮಿಯಲ್ಲಿ ಅನ್ಯಾಯವಾಗದಂತೆ ಕಾಯುವುದು ಎಂದಿದ್ದಾರೆ.[69] ಈ ಶಾಸನದಿಂದ ಮಹಾಜನರಿಗೆ ದಾನವಾಗಿ ಕೊಟ್ಟ ಭೂಮಿಯನ್ನು ರಕ್ಷಿಸಬೇಕಾಗುತ್ತೆಂದು ತಿಳಿಯುತ್ತದೆ. ಮಧೂಡಿಯ ಕ್ರಿ.ಶ. ೯೫೭ ರ ಶಾಸನದಲ್ಲಿ ದ್ರವ್ಯ ಕೊಟ್ಟು ಕೊಂಡ ಗದ್ದೆಯನ್ನು ಬಾಲವೃದ್ಧ ಸಹಿತ ನೆರೆದಿರುವಾಗ ೩೨ ಮಹಾಜನರು ವಿಷ್ಣುಗೃಹಕ್ಕೆ ದಾನ ಕೊಟ್ಟ ಉಲ್ಲೇಖವಿದೆ.[70] ಈ ಶಾಸನದಿಂದ ಊರಿನ ಪ್ರತಿಯೊಂದು

ವ್ಯಕ್ತಿಗೂ ದಾನ ನೀಡಿದ ಮಾಹಿತಿ ತಿಳಿದಿರುತ್ತಿತ್ತು. ಒಬ್ಬರಿಗೆ ತಿಳಿಯದಂತೆ ಮತ್ತೊಬ್ಬರು ಆನ್ಯಾಯವೆಸಗುವುದಕ್ಕೆ ಮೋಸ ಮಾಡಲು ಅವಕಾಶವಿರಲಿಲ್ಲವೆಂದು ತಿಳಿಯುತ್ತ .

ಉತ್ತನೂರಿನ ಕ್ರಿ.ಶ.೯೬೮ರ ಶಾಸನದಲ್ಲಿ ನೊಳಂಬಸೆಟ್ಟಿ ಮತ್ತು ಉತ್ತನೂರ ೧೨ ಮಹಾಜನರಿಗೆ ನೂರು ಗದ್ಯಾಣ ಕೊಟ್ಟು ಪರಮೇಶ್ವರನಿಗೆ ನಿತ್ಯನೈವೇದ್ಯಕ್ಕೆ ಭೂಮಿ ದಾನ ಕೊಟ್ಟ ಉಲ್ಲೇಖವಿದೆ.[71] ಎಲ್ಲೂರಿನ ಕ್ರಿ.ಶ. ೯೯ರ ಶಾಸನದಲ್ಲಿ ೧೨ ಮಹಾಜನರನ್ನು ಹೇಳಿದೆ.[72] ಬಾಗುಳಿಯ ಕ್ರಿ.ಶ. ೧೦೧೮ ರ ಶಾಸನದಲ್ಲಿ ೫೨ ಮಹಾಜನರ ಸಮಕ್ಷಮದಲ್ಲಿ ಸೋಮಸಿಂಘಭಳಾರರ ಕಾಲನ್ನು ತೊಳೆದು ಕಲಿದೇವರಿಗೆ ದಾನ ಕೊಟ್ಟ ವಿವರವಿದೆ.[73] ವಡ್ಡನಹಳ್ಳಿಯ ಕ್ರಿ.ಶ. ೧೦೪೪ ರ ಶಾಸನದಲ್ಲಿ ಬೆಳ್ವನೂರ ಊರೊಡೆಯ ಮಾರಮಯ್ಯ ಅವರ ಪುತ್ರಮಿತ್ರ ಕಳತ್ರ ಮತ್ತು ೧೨೦ ಮಹಾಜನರು ಸೇರಿ ಕಲಿದೇವಸ್ವಾಮಿಗೆ ಭೂದಾನ ಕೊಟ್ಟ ವಿಷಯವಿದೆ.[74] ಕೋಗಳಿ ಗ್ರಾಮದ ಕ್ರಿ.ಶ.ಸು. ೧೦೪೫ ರ ಶಾಸನದಲ್ಲಿ ಪೆರ್ಗಡೆ, ಗಾವುಂಡ ಮುಂತಾದ ೩೦ ಜನರು ಮತ್ತು ನಕರ ಮಹಾಜನರು, ೯೬೦೦೦ ಲೆಂಕರು ಸೇರಿ ಭೂದಾನ ಕೊಟ್ಟ ಉಲ್ಲೇಖವಿದೆ.[75] ಬಾಗೇವಾಡಿ ಗ್ರಾಮದ ಕ್ರಿ.ಶ ೧೦೪೯ ರ ಶಾಸನದಲ್ಲಿ ಬಾಗೇವಾಡಿಯ ಮಯ್ಯೂನಿರ್ವ್ವರು (೫೦೦) ಮಹಾಜನರಿಗೆ ಈ ಧರ್ಮ್ಮಮಂ ಕೈಕೊಣ್ಡು ಪ್ರತಿಪಾಳಿಸುವರು ಎಂದಿದೆ.[76] ಶಿರಸ್ತಹಳ್ಳಿಯ ಕ್ರಿ.ಶ. ೧೦೫೦ರ ಶಾಸನದಲ್ಲಿ ಊರೊಡೆಯ ಪುಟ್ಟಯಣ್ಣ ಪ್ರಮುಖ ೧೨೦ ಮಹಾಜನರು ಸೇರಿ ಧಾರಾಪೂರ್ವಕ ಕೊಟ್ಟ ಭೂಮಿ.[77] ನಂದಿಬೇವೂರಿನ ಕ್ರಿ.ಶ.೧೦೫೪ರ ಶಾಸನದಲ್ಲಿ ಊರೊಡೆಯ ಸಿವಾನುಯ್ಯನ ಮಗ ಮಾಳಿಮಯ್ಯ, ಮರುಳಿಮಯ್ಯ, ನಾರಣಮಯ್ಯ ಮುಂತಾದ ೧೨೦ ಜನರ ಉಲ್ಲೇಖವಿದೆ.[78] ಬಾಗುಳಿಯ ಕ್ರಿ.ಶ.೧೦೬೮ ರ ಶಾಸನದಲ್ಲಿ 'ಊರೊಡೆಯ ಪ್ರಮುಖ ೫೨ ಮಹಾಜನರು ನೆರೆದು ಬ್ರಾಹ್ಮಣವೃತ್ತಿಯ ಸೂದ್ರನಾಳಲು ವರ್ಷಂಪ್ರತಿ ವೀಸಕೆ ಮೂರು ಪಣವಿನ ತೆಱೆಯನ್ನು ಪ್ರತಿಪಾಳಿಸು'ವಂತೆ ಹೇಳಿದೆ.[79] ಈ ಶಾಸನದಿಂದ ಮಹಾಜನರ ಜೊತೆಗೆ ಊರಿನ ಪ್ರಮುಖನಾಗಿದ್ದವನು ಸೇರಿ ಬ್ರಾಹ್ಮಣವೃತ್ತಿಯ ಸೂದ್ರನಾಳಲು ಪ್ರತಿ ವರ್ಷ ೩ ಪಣವಿನ ತೆರಿಗೆಯನ್ನು ರಕ್ಷಿಸುವಂತೆ ಹೇಳಿದೆ. ಅಂದರೆ ಬ್ರಾಹ್ಮಣರು ಸೇರಿ ಮಾಡುತ್ತಿದ್ದ ಕೆಲಸವನ್ನು ಈ ವ್ಯಕ್ತಿ ಮಾಡುತ್ತಿದ್ದನೆಂದು ಅರ್ಥೈಸಬಹುದು. ಸೂದ್ರ ಎನ್ನುವುದನ್ನು ಶೂದ್ರನೆಂದು ಪರಿಗಣಿಸಿದಾಗ ಮಾತ್ರ ಶಾಸನದ ಉದ್ದೇಶ ಸರಿಯಾಗುತ್ತದೆ. (ಕನ್ನಡ ನಿಘಂಟುವಿನಲ್ಲಿ ಅಡಿಗೆಯ ಕೆಲಸವನ್ನು ನಿರ್ದೇಶಿಸುತ್ತದೆ.)

ಸೋಮಪುರದ ಕ್ರಿ.ಶ.೧೦೮೦ ರ ಶಾಸನದಲ್ಲಿ ೩೫ ಮಹಾಜನರ ಉಲ್ಲೇಖವಿದೆ. ಈ ಮಹಾಜನರ ವಿದ್ಯೆ ಪಾಂಡಿತ್ಯವನ್ನು ಕವಿ ಕಾವ್ಯದಲ್ಲಿ ವರ್ಣಿಸಿರುವುದನ್ನು ಕೆಳಗಿನ ಪದ್ಯಗಳಿಂದ ತಿಳಿಯುತ್ತದೆ.

ಅನಿತು ಧರ್ಮಕ್ಕಂ ಮೊದಲೆ
ನೆನಱುಗುನ್ದದ ತೊಡವಿದನೆ ಸಕಳ ಜಗ
ಜ್ಜನದ ಪೊಗರ್ತ್ತೆಗೆ ತಾಯ್ವನೆ
ಯೆನಿಸುಗುಮೀಶ್ವರ ಸಮುದ್ರಮತಿ ರಮಣೀಯ ॥

ಸ್ವಸ್ತಿ ಯಮ ನಿಯಮ ಸ್ವಾಧ್ಯಾಯಧ್ಯಾನ ಧಾರಣ
ಮೋನಾನುಷ್ಠಾಣ ಪಾರಾವಾರ ಪಾರಾಯಣರ ಶೇಷ
ವೈಶೇಷಿ ಕನಯ್ಯಾಯಿಕ ಲೋಕಾಯತ ಸಾಂಖ್ಯ
ಬೌದ್ಧ ಮೀಮಾಂಸಾದ್ಯನೇಕ ತರ್ಕಶಾಸ್ತ್ರ ಪ್ರವೀಣರ್
ರಿಗ್ಯುಜುಸ್ಸಾಮಾಥರ್ವ್ವಣ ವಿಧಿತ ವೇದಾಂತ
ರಷ್ಟಾದಶಧರ್ಮಾ. . . ಶರದಭ್ರವಿಭ್ರಾಜಿತ
ಶಶಾಂಕ ಶಂಕಗೋಕ್ಷೀರ ಧಾರಾಪೂರನೀಹಾರ ಹರಹಾರ
. . . ಯಶೋನ್ನತ . . ವಿದ್ಯಾ . . ವಿಶಿಷ್ಟ
ವಿದ್ವಾಂಶ ಜನ ಪೂಜಕರ್ ಯಜನ ಯಜನಾಧ್ಯಯ
ನಾಧ್ಯಾಪನ ದಾನ ಪ್ರತಿ ಗ್ರಹ ಧರ್ಮ್ಮ ನಿರತರನಾದಿ
. . . ಭಗವತೀಲಬ್ಧವರ ಪ್ರಸಾದರಪ್ಪ
ಶ್ರೀಮನ್ಮಹಾಗ್ರಹಾರಂ ನಱುಗುನ್ದದ ಮೆಕ್ಕೆಗೇರಿಯ
ಮಹಾಜನಂ ಮೂವತ್ತಯ್ವರುಮಿಱ್ದು.[80]

ಈ ಮಹಾಜನರನ್ನು ಜನರು ಗೌರವಿಸುತ್ತಿದ್ದ ಬಗೆಯನ್ನು ತಿಳಿಸುತ್ತದೆ.

ಹಳೇಬನ್ನೂರಿನ ಕ್ರಿ.ಶ. ೧೦೮೧ ರ ಶಾಸನದಲ್ಲಿ ಬನ್ನಿವೂರ ಮಹಾಜನ ದೇವರ ನಿವೇದ್ಯಕ್ಕೆ ಬಿಟ್ಟ ಭೂಮಿಯನ್ನು ಉಲ್ಲೇಖಿಸುತ್ತದೆ.[81] ಕ್ರಿ.ಶ. ೧೦೮೨ ರ ಶಾಸನದಲ್ಲಿ ಕುರ್ತುಕೋಟಿಯ ಊರೊಡೆಯನು, ಪ್ರಮುಖ ೨೦೦ ಮಹಾಜನರು ಮತ್ತಿತರರು ಕಡಲಗೆರೆಗೆ ಪುನರ್ದತ್ತಿಯಾಗಿ ಕೊಟ್ಟ ದಾನದ ಉಲ್ಲೇಖವಿದೆ.

ಪೂಜಾರ್ತ್ಥವಾರಾವುಳ . . . ನೇಕ ಗುಣಗಣಾಳಂ
ಕೃತ ಮುಖ ಕಮಳ ವಿನಿರ್ಗ್ಗತ ವೇದ ವೇದಾಂಗೋ
ಪಾಂಗಾನೇಕ ಶಾಸ್ತ್ರಾಷ್ಟಾದಶಸ್ಮೃತಿ ಪುರಾಣ... ಕ್ಷಣ
ರ್ಯ್ಯಮನಿಯಮಸ್ವಾಧ್ಯಾಯ ಧ್ಯಾನಧಾರಣ
ಮೌನಾನುಷ್ಠಾಣ ಪರಾಯಣವ್ವಿದಿತ ವೇದಾರ್ತ್ಥ
ವಿದ್ಯಾಪಾರಗರ್ ಷಟ್ಕರ್ಮ್ಮನಿರತರ್ಸ್ಸಪ್ತ . ಸೋಮ
ಸಂಸ್ಥಾವ ಭೃಥಾವಗಾಹನ ಪವಿತ್ರೀಕ್ರಿತ ಶರೀರ
ರ್ಪ್ಪರಮ ಪರೋಪಕಾಗಳಾಶ್ರಿತ ಜನಕಲ್ಪವೃಕ್ಷ
ರೇಕವಾಕ್ಯರ್ದ್ದುಷ್ಟ ನಿಗ್ರಹ ವಿಶಿಷ್ಟ ಪ್ರತಿ ಪಾಳಕರಪ್ಪ ॥[82]

ಬಹುಶಃ ಹಿಂದೆ ಯಾರೋ ಕಡಲಗೆರೆಗೆ ದಾನ ನೀಡಿದ್ದು ಅದು ಕಾರಣಾಂತರದಿಂದ

I

ನಿಂತು ಹೋಗಿರಬೇಕು. ಆ ನಿಂತು ಹೋಗಿರುವ ಪೂಜಾಕಾರ್ಯಗಳನ್ನು ಮುಂದುವರಿಸುವಂತೆ ಹೇಳಲಾಗಿದೆ.

ಹೀಗೆ ಮಹಾಜನರಾದ ಈ ಬ್ರಾಹ್ಮಣರು ಆಯಾ ಗ್ರಾಮ ಮತ್ತು ಊರುಗಳಲ್ಲಿ ನಡೆಯುತ್ತಿದ್ದ ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಕೆಲಸಗಳನ್ನು ತಮ್ಮ ನಿಷ್ಠೆಯಿಂದ ಪ್ರತಿ ಪಾಲಿಸಿಕೊಂಡು ಬರುತ್ತಿದ್ದವರು. ಈ ಕೆಲಸಗಳು ಮಹಾಜನರ ಘನತೆ ಗೌರವವನ್ನು ವ್ಯಕ್ತ ಪಡಿಸುತ್ತದೆ.

## ಸ್ತ್ರೀಯರು

ಮನುಧರ್ಮ ಶಾಸ್ತ್ರದಲ್ಲಿ ಸ್ತ್ರೀಯರು ವಿದ್ಯೆ ಕಲಿಯುವುದಕ್ಕಿಂತ ಉತ್ತಮ ಗೃಹಿಣಿಯಾಗಿ, ತಾಯಿಯಾಗಿದ್ದರೆ ಸಾಕೆಂಬಂತೆ ಹೇಳಲಾಗಿದೆ. ಅದರಂತೆ ಸ್ತ್ರೀಯರಿಗೆ ವಿದ್ಯೆ ಏಕೆ ಬೇಕೆಂಬ ಅಜ್ಞಾನ ಬೆಳೆದು ಬಂತು. ಮುಂದೆ ಜನಸಾಮಾನ್ಯರು ಈ ತಿಳುವಳಿಕೆಯಿಂದ ಹೊರಬರಲಿಲ್ಲ. ಅದರೆ ರಾಜ ಮನೆತನದಲ್ಲಿ ಮಂತ್ರಿಗಳೂ ದಂಡನಾಯಕರು ಮುಂತಾದ ದೊಡ್ಡ ದೊಡ್ಡ ಅಧಿಕಾರಿಗಳ ಮನೆತನದ ಹೆಣ್ಣು ಮಕ್ಕಳಿಗೆ ಇಂತಹ ನಿರ್ಬಂಧವಿರಲಿಲ್ಲ. ಮನೆಗೆ ಬಂದು ಹೇಳಿಕೊಡುವ ಉಪಾಧ್ಯಾಯರುಗಳ ಮೂಲಕ ಕಲಿತು ವಿದ್ಯಾವಂತರಾಗುತ್ತಿದ್ದರು. ಶ್ರೀಮಂತರ ಮನೆಗಳಲ್ಲಿ ವಿದ್ಯೆಯ ಜೊತೆಗೆ ಸಂಗೀತ ಮುಂತಾದ ಸಾಂಸ್ಕೃತಿಕ ಅಧ್ಯಯನಕ್ಕೆ ಹೆಚ್ಚಿನ ಆದ್ಯತೆಯೂ ಇತ್ತು. ಹೀಗೆ ರಾಜರ ಮತ್ತು ಶ್ರೀಮಂತರ ಮನೆಗಳಲ್ಲಿ ಸ್ತ್ರೀಯರು ತಕ್ಕ ಮಟ್ಟಿಗೆ ವಿದ್ಯಾವಂತರಾಗಿ, ಕಲೆಗಳಲ್ಲಿ ಪರಿಣತಿ ಪಡೆದ ಉದಾಹರಣೆಗಳಿವೆ.

ಕರ್ನಾಟಕವನ್ನು ಆಳಿದ ಶಾತವಾಹನರ ಕಾಲದಲ್ಲಿ ಶಾತವಾಹನ ಅರಸರು ತಮ್ಮ ತಾಯಿಯ ಹೆಸರನ್ನು ತಮ್ಮ ಹೆಸರಿನೊಂದಿಗೆ ಸೇರಿಸಿಕೊಳ್ಳುವ ಮೂಲಕ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದರೆಂಬುದನ್ನು ತಿಳಿಯಬಹುದಾಗಿದೆ. ಶಾತವಾಹನರ ಕಾಲದಲ್ಲಿ ಅನೇಕ ರಾಣಿಯರು ವಿವಿಧ ದಾನ-ಧರ್ಮಗಳನ್ನು ಮಾಡಿರುವುದು ಶಾಸನಗಳಿಂದ ತಿಳಿಯಬಹುದು. ಬನವಾಸಿಯ ನಾಗಸಿರಿ (ನಾಗಶ್ರೀ) ಶಾಸನದಲ್ಲಿ ಆಕೆ ತಾನು ಯುವರಾಜ ಮಾತೆಯೆಂದು ಹೇಳಿಕೊಂಡಿದ್ದಾಳೆ. ಈಕೆ ನಾಗಪ್ರತಿಮೆ ಕೆರೆ ಮತ್ತು ವಿಹಾರಗಳನ್ನು ಮಾಡಿಸಿ ದಾನ ಮಾಡಿದ ಉಲ್ಲೇಖವಿದೆ. ಶಾತವಾಹನರ ನಂತರ ಆಳ್ವಿಕೆ ಮಾಡಿದ ಪ್ರಾಚೀನ ಪಲ್ಲವ ಅರಸರ ಶಾಸನಗಳಲ್ಲಿ ರಾಣಿಯರ ಉಲ್ಲೇಖ ಬಂದಿದ್ದರೂ ಆಡಳಿತಾತ್ಮಕವಾಗಿ ಅವರು ವಹಿಸಿದ ಪಾತ್ರದ ಬಗ್ಗೆ ಮೌನವಾಗಿದೆ.

ಬಾದಾಮಿ ಚಲುಕ್ಯರ ಆರಂಭದ ಶಾಸನಗಳಲ್ಲಿ ಸ್ತ್ರೀಯರು ಆಡಳಿತದಲ್ಲಿ ವಹಿಸಿದ ಪಾತ್ರದ

ಬಗ್ಗೆ ಹೆಚ್ಚು ತಿಳಿಯದಿದ್ದರೂ ಒಂದನೆಯ ವಿಕ್ರಮಾದಿತ್ಯನ ನಂತರದ ಶಾಸನಗಳಲ್ಲಿ ಚಾಲುಕ್ಯ ವಂಶದ ಅನೇಕ ರಾಣಿಯರು ಪಟ್ಟದ ಕಲ್ಲು ಮುಂತಾದ ಕಡೆ ಅನೇಕ ವಾಸ್ತು ರಚನೆಗಳನ್ನು ರಚಿಸಿರುತ್ತಾರೆ.

ಕದಂಬರ ಸಮಕಾಲೀನರಾಗಿ ದಕ್ಷಿಣ ಕರ್ನಾಟಕವನ್ನು ಆಳಿದ ಗಂಗ ಅರಸರ ಶಾಸನಗಳಲ್ಲಿ ರಾಣಿಯರು ರಾಜನಂತೆ ಸ್ವತಂತ್ರ ಸಮಾನ ಮನಸ್ಕಳಾಗಿ ಅನೇಕ ದೇವಾಲಯ ಕೆರೆ ಮುಂತಾದವುಗಳ ರಚನೆ ಮಾಡಿರುತ್ತಾರೆ. ಶಿಕ್ಷಣದಲ್ಲಿ ಕಾವ್ಯ, ವ್ಯಾಕರಣ, ನಾಟಕ, ಭರತನಾಟ್ಯ, ಸಂಗೀತ ಹಾಗೂ ಇತರ ವಾದ್ಯ ಸಂಗೀತಕ್ಕೆ ಪ್ರೋತ್ಸಾಹವಿತ್ತು. ಪ್ರಮುಖ ವಾಸ್ತುರಚನೆಗಳನ್ನು ಮತ್ತು ದಾನಗಳನ್ನು ಮಾಡಿದ ಉಲ್ಲೇಖಗಳು ಬರುತ್ತದೆ. ಸಿಂಹ ವಿಷ್ಣುವಿನ ತಾಯಿ (ಅವನೀತನ ತಂಗಿ?) ಗಂಗವಾಡಿ ಪ್ರದೇಶದಲ್ಲಿ ಬಸದಿಯನ್ನು ಕಟ್ಟಿಸಿದ ಮತ್ತು ಅದಕ್ಕೆ ದಾನ ನೀಡಿದ ಉಲ್ಲೇಖವಿದೆ. ಅಲ್ಲದೆ ಗಂಗ ವಂಶದ ಅನೇಕ ರಾಣಿಯರು ಗಂಗವಾಡಿ–೯೬೦೦೦ ಪ್ರದೇಶದ ಒಳಗೆ ಕೆಲವು ಗ್ರಾಮಗಳ ಆಳ್ವಿಕೆ ಮಾಡುತ್ತಿದ್ದುದು ಶಾಸನಗಳಿಂದ ತಿಳಿಯುತ್ತದೆ.

ಹೀಗೆ ರಾಜವಂಶದ ಸ್ತ್ರೀಯರು ಅಗ್ರಹಾರ, ದೇವಸ್ಥಾನ, ಬಸದಿ, ಕೆರೆ–ಕಟ್ಟೆಗಳನ್ನು ಕಟ್ಟಿಸಿ ಅವಕ್ಕೆ ದಾನ ಕೊಟ್ಟ ಉಲ್ಲೇಖಗಳು ಶಾಸನಗಳಲ್ಲಿ ಬರುತ್ತವೆ. ನೊಳಂಬ ಪಲ್ಲವ ವಂಶದವರು ಆರಂಭದಲ್ಲಿ ಗಂಗರ ಸಾಮಂತರಾಗಿ, ಕರ್ನಾಟಕದ ಸುಪ್ರಸಿದ್ಧ ಮಾಂಡಲೀಕರಾಗಿ ಸುಮಾರು ೩೦೦ ವರ್ಷಗಳಷ್ಟು ದೀರ್ಘಕಾಲ ಆಳ್ವಿಕೆ ಮಾಡಿದರು.

ನೊಳಂಬ ವಂಶದ ಅರಸರ ಪತ್ನಿಯರು ನೊಳಂಬವಾಡಿಯನ್ನು ಆಳುತ್ತಿದ್ದ ಅರಸರ ಕೈಕೆಳಗೆ ನೊಳಂಬವಾಡಿಯ ಕೆಲವು ಪ್ರದೇಶಗಳನ್ನು ಆಳ್ವಿಕೆ ಮಾಡುತ್ತಾ ದೇವಾಲಯಗಳನ್ನು, ಕೆರೆ–ಕಟ್ಟೆಗಳನ್ನು ನಿರ್ಮಿಸಿದ ಉಲ್ಲೇಖಗಳು ಶಾಸನದಲ್ಲಿ ಸಿಕ್ಕುತ್ತವೆ. ಅಲ್ಲದೆ ಧಾರ್ಮಿಕ ತಾರತಮ್ಯವಿಲ್ಲದೆ ವಿಷ್ಣು, ಶಿವ, ಜೈನಬಸದಿಗಳಿಗೆ ದಾನ ನೀಡಿದ ಉಲ್ಲೇಖಗಳು ವಿಪುಲವಾಗಿವೆ. ಇಂತಹ ಧಾರ್ಮಿಕಕಾರ್ಯಗಳನ್ನು ಅರಸು ಮನೆತನದ ಸ್ತ್ರೀಯರು ಮಾತ್ರವಲ್ಲದೆ ಜನ ಸಾಮಾನ್ಯರೂ ಸಹ ಕೆರೆಗಳಿಗೆ ತೂಬು ಇಡಿಸುವ, ದೇವಾಲಯಗಳ ಜೀರ್ಣೋದ್ಧಾರ ಮಾಡಿಸಿದ ಹಾಗೂ ದಾನ ದತ್ತಿಗಳನ್ನು ನೀಡಿದ ಉದಾಹರಣೆಗಳು ಶಾಸನಗಳಲ್ಲಿ ಉಲ್ಲೇಖವಾಗಿವೆ.

ನೊಳಂಬರ ಆರಂಭದ ಶಾಸನಗಳಲ್ಲಿ ಸ್ತ್ರೀಯರು ಸಣ್ಣ ಪ್ರದೇಶಗಳನ್ನು ಆಳುತ್ತಿದ್ದ ಬಗ್ಗೆ ಉಲ್ಲೇಖವಿದೆ. ಸಿಂಗಮುತ್ತರಸನ (ಸಿಂಗಪೋತರ) ಕಾಲದಲ್ಲಿ ಮಾದವೆಯೆಂಬುವವಳು ಆಳುತ್ತಿದ್ದಂತೆಯೂ ಹಾಗೂ ಪಲ್ಲವಾದಿಯರಸನ ಪತ್ನಿ ಗವಣಬ್ಬೆ ಮದರಿಕಲ್ಲನ್ನು ಆಳುತ್ತಿದ್ದಂತೆಯೂ ಉಲ್ಲೇಖವಿದೆ.[83] ಗವಣಬ್ಬೆಯು ಮದರಿಕಲ್ಲಿನ ಗವಣೇಶ್ವರವೆಂಬ ಶಿವಾಲಯದ (ನಾಗಮಾರಬೆ ಎಂಬುವವಳು ಮಾಡಿಸಿದ್ದ) ನಿರ್ವಹಣೆಗಾಗಿ ಭೂದಾನ ಮಾಡಿದ ಉಲ್ಲೇಖವಿದೆ.[84] ಚಿಕ್ಕಮಧುರೆಯ

ಕ್ರಿ.ಶ.ಸು. ೮೦೦ ರ ಶಾಸನದಲ್ಲೂ ಸಿಂಗಮುತ್ತರಸನ ಮಗನ ಆಳ್ವಿಕೆಯಲ್ಲಿ ಮಾರಬ್ಬೆಯು ಶಿವಾಲಯ ಕಟ್ಟಿಸಿದ ಉಲ್ಲೇಖವಿದೆ.[85] ಕ್ರಿ.ಶ.ಸು. ೮೮೦ ರ ಶಾಸನದಲ್ಲಿ ಒಂದನೆಯ ಮಹೇಂದ್ರನು ಬರಗೂರಿನಲ್ಲಿ ಬೀಡು ಬಿಟ್ಟಿದ್ದಾಗ ಅವನ ಪತ್ನಿಯರಾದ ಬಿಜಮಹಾದೇವಿ, ಪರಮಮಹಾದೇವಿ, ಅಕ್ಕಬ್ಬೆ ಮತ್ತು ತ್ರೈಲೋಕವ್ವೊಬಿಲನ್ನು ಆಳುತ್ತಿದ್ದಂತೆಯೂ ಆ ಗ್ರಾಮಗಳ ದೇವಾಲಯ ಮತ್ತು ಬಸದಿಗೆ ದಾನ ಕೊಟ್ಟ ಉಲ್ಲೇಖವಿದೆ.[86] ಬರಗೂರು ಪೊಳಲಿನಾಡಿನಲ್ಲಿತ್ತೆಂದು ಇನ್ನೊಂದು ಶಾಸನ ಹೇಳುತ್ತದೆ.[87]

ಬರಗೂರಿನ ಕ್ರಿ.ಶ.೯೧೯ರ ಶಾಸನದಲ್ಲಿ ಅಯ್ಯಪದೇವನ ಮನೋನಯನ ವಲ್ಲಭೆಯರಾದ ನಾಗಿಯಬ್ಬೆ, ಹೇಲೆಯಬ್ಬೆಯರು ಬರಗೂರಿನ ಮೂಲಸ್ಥಾನದ ಎರಡು ದೇವಾಲಯದ ಪೆಂಜೇರುವಿನ ಪಂಚಮಠಕ್ಕೆ ಮತ್ತು ಬರಗೂರಿನ ಮಹೇಂದ್ರೇಶ್ವರನಿಗೆ ದಾನ ಮಾಡಿದಂತೆಯೂ ಮತ್ತು ನಾಗಿಯಬ್ಬೆಯ ಅಬ್ಬೆ (ತಾಯಿ) ನಾರಣಬ್ಬೆಯು ಕೆರೆಕಟ್ಟಿಸಿದ್ದನ್ನು ತಿಳಿಸುತ್ತದೆ.[88] ಕ್ಯಾಲನೂರಿನ ಕ್ರಿ.ಶ.ಸು ೯೨೫ ರ ಅಯ್ಯಪ್ಪದೇವನ ಕಾಲದ ಶಾಸನದಲ್ಲಿ ಕೆರೆನೂರ ೫೨ ಮಹಾಜನರು 'ಇಪ್ಪತ್ತು ಗದ್ಯಾಣ ಪೊನ್ನೊಟ್ಟು ಪಡೆದರ್ ನಿಚ್ಚಲೊಂನ್ದು ಪರಿವಡಿಯಂ ನವರ್ಗ್ಗೆ ಅಯ್ವದಿಂಬರಲ್ಲಿಯೆಚ್ಚಿಂ ನಡೆಯಿಸಲಸಲ್ವೊರ್...' ಈ ಧರ್ಮ್ಮಂ ಇರುಗಮ್ಮಯ್ಯಗೊನ್ದು ಮದುಕಮಯ್ಯಂಗಂ ಅವ್ವಬ್ಬೆಗೆ ಒನ್ದು ಭಾಗಂ ಸಲ್ವುದು ಎಂದಿದೆ. ಇದರಿಂದ ಒಂದು ಊರಿನ ದೇವಸ್ಥಾನ ಕೆರೆ ಇತ್ಯಾದಿಯ ನಿರ್ವಹಣೆಯಲ್ಲಿ ಒಬ್ಬ ಸ್ತ್ರೀಯನ್ನು ಹೆಸರಿಸಿದುವುದನ್ನು ನೋಡಿದರೆ ಸ್ತ್ರೀಗೂ ಸಹ ಪುರುಷರಷ್ಟೆ ಪ್ರಧಾನ ಗೌರವಿತ್ತೆಂಬುದನ್ನು ಈ ಶಾಸನ ಸೂಚಿಸುತ್ತದೆ.[89] ಆವನಿಯ ಇದೇ ಕಾಲದ ಶಾಸನದಲ್ಲಿ 'ಸಂಗಮಜ್ಜದ ಮೊಮ್ಮಗಳ್ ಮೇಲಕೆರಿ ಒಡೆಯ ದುಗ್ಗಬ್ಬೆ ತುಮ್ಬು' ಮಾಡಿಸಿದ ಉಲ್ಲೇಖವಿದೆ. ಈಕೆ ಬಹುಶಃ ಅರಸು ಮನೆತನದ ಸ್ತ್ರೀಯಾಗಿರದೆ ಜನ ಸಾಮಾನ್ಯಳಾಗಿರಬಹುದು.[90] ಧಾರ್ಮಿಕ ಕೆಲಸಕಾರ್ಯಗಳಲ್ಲಿ ಸ್ತ್ರೀಯರೂ ಹಿಂದೆ ಬಿದ್ದಿರಲಿಲ್ಲವೆಂಬುದನ್ನು ಇದು ಸೂಚಿಸುತ್ತದೆ. ಧರ್ಮಪುರಿಯ ಕ್ರಿ.ಶ. ೯೨೯ರ ಶಾಸನದಲ್ಲಿ ಪೊಲ್ಲಬ್ಬರಸಿಯ ಮಗ ಅಣ್ಣಿಗ ಮತ್ತು ಚಾಳುಕ್ಯ ರಾಜಕುಮಾರಿ ಅತ್ತಿಯಬ್ಬರಸಿಯ ಮಗ ಇರುಳಚೋರನು ಆಳುತ್ತಿರುವಾಗ 'ಮಾಜ್ಞಬ್ಬೆ ಕನ್ತಿಯ' ಉಲ್ಲೇಖವಿದೆ. ಈಕೆ ಒಬ್ಬ ಜೈನ ಸನ್ಯಾಸಿನಿ[91] ಎಂಬುದನ್ನು ತಿಳಿಸುತ್ತದೆ. ಈಕೆ ಯಾವ ಉದ್ದೇಶದಿಂದ ಶಾಸನೋಕ್ತಳಾಗಿದ್ದಾಳೆಂದು ತಿಳಿದುಬರುವುದಿಲ್ಲ.

ಹೆಬಟ ಗ್ರಾಮದ ಕ್ರಿ.ಶ.೯೫೦ ದಿಲೀಪ ನೊಳಂಬನ ಕಾಲದ ಶಾಸನದಲ್ಲಿ 'ಕೊಣ್ಡಲಗಾಮುಣ್ಡರ ಮಗಳನ್ಮಾರಿಯರ್' ಎಂಬುವವಳು ತೊಮ್ಬು ಮಾಡಿಸಿದ್ದನ್ನು ಹೇಳುತ್ತದೆ.[92] ಕಂಚುಗಾರ ಬೆಳಗಲ್ಲುವಿನ ಕ್ರಿ.ಶ. ೯೮೧ ರ ಶಾಸನದಲ್ಲಿ ವೀರನೊಳಂಬ ಪಲ್ಲವಪೆಮ್ಮಾನಡಿದೇವನ ಮಹಾದೇವಿಯಾದ ಶ್ರೀಮದ್ದರೇವಲದೇವಿಯ ಉಲ್ಲೇಖ ಬಂದಿದ್ದು ದೇವರಿಗೆ ದಾನ ಕೊಟ್ಟದ್ದನ್ನು ಹೇಳುತ್ತದೆ.[93] ಆವನಿ ಗ್ರಾಮದ ಕ್ರಿ.ಶ.ಸು. ೯೮೨ ರ ಶಾಸನದಲ್ಲಿ ದೀವಬ್ಬರಸಿಯು ನೊಳಿಮ್ಬ ನಾರಾಯಣೇಶ್ವರವನ್ನು ಮಾಡಿಸಿ ಎಳನಗರವನ್ನು ಸರ್ವ್ವಭಾದಾ ಪರಿಹಾರವಾಗಿ ನೀಡಿದಳು.[94]

ಈ ಶಾಸನದಲ್ಲಿ ಬರುವ ದೀವಬ್ಬರಸಿಯು ಕದಂಬವಂಶದ ರಾಜಕುಮಾರಿಯಾಗಿ ನೊಳಂಬ ಪಲ್ಲವ ವಂಶದ ಇಮ್ಮಡಿ ಪೊಱಲ್ಚೋರನ ಪತ್ನಿಯಾಗಿ ಮತ್ತು ಹಿರಿಯ ಮಗ ಇಮ್ಮಡಿ ಮಹೇಂದ್ರನು ಅಕಾಲ ಮೃತ್ಯುವಶನಾದಾಗ ಕಿರಿಯ ಮಗನ ಪರವಾಗಿ ಪೊಱರಮಂಗಲದಲ್ಲಿ ಕೆಲವು ಕಾಲ ಆಳ್ವಿಕೆ ಮಾಡುತ್ತಾಳೆ. ಶಾಸನದಲ್ಲಿ ಈಕೆಯ ಗುಣ, ರೂಪಗಳನ್ನು ಕವಿ ಕಾವ್ಯರೂಪದಲ್ಲಿ ವ್ಯಕ್ತಪಡಿಸಿದ್ದಾನೆ.

ನೆಟ್ಟನೆ ಕದಂಬ ವಂಶಂ
ಪುಟ್ಟಿದ ಮನೆ ಪಲ್ಲವೇನ್ದ್ರನಿಱುವ ನೊೞಂಬಂ
ಪುಟ್ಟಿದ ಮಗನಿಗೆ ಮುಗಿಲಂ
ಮುಟ್ಟೆಪುದಂ ಪೆಂಪು ದೀವಳಬ್ಬರಸಿಯರ ॥

ಸ್ವಸ್ತಿಶ್ರೀಮದನೇಕ ದಿವ್ಯಗುಣಸಾನ್ದಯಾಸಾಯತಾ
ಭೂಲೋಕಾಗ್ರ್ಯ ಕದಂಬ ವಂಶ ತಿಲಕಾಸದ್ಭಿಸ್ಸದಾವನ್ದಿತಾ
ಶ್ರೀಮದ್ರಾಜ ಮನೋಜ ಭೂಪಮಹಿಷೀದಿವಾಂಬಿಕಾ
ವಿಶ್ರುತಾ ಪೂತಾನೂತ ಪತಿವ್ರತಾಸ್ತುತ ಗುಣಾದೇದೀಪ್ಯ ಮಾನಾಜನಿ ॥

ಕೃತ್ವಾ ದೇವಾಯತ ನಮ್ಮಹೇಶ್ವರಾಪ್ಪಣಮನನ್ತ ಪಾಪ
ವಿನಾಶ ಘಂಟಾ ದೀವಾಂಬಕಾಯಾ ನೊೞಂಬ ನಾರಾಯಣೇಶ್ವರಾಯ ಸುದತ್ತಾ॥

ಸದ್ವೀತೀರ್ಣ್ಣನ... ಶಶಿ: ಕತಿಮನೋಹಾರಿಣೀ
ಸನ್ಮಾರ್ಗ್ಗಾರ್ಗ್ಗಳ ಭೇದಿನೀ ನಿರುಪಮಾ ಸತ್ಪಾತ್ರದಾನಾನ್ವಿತಾ ॥
ಸತ್ಕದಂಬ ಮಹಾನ್ವಯೇ ಸಮಭವದ್ದೇವೀಹ ದೀವಾಂಬಿಕಾ
ಕಿನ್ದಾತ್ರೀ ಮಕುಟಾಗ್ರ ಮಣ್ಡಿನಮಣಿಃ ಕಿಂಕಾಮದೇ... ॥

ಶ್ರೀ ವಧುಧರೆ ಪೊೞಲ್ಚೋ
ರಾವನಿಪಂಗಗ್ರಮಹಿಭವನಾಂಬಿಕೆ ವಾಕ್
ದೇವಿಯರ ದೊರೆಯರೆನಿಸಿದ
ದೀವಬ್ಬರಸಿಯರ ದೊರೆಗೆಟ್ಟಿರ್ ಪೆಱರೊಳರೆ ॥

... ಗುಣೋನ್ನತಿಯೊಪ್ಪಿನಿಂದರು
ನ್ದತಿ ದೊರೆ ದೀವಳಬ್ಬರಸಿಯರ್ಜ್ಜಗತೀತಳಕೇಂ ಪವಿತ್ರರೋ ॥

ಈ ಮೇಲಿನ ಶಾಸನದಲ್ಲಿ ಬಂದಿರುವ ವಾಗ್ದೇವಿ ಮತ್ತು ಭುವನಾಂಬಿಕೆ, ಎಂಬ ಮಾತುಗಳು ವಿದ್ಯೆ ಮತ್ತು ಧರ್ಮಗಳ ಬಗೆಗೆ ಆಕೆಗಿದ್ದ ಪ್ರೀತಿಯನ್ನು ಪ್ರತಿಬಿಂಬಿಸುತ್ತದೆ. ಅರುಂಧತಿ

ಎಂಬ ಮಾತು ಆಕೆಯ ಪತಿವ್ರತಾ ಧರ್ಮದ ಬಗ್ಗೆ ಮತ್ತು ಪ್ರಜೆಗಳಿಗೆ ಅವಳ ಮೇಲಿದ್ದ ಗೌರವ ಭಾವವನ್ನು ವ್ಯಕ್ತಪಡಿಸುತ್ತದೆ.

ಎಲ್ಲೂರು ಗ್ರಾಮದ ಕ್ರಿ.ಶ.೯೯೯ ರ ಶಾಸನದಲ್ಲಿ ನೊಳಂಬವಂಶದ ಪಲ್ಲವ ಕುಲತಿಲಕೆ ಸಮ್ಯಕ್ತ ರೋಹಿಣಿ ಕಲಿಕಾಲರುಗಿಣಿ ಪತಿವ್ರತೆ ಮಹೀಸುತೆ ಧರ್ಮ ಚಿನ್ತಾಮಣಿ ಸತ್ಯವಿಳಾಸಿನಿ ತ್ರಿಭುವನ ವೀರನೊಳಂಬಾಗ್ರಜನ್ಮೆಯಪ್ಪ ಶ್ರೀಪ್ರಿಥುವಬ್ಬರಸಿಯರುಂ ಶ್ರೀಪೆರ್ಮಾನಡಿಗಳುಂ ಎಲವಕ್ಕೂಲೂರು ಪನ್ನಿರ್ಬ್ಬರ್ಗ್ಗ, (೧೨ ಜನರಿಗೆ) ದಾನ ಬಿಟ್ಟ ಉಲ್ಲೇಖವಿದೆ.[95] ಗೊನೆಹಾಳು ಗ್ರಾಮದ ಕ್ರಿ.ಶ.೧೦೧೪ ರ ಶಾಸನದಲ್ಲಿ ಇರಿವ ನೊಱಂಬಾಧಿರಾಜನ ಪತ್ನಿ ಪಿರಿವಬ್ಬರಸಿ ಮಹಾಕಾಳದೇವರಿಗೆ ದಾನ ನೀಡಿದ ಉಲ್ಲೇಖವಿದೆ.[96] ಮರೋಳಿನ ಕ್ರಿ.ಶ. ೧೦೨೪ ರ ಶಾಸನದಲ್ಲಿ ಘಟೆಯಂಕಕಾರನ ಆಳ್ವಿಕೆಯಲ್ಲಿ ಅವನ ಪತ್ನಿ ಹಾಗೂ ಇರಿವಬೆಡಂಗ ಸತ್ಯಾಶ್ರಯನ ಮಗಳಾಗಿದ್ದ ಮಹಾದೇವಿಯು ಮರುವೊಳಲನ್ನು ಆಳುತ್ತಿದ್ದು ಅಲ್ಲಿಯ ಬಸದಿಗೆ ದಾನ ನೀಡಿದ ಉಲ್ಲೇಖವಿದೆ.[97]

ಈ ಶಾಸನದಲ್ಲಿ ಮಹಾದೇವಿಯನ್ನು 'ರತ್ನ ಮುಕುಟಂ ಚೂಡಾಮಣಿ ಸಮಸ್ತದಾನ ಧರ್ಮ್ಮಾನುರಾಗ ಪ್ರಿಯೆ ಸತ್ಯೈಬ್ರತಯುಕ್ತಾಮೊದ ವಿದ್ಯಾಧರಿ ಸತ್ತಿಗನಣುಂಗಿ ರೂಪವಿಳಾಸೆ ಯತ್ಯುದಾರಸಾಳಿಹೆ ಗುಣರತ್ನನಿಧಾನೆ' ಎಂದು ಹೊಗಳಿದೆ. ಚಿಮ್ನಹಳ್ಳಿ ಕ್ರಿ.ಶ.೧೦೩೪ರ ಶಾಸನದಲ್ಲಿ ಜಗದೇಕಮಲ್ಲನೊಳಂಬ ಪಲ್ಲವ ಪೆಮಾ(ೞ)ನಡಿದೇವನು ಆಳುತ್ತಿರುವಾಗ 'ಮಲ್ಲಿಕಬ್ಬೆಯ' ಹೆಸರು ಉಲ್ಲೇಖವಾಗಿದೆ.[98] ತಲವಾಗಿಲಿನ ಇದೇ ಕಾಲದ ಶಾಸನದಲ್ಲಿ ಕಂಚಿಯುಬ್ಬೆಯು ತನ್ನ ಕೊಳಂಗೆಯ್ಯೊಳಗೆ ದೇವರ ನೈವೇದ್ಯಕ್ಕೆ ಬಿಟ್ಟ ಗದ್ದೆಯ ಉಲ್ಲೇಖವಿದೆ.[99]

ಓರುವಾಯಿ ಗ್ರಾಮದ ಕ್ರಿ.ಶ.೧೦೩೬ ರ ಎರಡು ಶಾಸನದಲ್ಲಿ ನೊಳಂಬನಣುಗಿ ಜಗದೇಕಮಲ್ಲದೇವನ ಮಹಿಷಿಯಾದ ದೇವಳದೇವಿ ಕಾಲವಶವಾದಾಗ ಅವಳ ಅಸ್ಥಿಯನ್ನು ಗಂಗೆಯಲ್ಲಿ ಬಿಟ್ಟು ಬಂದ ಬ್ರಾಹ್ಮಣರಾದ ಕೃಷ್ಣಯ್ಯ, ಮಾಧವಷಡಂಗಿಯರಿಗೆ ದಾನ ನೀಡಿದ ಉಲ್ಲೇಖವಿದೆ.[100] ಕೋಗಳಿಯ ಕ್ರಿ.ಶ.ಸು. ೧೦೪೫ ರ ಶಾಸನದಲ್ಲಿ ನನ್ನಿನೊಳಂಬನ ಆಳ್ವಿಕೆಯಲ್ಲಿ ಪರೋಕ್ಷವಿನಯಕ್ಕೆ ಬಿಟ್ಟ ಛತ್ರದ ದಾನ ನೀಡುವಾಗ ಪದ್ಮಾವತಿಯಬ್ಬೆಯ ಉಲ್ಲೇಖ ಬಂದಿದೆ. ಈಕೆ ನೊಳಂಬ ರಾಜ್ಯದಲ್ಲಿ ಅಧಿಕಾರಿ ನೊಳಂಬಸೆಟ್ಟಿಯ ಪತ್ನಿಯಾಗಿರಬೇಕು.[101] ಶಿರಸ್ತೆಹಳ್ಳಿ ಕ್ರಿ.ಶ. ೧೦೫೨ ರ ಶಾಸನದಲ್ಲಿ ನಾರಸಿಂಘದೇವನು ಆಳುತ್ತಿರುವಾಗ ಬೂತಬ್ಬರಸಿಯ ಉಲ್ಲೇಖವಿದೆ.[102] ಪುನಬುಘಟ್ಟದ ಕ್ರಿ.ಶ. ೧೦೫೨ ರ ಶಾಸನದಲ್ಲಿ ನಾರಸಿಂಘದೇವನ ಕಾಲದಲ್ಲಿ ಅವನ ಪತ್ನಿ ನೊಳಂಬ ಮಹಾದೇವಿಯು ಹೊಸಗೆರೆಯ ಮಹಾದೇವನಿಗೆ ದಾನ ನೀಡಿದ ಉಲ್ಲೇಖವಿದೆ.[103] ಅಸಗೋಡುವಿನ ಕ್ರಿ.ಶ.೧೦೫೪ ರ ಶಾಸನದಲ್ಲಿ ನಾರಸಿಂಘದೇವನ ಕಾಲದಲ್ಲಿ ಕಂಚಿಯಬ್ಬೆಗೆ ದಾನ ಕೊಟ್ಟ ಉಲ್ಲೇಖವಿದೆ.[104] ಹಿರೇಮ್ಯಾಗಳಗೇರಿ ಕ್ರಿ.ಶ. ೧೦೫೪ ರ ಶಾಸನದಲ್ಲಿ ಕದಂಬ ನಾಲ್ವರು

ಸೂಳೆಯರಿಗೆ ದಾನ ನೀಡಿದ ಉಲ್ಲೇಖವಿದೆ.[105] ನಂದಿಬೇವೂರಿನ ಇದೇ ಕಾಲದ ಶಾಸನದಲ್ಲಿ ಅಂದಜ್ಜಿಯಬ್ಬೆಯ ಉಲ್ಲೇಖವಿದೆ.[106] ಇಲ್ಲಿ ಬಂದ ಕೆಲವು ಸ್ತ್ರೀಯರ ಉಲ್ಲೇಖಗಳು ನೇರವಾಗಿ ಆಡಳಿತಕ್ಕೆ ಸಂಬಂಧಿಸಿಲ್ಲವಾದರೂ ಸಾಮಾಜಿಕವಾಗಿ, ಧಾರ್ಮಿಕವಾಗಿ ತೊಡಗಿಸಿಕೊಂಡವರೆಂದು ತಿಳಿಯಬಹುದು.

ಕಲ್ಕೇರಿಯ ಕ್ರಿ.ಶ.೧೦೭೬ರ ಶಾಸನದಲ್ಲಿ ವೀರನೊಳಂಬನ ಪತ್ನಿ ಮಾಳಲದೇವಿಯನ್ನು ದಾನಪ್ರಿಯೆ, ಯಶೋಪ್ರಿಯೆ ಎಂದು ಅವಳ ರೂಪವನ್ನು ಕವಿ ಕೆಳಗಿನ ಪದ್ಯಗಳಲ್ಲಿ ವರ್ಣಿಸಿದ್ದಾನೆ.

ಆಪ್ರಿಥ್ವೀವಲ್ಲಭನ ಮನಃಪ್ರಿಯೆ ಹರಚರಣಯುಗಳ
ಪುಟಪ್ರಿಯೆ ದಾನಪ್ರಿಯೆ ಮಾಳಲದೇವಿ ಯಶೋಪ್ರಿಯೆ
ನೆಗಱ್ದಿಳಖಿಳ ವಸುಧಾತಳದೊಳ್॥

ವಿಳಸ ಶ್ರೀರೂಪುಗೊಣ್ಡಿರ್ದ್ದಖಿಳ ವಸುಧೆಯಂ
ತಾಳ್ದಿತೆಂಬನ್ತೆವಾಕ್ ಶ್ರೀಲಳಿತಾಂಗದ್ಯೋತಿಯಿಂ ಭೂ
ವಳಯ ಮನೊಳಕೊಂಡಿರ್ದ್ದಳೆಂಬಂತೆ ಧಾತ್ರಿ
ತಳಮಂ ತನ್ನಾಜ್ಞೆಯಿಂ ಪೆರ್ಚ್ಚಿಸಲೇಸವ ಜಯಶ್ರೀ
ಯೆನಲ್ಮಿಕ್ಕ ಕಾಂತಾತಿಳಕಂ ಶ್ರೀರೂಪ ವಿದ್ಯಾದರಿಗೆ ಸ
ಮನಿ ಪಳಂನ್ಯ ಕಾಂತಾಕದಂಬಂ ॥

ಪದನಖಕೇಶಾಗ್ರಂಬರ
ಮೊದವಿದ ಮಾನ ಪ್ರಮಾಣ ಲಕ್ಷಣ ಮಂತು
ವ್ವಿದ ಚತುರಾಸ್ಸಂಗಂ ಬಾ
ರದು ಬರೆಯಲ್ ರೂಪುರೂಪ ವಿದ್ಯಾಧರಿಯ ॥

ಅಳಿಕುಳರುಚಿಯಂ ನೀಳೋ
ತ್ಪಳದಳಮಂ ಚಂದ್ರಬಿಂಬಮಂಪೊಂ
ಗಳ ಸಂಗಳ ಚೆಲ್ವನಿಭಗತಿಯ
ನಿಕ್ಕಳಿಗೊಣ್ಡುದು ರೂಪುರೂಪ ವಿದ್ಯಾಧರಿಯ ॥

ರೂಪಿಂ ಮಾಳಲದೇವಿಯ
ರೂಪನಿವರ್ಪ್ಪಾರೆಂದು ಪೇೞರುಂ ಕವಿಗಳ್
ರೂಪಂ ವ್ಯಾವರ್ಣ್ನಿಪರೆನೆ
ರೂಪನದೇವೊಗೞ್ವೆರೂಪ ವಿದ್ಯಾಧರಿಯ ॥

ರೂಪಿದು ವೀರನೊಳಂಬನ
ರೂಪಿಂಗನುರೂಪ ಮಿಂತಿದಕಿನ್ನಾರ್ಗಂ
ರೂಪದರದಿಂದ ಪ್ರತಿ

ರೂಪೆನಿಪುದು ರೂಪುರೂಪ ವಿದ್ಯಾಧರಿಯ ॥

ನಡುನಾಡರಸದ ಪೆರ್ದ್ದೊಱ
ನಡು ಪಳ್ಳಿಯ ಕಾಮದೇನುಮಂ ಗಣ
ದೊಳೆನಿಪ್ಪುದೆ ಪಣ್ತಕಲ್ಪತರುವೆಂ
ದಡದೇ ವಣ್ಣಿಪುದೋ ರೂಪ ವಿದ್ಯಾಧರಿಯ ॥

ಕರಜಳಧರ ಕಳಧೌತೋ
ತ್ಕರ ವರ್ಷದೆ ವಂದಿ ನಂದ ನಾವಳಿಗಳವಿ
ಸ್ತರಿಪುವೆನೆ ದಾನಮುಖಿಳೊ
ರ್ವ್ವರೆಗೆ ವಿಚಿತ್ರೋಕ್ತಿ ರೂಪವಿದ್ಯಾಧರಿಯ ॥

ಸತಿ ನಾಯಕಮಣಿ ತಾರೆಗೆ ಪೊಸ
ಮುತ್ತಿನ ಸೂಸುವಂ ಗಡಾ ಗೆಣ್ಡಿಸೆಗಂ
ಪಸರಿಸಿದ ಪಂದರೊಳ್ ನರ್ತ್ತಿಸುವಳ್
ಕೀ ಬಲೆ ರೂಪ ವಿದ್ಯಾಧರಿಯ ॥

ಶಾಸನ ಕವಿಯು ಮಾಳಲದೇವಿಯನ್ನು ೮-೧೦ ಪದ್ಯಗಳಲ್ಲಿ ಸಾಹಿತ್ಯದ ಭಾವ ಭಾಷೆಗಳಿಂದ ಕಾವ್ಯಮಯವಾಗಿ ವರ್ಣಿಸಿದ್ದಾನೆ.[107]

ಸೋಮುಪುರದ ಕ್ರಿ.ಶ. ೧೦೮೦ ರ ಶಾಸನದಲ್ಲಿ ವೀರನೊಳಂಬ ಪಲ್ಲವಪೆರ್ಮ್ಮಾಡಿ ಜಯಸಿಂಹದೇವನ ಕಾಲದ ರಾಯಭಾರಿ 'ಶಂಕರನ ಕುಳಾಂಗನೆ ಶ್ರೀಸಿರಿಗುಪ್ಪೆಯರ ಮಗಳರುನ್ಧತಿ ಪತಿಗಂ ಲೇಸು ಪತಿಬ್ರತಿಕೆಯಲು ಮಹಾಸತಿಯೆನೆ ಮಾಳಿಕಬ್ಬೆಯೆಂಬಳ್ಪೆಸರಿಂ' ಎಂದು ಹೊಗಳಿರುವ ಈ ಶಾಸನದಲ್ಲಿ 'ಮಾಳಿಕಬ್ಬೆ' ಎಂಬ ಹೆಸರಿನಿಂದ ಪ್ರಸಿದ್ಧಳಾದ ಈಕೆಯನ್ನು ಅರುದಂತಿಯಂತೆ ಪತಿವ್ರತೆ ಮಹಾಸತಿ ಎಂದು ಶಾಸನ ಕವಿ ಹೊಗಳಿದ್ದಾನೆ.[108]

ಮೇಲಿನ ನೊಳಂಬರ ಕಾಲದ ಶಾಸನಗಳ ಆಧಾರದಿಂದ ರಾಜವಂಶದ ಮತ್ತು ಅಧಿಕಾರಿಗಳ ಕುಟುಂಬದ ಮಹಿಳೆಯರು ಹಾಗೂ ಜನಸಾಮಾನ್ಯರ ವರ್ಗಕ್ಕೆ ಸೇರಿದ ಸ್ತ್ರೀಯರು ತಕ್ಕಮಟ್ಟಿನ ವಿದ್ಯಾವಂತರಾಗಿ, ಆಳ್ವಿಕೆಯನ್ನು ಮಾಡಿ ದಾನ ಧರ್ಮಗಳನ್ನು ಮಾಡಿ ಸಾಮಾಜಿಕ ಕಳಕಳಿಯನ್ನುಳ್ಳವರಾಗಿದ್ದರೆಂದು ಹೇಳಬಹುದು.

ನೊಳಂಬರ ಕಾಲದ ಶಾಸನ ಕವಿಗಳಲ್ಲಿ ಕೆಲವರು ಮಾತ್ರ ತಮ್ಮ ಹೆಸರುಗಳನ್ನು ಹೇಳಿಕೊಂಡಿದ್ದಾರೆ. ಕ್ರಿ.ಶ.೧೦೬೮ರ ನೊಳಂಬ ಪಲ್ಲವ ಪೆರ್ಮ್ಮಾಡಿ ಜಯಸಿಂಗದೇವನ ಕಾಲದ ಒಂದು ಶಾಸನದ ರಚನಾಕಾರ 'ಬರಪದೊಳ್ ಹಸ್ತಿಸಿಂಗಂ ಹರಿಣಿಯ ರೊಹಗೆಯಕ್ಷರಾವಳಿಯಿಂದಂ ಬರೆಯಲತಿಜಾಣನಿಂದಡೆ ಪುರುಡಿಸವಿಡೆಲೇವೊ ರೇವಣಾರ್ಯ್ಯನೊಳೆಂದುಂ। ದೆಂಟಣಿಸಿ ಬರೆವನೆಲೆ

ಜ್ಯಾತ್ಥಕ ನಿನ್ನಳವೊ ಚಿತ್ರದ ಕರದೊಳ್ಪಂ ಕಂಟ್ಟದೊಳ್ ಬರೆವನ ಕಂಟ್ಟ್ಕಳೆಸಿ ನೋಪ್ಪೋರ್ಡಂದೇಕೈಕಂ । ನಾಕೋಜಂ ಸಿವಪಾದಶೇಖರಂ ।' ಎಂದು ಹೇಳಿಕೊಂಡು ಕವಿ ಕುಮಾರವ್ಯಾಸನನ್ನು ನೆನಪಿಗೆ ತರುತ್ತಿದ್ದಾನೆ.[108A]

## ಇತರರು

ಸತ್ತೂರಿನ ಕ್ರಿಶ ೧೦೪೪ ರಲ್ಲಿ ನನ್ನಿನೊಳಂಬನ ದಂಡ ನಾಯಕ ಮಾರ್ತ್ತಣ್ಡಯ್ಯನ ಅಳಿಯ ಸೋವಿಮಯ್ಯನಿಗೆ ಸತ್ತಿಯೂರಿನ ಒಡೆತನ ಇರುತ್ತದೆ.[109] ಹಾವಿನಹಾಳು ವೀರಾಪುರದ ಕ್ರಿ.ಶ. ೧೦೪೫ ರ ಶಾಸನದಲ್ಲಿ ನನ್ನಿನೊಳಂಬನ ಆಳ್ವಿಕೆಯಲ್ಲಿ ಉದಯಾದಿತ್ಯ ಸಿನ್ದರಸನು ದೊಣ್ಡವಟ್ಟಿಯ ಊರೊಡೆಯ ಪಾಲಿಮಯ್ಯನು ಸೇರಿ ಮನ್ನೆಯ ಸಾಮ್ಯದ ತೆರಿಗೆಯೆಲ್ಲವನ್ನು ಬಿಟ್ಟು ಸಿನ್ದರ ಹೊಲೆಗೆರೆಯನ್ನು ಬಿಟ್ಟು ಕೊಡುತ್ತರೆ.[110] ಅರಕೆರೆಯ ಶಾಸನದಲ್ಲಿ ಕೇಸಿಮಯ್ಯ ಎಂಬುವವನು ಅರಕೆರೆಯ ಉರೊಡೆಯನಾಗಿರುತ್ತಾನೆ.[111] ಶಿರಸ್ತಹಳ್ಳಿಯ ಕ್ರಿ.ಶ. ೧೦೫ ೦ರಲ್ಲಿ ನಾದಸಿಂಘದೇವ ಆಳುತ್ತಿರುವಾಗ ಮನ್ನೆಯ ಬೂತಬ್ಬರಸಿಯರ ಕೋಕರಸನು ಊರೊಡೆಯ ಪುಟ್ಟಿಯಣ್ಣ ಪ್ರಮುಖ ೧೨೦ ಮಹಾಜನರ, ಅರವತ್ತೊಕ್ಕಲಿನವರೆಲ್ಲಾ ಸೇರಿ ದಾನ ಮಾಡಿದರು.[112] ತಳಕಲ್ಲಿನ ಶಾಸನದಲ್ಲಿ ಮಹಾಸಾಮಂತ ಬರ್ಮಿದೇವರಸನು ಕೋಗಳಿ-೫೦೦ರ ಕಂಪಣಸೋಗೆ-೧೨ರ ಬಳಿಯ ಅಗ್ರಹಾರವನ್ನು ತೋಣುಕಯ ಹಲುಮಯಿ-೧೨ ರ ಬಳಿಯ ನಿಟ್ಟೂರು ಬಸಿಕೋಡನ್ನು ಆಳುತ್ತಿದ್ದ ಚಾಮುಂಡಯ್ಯನು ಸೇರಿ ಅನೇಕ ಕಾಲ ಹಾಳಾಗಿದ್ದ ಗುಂಡಿ ಕೆರೆಯನ್ನು ಕಟ್ಟಿಸಿ ಅದಕ್ಕೆ ದಾನ ಕೊಟ್ಟದ್ದನ್ನು ಹೇಳುತ್ತದೆ.[113] ನಂದಿಬೇವೂರಿನ ಶಾಸನದಲ್ಲಿ ನಾರಸಿಂಘದೇವನ ಪಂಚಪ್ರಧಾನರ ಅನುಮತಿಯಿಂದ ನಂದಿಬೇವೂರಿನ ಒಡೆಯರಾದ ಸಿವಾಮಯ್ಯ, ಮಾಳಿಮಯ್ಯ, ಮರುಳಿಮಯ್ಯ, ನಾರಣಮಯ್ಯ ಮುಂತಾದವರು ದಾನ ಕೊಡುತ್ತಾರೆ.[114]

ಕಾರು ಬೆಲೆಯ ಕ್ರಿ.ಶ.ಸು. ೮೯೫ ರಲ್ಲಿ ಮರಂಗಲ್ಲೊಡೆಯ ಕಣ್ಣಮಯ್ಯನ[115] ಕೊಮರ ಮಂಗಲ ಮೊಡೆಯ ನಾಗಮಯ್ಯ[116] ಹೆಯನೇಱಲುಗುಣ್ಡಿಯ್ಯ ವೂರೊಡೆಯ ಹಿಟ್ಟಮಯ್ಯನ[117] ಉಲ್ಲೇಖವಿದೆ. ತೆಕ್ಕಲಕೋಟೆಯ ಕ್ರಿ.ಶ. ೧೦೨೦ ರ ಶಾಸನದಲ್ಲಿ ಪಾಪೆಕಲ್ಲನ್ನು ಆಳುತ್ತಿದ್ದ ಬ್ರಹ್ಮಾಧಿರಾಜನು ಊರೊಡೆಯರಿಗೆ ವ್ಯವಸಾಯದ ಮೇಲಿನ ಕೆಲವು ತೆರಿಗೆಗಳನ್ನು ಬಿಟ್ಟದ್ದನ್ನು ತಿಳಿಸುತ್ತದೆ. ಈ ಬ್ರಹ್ಮಾಧಿರಾಜನನ್ನು ಮಹಾಸೇನಾಧಿಪತಿ, ಪತಿಬ್ರಿತಾಚಾರ್ಯ್ಯ, ದುಷ್ಟನಿಷ್ಠುರ, ಕುಟಿಲ ಕೌಟಿಲ್ಯಂ, ಕ್ಷುದ್ರವಿದ್ಯಾವಣಂ, ವಿಪ್ರಮಾರ್ತ್ತಾಣ್ಡ, ಪ್ರತ್ಯಕ್ಷಚಾಣುಕ್ಯ, ಪರಿವಾರವಜ್ರಪಂಜರ, ಕಲಿಕಾಲಬೃಹಸ್ಪತಿ, ಘಟೆಗನಗಂಧವಾರಣ, ಶ್ರೀಮನ್ಮಹಾಪ್ರಚಣ್ಡ ದಣ್ಡನಾಯಕನೆಂದು ಕರೆದಿದೆ.[118] ದಮ್ಮೂರ ಕಗ್ಗಲ್ಲುವಿನ ಶಾಸನದಲ್ಲಿ ಸಿಗದೇವಿಯ ಊರೊಡೆಯ ಉದಯದಿತ್ಯಯ್ಯ[119] ನನ್ನಿನೊಳಂಬನ ಪಾದಪದ್ಮೋಪ ಜೀವಿನಾಗಯ್ಯ ನಾಯಕನು ಬೆಳ್ವನುರ ಚೆಲ್ಲುಱುವದ ಪನ್ನಾಯಕದ

ಸುಂಕವನ್ನು ಆಳುತ್ತಿದ್ದ ಮಾರಿಮಯ್ಯನು ಆಲೂರಿನ ಒಡೆಯನಾಗಿದ್ದ.[120]

ಮೊರಬ ಗ್ರಾಮದ ಕ್ರಿ.ಶ. ೧೦೭೭ ರ ಒಂದು ಶಾಸನದಲ್ಲಿ ವೀರನೊಳಂಬ ಜಯಸಿಂಘದೇವ ಯುವರಾಜನಾಗಿ ಕೋಗಳಿ ಮುಂತಾದವನ್ನು ಆಳುತ್ತಿದ್ದಾಗ ಅವನ ಮಹಾಪ್ರಧಾನ ಹೇರಿಲಾಳ ಕನ್ನಡ ಸಂಧಿವಿಗ್ರಹಿ ದಂಡನಾಯಕ ಸಂಖರಯನಾಯಕನು ಸಮಸ್ತ ಪ್ರಸಸ್ತಿ ಸಹಿತ ಶ್ರೀಮನ್ಮಹಾಪ್ರಧಾನ ಸೇನಾಧಿಪತಿ ಮನೆವೆರ್ಗ್ಗಡೆ ದಂಡನಾಯಕ ಮಧುಪಯ್ಯನಾಯಕರ ಬಿನ್ನಹದಿಂದ ಊರಿನ ಪಿರಿಯ ಕೆರೆಗೆ ನೊಳಂಬಸಮುದ್ರವೆಂಬ ಪೆಸರಂ ಕೊಟ್ಟು ಪರಮೇಶ್ವರ ದತ್ತಿಯಾಗಿ ಬಿಟ್ಟದ್ದು ತಿಳಿಸುತ್ತದೆ.[121]

ಸೋಮಪುರದ ಒಂದು ಶಾಸನದಲ್ಲಿ ರಾಯಭಾರಿಯ ಉಲ್ಲೇಖವಿದ್ದು, ಆ ರಾಯಭಾರಿ ಯಿಶ್ವರಯ್ಯನನ್ನು ಕವಿ ರಾಯಭಾರಿಯ ವಿಶೇಷ ಗುಣಗಳನ್ನು ಮುಕ್ತವಾಗಿ ಹೊಗಳಿದ್ದಾನೆ.

ನೆರೆದ ರಸಜ್ಞರೊಳ್ನೆಱೆ ರಸಜ್ಞನುದಾತ್ತರೊಳತ್ಯುದಾತ್ತನ
ಕ್ಕರಿಗರೊಳಗ್ಗದಕ್ಕರಿಗನುತ್ತಮರೊಳ್ಕರ ಮುತ್ತಮಂವಿದ
ಗ್ದರೊಳೆಸಕಂ ವಿದಗ್ದನೆಗೆ ಬೀರನೊಳಂಬನ ರಾಯಭಾರಿಯೀ
ಶ್ವರನೆ ಸಮಗ್ರ .. ರಾತನ ಕಲ್ತುದನಾರೊಕಲ್ತವರ್ ॥

ಸರಧಿಯೊಳುಳ್ಳ ರತ್ನಮುಮನಂಬರದೊಳು ನೆಱೆನಿಲ್ದುತಾರಕ್ಕೋ
ತ್ಕರಮುಮನನ್ತು ಮಾ...ಯ್ಯಂ ಕಡೆಗಾಣ... ಗಜ್ಜನಾ
ಭರಣನ ಪುಣ್ಯಭಾಜನನ ವೀರ ನೊಳಂಬನ ರಾಯಬಾರಿಯೀ
ಶ್ವರನ ಗುಣಂಗಳಂ ನೆಱೆವಿಚಾರಿಸಿ ಬಣ್ಣಿಸಲಾರೊ ಬಲ್ಲವರ್ ॥[122]

ರಾಜಕುಮಾರರು ಅಥವಾ ಅರಸರುಗಳಿಗೆ ಪಟ್ಟವಾಗುವಾಗ ಬಹು ವೈಭವದಿಂದ ನಡೆಯುತ್ತಿದ್ದವು. ಅಂತಹ ಸಂದರ್ಭಗಳಲ್ಲಿ ರಾಜ್ಯದ ಪ್ರಜೆಗಳೆಲ್ಲರೂ ಅದನ್ನು ಉತ್ಸವದಂತೆ ಸಂಭ್ರಮದಿಂದ ಆಚರಿಸುತ್ತಿದ್ದರು. ಆಗ ಮಂತ್ರಿ ಮಾಂಡಲೀಕರು ಇತರರು ರಾಜನ ಒಳಿತಾಗಿ ದಾನ-ಧರ್ಮಗಳನ್ನು ನೀಡುತ್ತಿದ್ದರು. ಪಟ್ಟದಕಲ್ಲಿನ ಕ್ರಿ.ಶ ೧೦೭೦ರ ಶಾಸನದಲ್ಲಿ ನೊಳಂಬ ಪಲ್ಲವ ಪೆರ್ಮಾಡಿ ಸಿಂಗಣ ದೇವ ಆಳುತ್ತಿರುವಾಗ ಚಾಳುಕ್ಯಾನ್ವಯ ಪಟ್ಟಬನ್ದನೋತ್ಸಾಹಾಸ್ಸಕಳ ವಿಷಯ ಪಟ್ಟಣಾಧಿಪತಿ ಕಿಸುವೊಳಲನದ ಮೂಲಸ್ತಾನದ ಮಹಾದೇವರಿಗೆ ಭೂದಾನ ನೀಡಿದೆ.[123] ಇನ್ನೊಂದು ಶಾಸನದಲ್ಲಿ ನನ್ನಿನೊಳಂಬಾಧಿರಾಜನ ಪಟ್ಟಬಂಧವಾದಾಗ ಕಪ್ಪೆಕಲ್ಲಿನ ಮುಖ್ಯಸ್ತ ಪುಲಿಯಣ್ಣ, ಉದಯಾದಿತ್ಯದೇವನ ಸಾಮಂತ ಪಲ್ಲವರಸ ಕಪ್ಪೆಕಲ್ಲಿನ ಗ್ರಾಮದ ಮಹಾದೇವರಿಗೆ ಭೂದಾನ ನೀಡಿದುದನ್ನು ತಿಳಿಸುತ್ತದೆ.[124] ಇನ್ನೊಂದು ಶಾಸನ ಮಣಿಬೇತ ಮಹಾರಾಜ ಆ ಪಟ್ಟದಲ್ಲಿ ಧರ್ಮ್ಮರ್ಥಕ್ಕೆ ಬಿಟ್ಟ ಭೂದಾನವನ್ನು ಹೇಳಿದೆ.[125]

ಉತ್ತನೂರಿನ ಕ್ರಿ.ಶ. ೯೭೦ರ ಶಾಸನದಲ್ಲಿ ಇರಿವ ನೊಳಂಬನು ಆಳುತ್ತಿದ್ದಾಗ ಮಹಾಬಲಿ ಕುಲದ ಪರಮಪುರಪರಮೇಶ್ವರಂಪಯ್ಯನು ಚಿಕಪಟಹ ... ಣ ಕೃಷ್ಣಧ್ವಜ ಮತ್ತು ವೃಷಭ ಲಾಂಛನದಲ್ಲಿ ಸಾಂಬಯ್ಯನು ಬಿದಿರೂರನ್ನು ಆಳುತ್ತಿದ್ದು ಕೆರೆಗೆ ಬಿತ್ತು ಕಟ್ಟಬಿಟ್ಟದ್ದನ್ನು ಹೇಳುತ್ತದೆ.[126]

ಹೀಗೆ ರಾಜರ ಕೈಕೆಳಗೆ ಅನೇಕ ಅಧಿಕಾರಿಗಳು ತಮ್ಮ ಕೈಜೋಡಿಸಿ ಆಡಳಿತದ ಚಕ್ರ ನಡೆಯುವಲ್ಲಿ ನೆರವಾಗುತ್ತಿದ್ದರೆಂದು ತಿಳಿಯುತ್ತದೆ.

++

## ಟಿಪ್ಪಣಿಗಳು

1. SII.IX.Pt.1.No.17.
2. SII.IX.Pt.1.No.39.
3. EC.XI.Hr.1
4. EC.XI.Cl.No.6
5. SII.IX.Pt.1.No.33
6. EC.IX.Ht.111
7. ಕ.ವಿ.ಶಾ.ಸಂ.೧ ಹಗರಿ.೨೪: ೨೭
8. ಅದೇ. ೩೧.
9. EC.VI.No.571; ಕ.ವಿ.ಶಾ.ಸಂ.೧.ಹರಪ.೪
10. EC.VIII.No.369.
11. MAR.1929.No.54
12. SII.XI.Pt.2.No.127
13. MAR.1929.No.65.
14. SII.VI.No.558.
15. EC.XI.Cl.31.
16. ಕ.ವಿ.ಶಾ.ಸಂ.೧.ಸಿರಗು.೨೯.
17. SII.IX.pt.1.96.
18. ಕ.ವಿ.ಶಾ.ಸಂ.ಹರಪ.೯೭.
19. ಅದೇ. ಹರಪ.೧೫೮.
20. ಅದೇ. ಹಗರಿ.೨೮.
21. EC.XI.Dg.126.
22. ಕ.ವಿ.ಶಾ.ಸಂ.೧ ಹರಪ.೨೮.
23. ಅದೇ. ಹಡಗಲಿ ೫೮.
24. SII.XI.Pt.1.116.
25. EC.XII.Mi.71.
26. SII.XI.Pt.1.No.107.
27. EC.XI.Cd.82.
28. ಕ.ವಿ.ಶಾ.ಸಂ.೧.೧೭೦.
29. EC.X.Sppl.No.14.
30. EC.X.Mb.91.
31. SII.VI.561.
32. EC.X.Mb.108.
33. MAR.1923.No.23.
34. EC.XI.Dg.No.71.
35. ಕ.ವಿ.ಶಾ.ಸಂ.೧.ನಂ.೬೦.
36. EC.XI.Dg.No.19.

37. SII.IX.Pt.1.No.114.
38. EC.XII.Si.38.
39. do.38.
40. ಕ.ವಿ.ಶಾ.ಸಂ.೧.ಹಡಗ ೫೬.
41. SII.VII.No.532.
42. ಕ.ವಿ.ಶಾ.ಸಂ.೪.ನಂ.೯೦.
43. EC.X.Sp.29.
44. SII.X.Pt.1.No.32.
45. MAR.1929.No.96,99,100; MAR.1923.No.34.
46. EC.X.Mb.65.
47. EC.X.Sg.59.
48. SII.XI.Pt.1.No.61.
49. ಕ.ವಿ.ಶಾ.ಸಂ.೧.ಬಳ್ಳಾ.೫೮.
50. ಅದೇ. ಹಡಗ.೬೦.
51. EC.XI.Mk.28.
52. ಕ.ವಿ.ಶಾ.ಸಂ.೧ ಹರಪ.೩೧.
53. EC.XI.Jl.10.
54. SII.IX.Pt.1.No.115.
55. SII.IX.Pt.1.No.133.
56. ಕ.ವಿ.ಶಾ.ಸಂ.೧.ಹರಪ.೪.
57. EC.XI.Mk.28.
58. EC.XI.Cd.82.
59. EC.XII.Si.9.
60. SII.XX.No.49.
61. ಕ.ವಿ.ಶಾ.ಸಂ.೧.ಹಡಗ.೫೬.
62. EC.VII.(R).No.57.
63. EC.IX.Bg.40.
64. EC.X.Kl.4.
65. EC.X.Pt.1.Cn.43; 44.
66. EC.X.Pt.1.Kl.57.
67. EC.X.Pt.1.No.9.
68. SII.IX.Pt.1.No. 24.
69. SII.IX.Pt.1.No.27.
70. SII.IX.Pt.1.No.33.
71. SII.IX.Pt.1.No.28.
72. EC.X.Mb.122.
73. EC.IV.Cn.82.
74. ಕ.ವಿ.ಶಾ.ಸಂ.೧.ಹರಪ.೯೭,೧೩೬.

75. EC.XI.Dg.20.
76. ಕ.ವಿ.ಶಾ.ಸಂ.೧.ಹಗರಿ.೧೬
77. SII.IX.Pt.1.No.107.
78. SII.IX.Pt.1.No.115.
79. ಕ.ವಿ.ಶಾ.ಸಂ.೧.ಹರಪ.೧೩೨.
80. SII.XVIII.No.89.
81. MAR.1929.No.54;
82. SII.XI.Pt.2.No.127.
83. EC.XI.Cl.33
84. do. 34
85. do. 33
86. EC.XII.Si.24;ಕ.ವಿ.ಶಾ.ಸಂ.೫,ನಂ.೧,೧೦೪
87. SII.VI.No.556.
88. EC.XII.Si.39.
89. EC.X.Pt.2.Kl.57.
90. EC.XVII.Sppl.24.
91. SII.IX.Pt.1.No.23.
92. EC.X.Sp.25.
93. ಕ.ವಿ.ಶಾ.ಸಂ.೧.ಸಿರಗು.೩೮.
94. EC.X.Mb.50.;38
95. EC.VI.Cn.82.
96. ಕ.ವಿ.ಶಾ.ಸಂ.೧.ಹೊಸಪೇಟೆ.೪೦.
97. SII.XI.Pt.1.No.61.
98. ಕ.ವಿ.ಶಾ.ಸಂ.೧.ಹಗರಿ.೨೮.
99. ಅದೇ. ಹರಪ ೨೧೬.
100. ಅದೇ. ಬಳ್ಳಾ.೪೩;೪೪.
101. ಅದೇ. ಹಗರಿ.೧೬.
102. SII.IX.Pt.1.107.
103. EC.IX.Pt.1.110.
104. EC.XI.Jl.100.
105. ಕ.ವಿ.ಶಾ.ಸಂ.೧.ಹರಪ.೩೧
106. ಕ.ವಿ.ಶಾ.ಸಂ.೧.ಹರಪ.೧೯೦.
107. SII.XX.No.49.
108. SII.XVIII.89.
109. ಕ.ವಿ.ಶಾ.ಸಂ.೧.ಹರಪ ೨೯.
110. ಅದೇ. ಬಳ್ಳಾ.೪.
111. EC.VII.Hn.107.
112. SII.IX.Pt.107.

113. ಕ.ವಿ.ಶಾ.ಸಂ.೧.ಹಗರಿ.೪೧.
114. ಅದೇ. ಹರಪ.೧೯೦.
115. EC.X.Bp.64.
116. EC.X.Pt.2.Cn.44.
117. EC.VII.Hn.119.
118. ಕ.ವಿ.ಶಾ.ಸಂ.೧.ಸಿರಿಗು.೩೩.
119. ಅದೇ. ಬಳ್ಳಾ.೩೮.
120. EC.XI.Dg.20.
121. EC.XI.Pt.2.No.124.
122. EC.XVIIi.No.89.
123. EC.XI.Pt.1.No.110.
124. ಕ.ವಿ.ಶಾ.ಸಂ.೧.ಬಳ್ಳಾ.೬೩.
125. ಅದೇ. ೬೧.
126. EC.X.Mb.126.

# ಅಧ್ಯಾಯ – V

# ಕಾಳಗಗಳು

## ಪ್ರಮುಖ ಕಾಳಗಗಳು

ನೊಳಂಬರ ಇತಿಹಾಸದ ಮೂಲ ದೊರೆಯುವುದೇ ವೀರಗಲ್ಲುಗಳಿಂದ. ಪ್ರಾಚೀನ ಕರ್ನಾಟಕದ ಸ್ಥಿತಿಗತಿಗಳನ್ನು ಅರಿಯಲು ಈ ವೀರಗಲ್ಲುಗಳು ಇತರೆ ಶಾಸನಗಳಿಗಿಂತ ಪ್ರಮುಖ ಸ್ಥಾನದಲ್ಲಿವೆ. ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ದಾನಶಾಸನಗಳು ಹೆಚ್ಚು ಸ್ಥಳವನ್ನು ಆಕ್ರಮಿಸಿಕೊಂಡಿವೆ. ದೇವಾಲಯಗಳಿಗೆ, ಅಗ್ರಹಾರಗಳಿಗೆ, ಬ್ರಾಹ್ಮಣರಿಗೆ ನೀಡಿದ ದಾನವನ್ನು ಇವು ಉಲ್ಲೇಖಿಸಿದರೆ, ವೀರಗಲ್ಲುಗಳು ಯುದ್ಧ, ತುರುಗಾಳೆಗ, ಊರಳಿವು, ಪೆಣ್ಬುಯಲ್ ಅಥವಾ ಪೆಂಡಿರುಡೆಯುರ್ಚು, ಕಳ್ಳರೊಡನೆ ಹೋರಾಟ ಮುಂತಾದವುಗಳಲ್ಲಿ ಶೌರ್ಯದಿಂದ ಹೋರಾಡಿದ ವೀರರ ಚಿತ್ರಣ ಕಾಣಬಹುದು. ರಾಜ ರಾಜರ ಮಧ್ಯೆ ನಡೆದ ಯುದ್ಧಗಳ ಸಮಗ್ರ ಚಿತ್ರಣ ನಮಗೆ ದಾನ ಶಾಸನಗಳಲ್ಲಿ ದೊರೆಯುವುದಿಲ್ಲ. ಅಂತಹ ವಿವರ ವೀರಗಲ್ಲುಗಳಲ್ಲಿ ದೊರೆಯುತ್ತದೆ. ಏನಿದ್ದರೂ ಶಾಸನಗಳಲ್ಲಿ ದೊರೆಯುವ ಅಲ್ಪ ಸ್ವಲ್ಪ ಮಾಹಿತಿಯನ್ನು ಆಧರಿಸಿ ಊಹಿಸಬೇಕಾಗುತ್ತದೆ.

ರಾಜನು ತನ್ನ ಆಳ್ವಿಕೆಯಲ್ಲಿ ಆಡಳಿತವು ಸುಸೂತ್ರವಾಗಿ ನಡೆಯಲು ಆ ಆಡಳಿತದಲ್ಲಿ ಪ್ರಧಾನಿ, ಅಮಾತ್ಯ, ದಂಡನಾಯಕ, ಸೇನಾಧಿಕಾರಿ ಮುಂತಾದವರನ್ನೊಳಗೊಡ ಮಂತ್ರಿಮಂಡಲ ರಚಿಸಿ ಅವರ ನೆರವನ್ನು ಪಡೆಯುತ್ತಿದ್ದ. ಶತ್ರು ರಾಜರಿಂದ ತನ್ನ ರಾಜ್ಯದ ರಕ್ಷಣೆಗೋಸ್ಕರ ಸೈನ್ಯವನ್ನು ಇಟ್ಟಿರುತ್ತಿದ್ದ. ಆ ರಾಜ್ಯದ ಊರು ಗ್ರಾಮಗಳಲ್ಲಿ ಒಂದು ವೀರರ ತಂಡ ಸದಾ ಸಿದ್ಧವಾಗಿರುತ್ತಿತ್ತು. ಈ ವೀರರ ತಂಡ ತುರುಗಳನ್ನು ಅಪಹರಿಸಿದಾಗ ಸ್ತ್ರೀಯರ ಮಾನಭಂಗವಾಗುವಂತಹ ಸಂದರ್ಭಗಳಲ್ಲಿ, ಊರುಗಳನ್ನು ಶತ್ರುರಾಜರು ಕೊಳ್ಳೆಹೊಡೆಯುವ ಅಥವಾ ಕಳ್ಳರು ಬಂದು ಆಕ್ರಮಣ ಮಾಡಿದಾಗ ಅಂತಹ ಶತ್ರುಗಳ ವಿರುದ್ಧ ಹೋರಾಡುತ್ತಿದ್ದರು. ಕೆಲವೊಮ್ಮೆ ಸಾವನ್ನಪ್ಪುತ್ತಿದ್ದರು. ಸತ್ತವೀರರ ಹೆಸರಿನಲ್ಲಿ ಅವನ ಹತ್ತಿರದ ಸಂಬಂಧಿಗಳು ರಾಜ ಅಥವಾ ಊರಿನ ಜನರು ಸೇರಿ ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದ ದಾಖಲೆಗಳು ಇವೆ. ಆ ವೀರನ ಹೆಸರಿನಲ್ಲಿ ಕಲ್ಲು, ನಾಟ್ಟು, ಗೊಟ್ಟ, ದಾನ ದತ್ತಿಗಳನ್ನು ನೀಡಿ ಮುಂದಿನ ತಲೆಮಾರಿನವರಿಗೆ ಅವರ ಹೆಸರು ಚಿರಸ್ಥಾಯಿಯಾಗಿರುವಂತೆ ನೋಡಿಕೊಳ್ಳುತ್ತಿದ್ದರು.

ನೊಳಂಬರ ಅನೇಕ ವೀರಗಲ್ಲು ಶಾಸನಗಳಲ್ಲಿ ನೊಳಂಬರು ನಡೆಸಿದ ಅಥವಾ ಇತರೆ ಅರಸರು ನೊಳಂಬ ಅರಸರ ಮೇಲೆ ನಡೆಸಿದ ಯುದ್ಧಗಳ (ಕಾಳಗಗಳ) ವಿವರಗಳನ್ನು ನೀಡಿರುತ್ತಾರೆ. ಈ ವಿವರಗಳು ಕೆಲವೆಡೆ ಸಂಕ್ಷಿಪ್ತವಾಗಿದ್ದರೆ ಕೆಲವೆಡೆ ಸ್ವಲ್ಪ ವಿಸ್ತೃತವಾಗಿರುತ್ತವೆ. ಇತರೆ ರಾಜರ ಶಾಸನಗಳಲ್ಲಿ ಅಥವಾ ವೀರಗಲ್ಲುಗಳಲ್ಲಿ ಕಾಳಗಗಳ ವಿವರಗಳು ಕಡಿಮೆ ಉಲ್ಲೇಖವಾಗಿವೆ. ಈ ದೃಷ್ಟಿಯಿಂದ ನೊಳಂಬರ ಈ ಶಾಸನಗಳು ಗಮನಾರ್ಹವಾಗಿವೆ. ನೊಳಂಬವಾಡಿ ಪ್ರದೇಶವು ಮುಖ್ಯವಾಗಿ ಬಯಲು ಪ್ರದೇಶ. ಚಲುಕ್ಯ, ಪಲ್ಲವ, ಗಂಗ, ರಾಷ್ಟ್ರಕೂಟ ಮುಂತಾದ ಪ್ರಮುಖ ರಾಜವಂಶಗಳ ಗಡಿಪ್ರದೇಶ. ಈ ಕಾರಣಗಳಿಂದ ನೊಳಂಬರು ಒಂದು ರೀತಿಯಲ್ಲಿ ಗಡಿರಕ್ಷಕರೆಂಬಂತೆ ನಿಂತು ಹೋರಾಟ ನಡೆಸಿದ್ದಾರೆ. ಕಾಳಗವನ್ನು ಉಲ್ಲೇಖಿಸುವ ಶಾಸನಗಳು ತುರುಗಾಳೆಗ ಅಥವಾ ಪೆಂಡಿರುಡೆ ಶಾಸನಗಳೂ ಆಗಿರಬಹುದು. ಆದರೆ ಅವು ಕಡಿಮೆ. ಕಾಳಗವನ್ನು ಪ್ರತ್ಯೇಕವಾಗಿಯೇ ಉಲ್ಲೇಖಿಸುತ್ತವೆ. ನೊಳಂಬರ ಅಸ್ತಿತ್ವ ಆರಂಭವಾಗುವುದೇ ವೀರಗಲ್ಲುಗಳಿಂದ, ಈ ದೃಷ್ಟಿಯಿಂದ ಕಾಳಗದ ವಿವರಗಳನ್ನು ಇಲ್ಲಿ ಪ್ರತ್ಯೇಕವಾಗಿ ನೀಡಲಾಗಿದೆ.

ಕ್ರಿ.ಶ.ಸು. ೭೮೫ ರ ದೊಡ್ಡ ಉಳ್ವರ್ತೆಯ ಶಾಸನದಲ್ಲಿ ಸಿಂಗಪೋತ್ತ ಕಲಿನೊಳಂಬನು ಶಿವಮಾರನ ಪರವಹಿಸಿ ದುಗ್ಗಮಾರ ಎರೆಯಪ್ಪನ ಮೇಲೆ ಯುದ್ಧ ಮಾಡಿದಂತೆ ಹೇಳಿದೆ. ಈ ಶಾಸನದಲ್ಲಿ ಬಂದಿರುವ ಪೆರ್ಮಾನಡಿ ಎಂಬ ವಿಶೇಷಣದ ಬಗ್ಗೆ ಚರ್ಚಿಸುತ್ತಾ ಟಿ.ವಿ. ಮಹಾಲಿಂಗಂ ಅವರು ಇದು ಗಂಗರ ವಿಶೇಷಣವಲ್ಲ, ನಂದಿವರ್ಮ ಪಲ್ಲವ ಮಲ್ಲನಿಗಿದ್ದ ವಿಶೇಷಣವೆಂದಿದ್ದಾರೆ. ಎಂ.ಎಸ್. ಕೃಷ್ಣಮೂರ್ತಿಯವರು ಮಹಾಲಿಂಗಂ ಅವರ ಅಭಿಪ್ರಾಯ ವಿರೋಧಿಸಿ ಗಂಗರಿಗೆ ಈ ಬಿರುದು ಸಲ್ಲುತ್ತದೆ ಎಂದಿದ್ದಾರೆ. ಪೆರ್ಮಾನಡಿ ಎಂಬ ವಿಶೇಷಣವು ಶ್ರೀಪುರುಷನ ಕಾಲದಿಂದ ಶಾಸನಗಳಲ್ಲಿ ಹೆಚ್ಚಿಗೆ ಉಲ್ಲೇಖವಾಗುತ್ತವೆ. ಮುಂದೆಯೂ ಉಲ್ಲೇಖವಾಗಿವೆ. ಹೀಗಾಗಿ ಈ ಕಾಲಕ್ಕೆ ಗಂಗರಲ್ಲಿ ರಾಜನಾಗಿದ್ದವನು ಒಂದನೆಯ ಶಿವಮಾರನಾಗಿದ್ದು ಇವನನ್ನು ಪೆರ್ಮಾನಡಿ ಎಂದು ಶಾಸನದಲ್ಲಿ ನಿರ್ದೇಶಿಸಲಾಗಿದೆ. ಹಾಗೆಯೇ 'ನವರಾಜ್ಯ'ವನ್ನು ಆಳುತ್ತಿದ್ದಂತೆ ಹೇಳಿದ್ದು ಈ ನವರಾಜ್ಯವನ್ನು ಗುರುತಿಸುವಲ್ಲಿ ಟಿ.ವಿ. ಮಹಾಲಿಂಗಂ ಅವರು ಪಲ್ಲವ ನಂದಿವರ್ಮನ ರಾಜ್ಯಕ್ಕೆ ಅನ್ವಯಿಸುತ್ತಾರೆ. ಆದರೆ ಒಂದನೆಯ ಶಿವಮಾರನು ರಾಷ್ಟ್ರಕೂಟರ ಸೆರೆಯಿಂದ ಬಿಡುಗಡೆಗೊಂಡ ನಂತರ ತನಗೆ ದೊರೆತ ಹೊಸ ಪಟ್ಟವನ್ನು ಈ ಹೆಸರಿನಿಂದ ಕರೆದಿರಬೇಕು. ಕೃಷ್ಣಮೂರ್ತಿಯವರೂ ಇದೆ ಅಭಿಪ್ರಾಯಪಡುತ್ತಾರೆ.

ಈ ಯುದ್ಧವು ಪೊಮ್ಮಿಗೆ ಎಂಬಲ್ಲಿ ನಡೆದಿದ್ದು ಇದು ಗಂಗರ ಆಂತರೀಕ ಕಚ್ಚಾಟವಾಗಿರುತ್ತದೆ. ಪೆರ್ಮಾನಡಿಯು ಸಿಂಗಪೋತ್ತರ ಕಲಿನೊಳಂಬಾಧಿ ಅರಸನಿಗೆ ಆಜ್ಞೆಮಾಡಿದಾಗ ಆ ಆಜ್ಞೆಯನ್ನು ಶಿರಸಾವಹಿಸಿ ಯುದ್ಧ ಮಾಡಿದಂತೆಯೂ, ಕೆಲವರು ಈ ಯುದ್ಧದಲ್ಲಿ ಸತ್ತಂತೆ ಉಲ್ಲೇಖವಿದೆ.[1] ಇದೇ ಗ್ರಾಮದ ಇನ್ನೊಂದು ಶಾಸನವೂ ಸಹ ಸಿಂಹಪೋತ್ತರ

ಕಲಿನೊಳಂಬನು ಯುದ್ಧವೊಂದರಲ್ಲಿ ಭಾಗವಹಿಸಿದಂತೆ ಉಲ್ಲೇಖಿಸಿರುವುದರಿಂದ ಈ ಯುದ್ಧವು ಮೇಲೆ ಉಲ್ಲೇಖಿಸಿದ ಯುದ್ಧವೇ ಇರಬೇಕು. ಸಿಂಹಪೋತ ಭಾಗವಹಿಸಿದ್ದ ಮತ್ತೊಂದು ಯುದ್ಧವೆಂದರೆ ಬನವಾಸಿ ಮಂಡಲದ ಮಾವಳಿಯಲ್ಲಿ ಅಳುಪ ಚಿತ್ರವಾಹನನ ಮೇಲೆ ರಾಷ್ಟ್ರಕೂಟರು ನಡೆಸಿದ ಯುದ್ಧ. ಈ ಯುದ್ಧದಲ್ಲಿ ಬನವಾಸಿ ಮಂಡಲವನ್ನು ರಾಜಾದಿತ್ಯ ಎಂಬುವವನು ಆಳುತ್ತಿದ್ದಾಗ ಅವನ ಮಾತನ್ನು ಅಳುಪ ಚಿತ್ರವಾಹನನು ಕೇಳದಿದ್ದಾಗ ರಾಷ್ಟ್ರಕೂಟ ಗೋವಿಂದನು (ಕ್ರಿ.ಶ.ಸು.೮೦೦) ರಾಜಾದಿತ್ಯನಿಗೆ ಸಹಾಯ ಮಾಡಲು ಕೊಲ್ಲಿಪಲ್ಲವ ನೊಳಂಬನಿಗೆ (ಸಿಂಹಪೋತ) ಆಜ್ಞೆ ಮಾಡುತ್ತಾನೆ. ಆ ಭೀಕರ ಯುದ್ಧದಲ್ಲಿ ಕುಲಮುದ್ದ ಸತ್ತಂತೆಯೂ, ಚಿತ್ರವಾಹನ ಸೋತಂತೆಯೂ ತಿಳಿಯುತ್ತದೆ.

ಕ್ರಿ.ಶ.ಸು. ೮೫೦ ರ ಆಲ್ಬೂರು ಶಾಸನದಲ್ಲಿ ರಾಚಮಲ್ಲ ಪೆರ್ಮಾನಡಿಯ ರಾಜ್ಯಭಾರದಲ್ಲಿ ಅವನ ಸಾಮಂತನಾದ ಪೊಳಲ್ಚೋರನು ಯಾವುದೊ ಒಂದು ಊರಿನ ಕೋಟೆಯನ್ನು ಆಕ್ರಮಿಸಿಕೊಳ್ಳಲು ಕಾಳಗ ನಡೆಸಿದ್ದನ್ನು ಉಲ್ಲೇಖಿಸುತ್ತದೆ.[2] ಕ್ರಿ.ಶ. ೮೭೭ ರ ಜಿನ್ನಹಳ್ಳಿಯ ಶಾಸನದಲ್ಲಿ ಗಂಗರು ನೊಳಂಬ ರಾಜನ ಮೇಲೆ ತುಳುಂದವೊಳಲ ಬಳಿ ಯುದ್ಧ ಮಾಡಿದಂತೆ ಉಲ್ಲೇಖವಿದೆ.

ಕ್ರಿ.ಶ. ೮೫೦ ರಲ್ಲಿ ವೆಂಗಿ ಚಾಳುಕ್ಯವಂಶದ ಮೂರನೆ ವಿಜಯಾದಿತ್ಯನು (ಗುಣಗವಿಜಯಾದಿತ್ಯ) (ಕ್ರಿ.ಶ. ೮೪೮-೮೯೨). ಗುಣಗ ವಿಜಯಾದಿತ್ಯನು ರಾಷ್ಟ್ರಕೂಟರ ಪರವಾಗಿದ್ದ ನೊಳಂಬರ ಮೇಲೆ ಯುದ್ಧ ಮಾಡುತ್ತಾನೆ. ಈ ಯುದ್ಧದಲ್ಲಿ ಮಂಗಿರಾಜ ಎಂಬುವವನನ್ನು ಸಾಯಿಸಿದಂತೆ ಮಲಯಪುಂಡಿ ಶಾಸನವು ತಿಳಿಸುತ್ತದೆ. ಈ ಮಂಗಿರಾಜನನ್ನು ನೊಳಂಬರಾಜನೆಂದು ಹೆಸರಿಸಿದ್ದು ಇವನನ್ನು ಗುರುತಿಸಲು ಸಾಧ್ಯವಾಗಿರಲಿಲ್ಲ. ಆದರೆ ಇತ್ತೀಚೆಗೆ ಬಳ್ಳಾರಿ ಜಿಲ್ಲೆಯಲ್ಲಿ ದೊರೆತ ಶಾಸನವೊಂದರಲ್ಲಿ ನೊಳಂಬ ಅರಸ ಮಂಗಪರಸನ ಉಲ್ಲೇಖ ಬಂದಿದ್ದು ಇವನ ಅಸ್ತಿತ್ವವನ್ನು ಸಾರುತ್ತದೆ. ಗುಣಗ ವಿಜಯಾದಿತ್ಯನು ಯುದ್ಧದಲ್ಲಿ ಕೊಂದ ಮಂಗಿರಾಜ ಈ ಮಂಗಪರಸನೇ ಆಗಿರುತ್ತಾನೆ. ಆದರೆ ಮೂಲ ನೊಳಂಬರಿಗೂ ಇವನಿಗೂ ಇದ್ದ ಸಂಬಂಧಗಳಾಗಲಿ ನೊಳಂಬರ ವಂಶಾವಳಿಯಲ್ಲಿ ಇವನ ಸ್ಥಾನವನ್ನಾಗಲಿ ಗುರುತಿಸಲು ಸಾಧ್ಯವಾಗಿಲ್ಲ. ಈ ಮಂಗಿಯನ್ನು ವಿದ್ವಾಂಸರು ನೊಳಂಬರ ವಂಶಾವಳಿಯಲ್ಲಿ ಬರುವ ಸಿಂಹಪೊತನ ತಂದೆ ಮಂಗಳ ನೊಳಂಬಾಧಿರಾಜನಿರಬಹುದೆಂದು ಊಹಿಸಿದ್ದರು. ಆದರೆ ಕಾಲದ ದೃಷ್ಟಿಯಿಂದ ಇದು ಸರಿ ಬರುವುದಿಲ್ಲ. ಆದ್ದರಿಂದ ಬಳ್ಳಾರಿ ತಾಲೂಕಿನಲ್ಲಿ ಉಲ್ಲೇಖಿತನಾಗಿರುವ ಮಂಗಪರಸನೇ ಈ ಮಂಗಿರಾಜನೆಂದು ಸ್ಪಷ್ಟಪಡಿಸಬಹುದು. ಕಾಲದ ದೃಷ್ಟಿಯಿಂದಲೂ ಇದು ಹೊಂದಾಣಿಕೆಯಾಗುತ್ತದೆ. ಲಿಪಿ ಶಾಸ್ತ್ರದ ದೃಷ್ಟಿಯಿಂದ ಈ ಶಾಸನದ ಕಾಲವನ್ನು ಸು. ೮೫೦ಕ್ಕೆ ಹಾಕಬಹುದಾಗಿದೆ. ಹೀಗಾಗಿ ಪೊಳಲ್ಚೋರನ ತಮ್ಮ ಅಥವಾ ಮಗನೋ ಆಗಿದ್ದಿರಬೇಕು. ಇವನು ಚಿಕ್ಕ ವಯಸ್ಸಿನಲ್ಲಿಯೇ ಸತ್ತದ್ದರಿಂದ ನೊಳಂಬರ ವಂಶಾವಳಿಯಲ್ಲಿ ಇವನ ಹೆಸರನ್ನು ಉಲ್ಲೇಖಿಸದೆ ಬಿಟ್ಟಿರಬೇಕು.[3]

ಕ್ರಿ.ಶ.ಸು. ೮೭೦ ರ ಶಾಸನದಲ್ಲಿ ನೀತಿಮಾರ್ಗನು ಆಳುತ್ತಿದ್ದಾಗ ನೊಳಂಬಾಧಿರಾಜನು ಅವನ ಸಾಮಂತನಾಗಿ ಗಂಗ–೬೦೦೦ ವನ್ನು ಆಳುತ್ತಿದ್ದುದು ಬಾಣರ ಮೇಲೆ ಮುರ್ಗೇಪಾಡಿಯಲ್ಲಿ ಯುದ್ಧವನ್ನು ಮಾಡಿದಂತೆಯೂ ಆ ಯುದ್ಧದಲ್ಲಿ ಪೊಂಪೊಲ್ಲಮೊಡೆಯ ಎಂಬುವನು ಸತ್ತಂತೆಯೂ ನೀತಿಮಾರ್ಗ ಪೆರ್ಮಾನಡಿ ಮತ್ತು ನೊಳಂಬಾಧಿರಾಜರಿಬ್ಬರೂ ಸೇರಿ ಸೂರೂರನ್ನು ಬಾಳ್ಗಚ್ಚು ಕೊಟ್ಟಂತೆ ಉಲ್ಲೇಖವಿದೆ.[4] ಸುಮಾರು ಇದೇ ಕಾಲದ ಮೋತಕಪಲ್ಲಿ ಶಾಸನದಲ್ಲಿ ನೊಳಂಬಾಧಿರಾಜನ ಆಳ್ವಿಕೆಯಲ್ಲಿ ಪಾಂಡ್ಯನ ಮೇಲೆ ಗಂಗರು ಮತ್ತು ನೊಳಂಬರು ಸೇರಿ ಸಂಯುಕ್ತವಾಗಿ ಯುದ್ಧ ಮಾಡುತ್ತಾರೆ.[5] ನೊಳಂಬ ಮಹೇಂದ್ರನ ಕಾಲದ ಅನೇಕ ಶಾಸನಗಳು ಗಂಗರ ಮೇಲೆ ಯುದ್ಧ ಮಾಡಿದ್ದನ್ನು ಉಲ್ಲೇಖಿಸುತ್ತವೆ.[6]

ಮಹೇಂದ್ರನ ಕಾಲದ ಇನ್ನೊಂದು ಪ್ರಸಿದ್ಧ ಕಾಳಗವೆಂದರೆ ಬಾಣರ ಮೇಲೆ ಮಾನ್ದಾವಿ ಮತ್ತು ಸೊರೆಮಡಿಯಲ್ಲಿ ನಡೆದ ಯುದ್ಧ. ಈ ಯುದ್ಧದ ವಿಷಯ ಹೇಳುವ ನೊಳಂಬರ ಮತ್ತು ಬಾಣರ ಶಾಸನಗಳಲ್ಲಿ ಉಲ್ಲೇಖವಾಗಿವೆ. ಬಂಗವಾಡಿಯ ಕ್ರಿ.ಶ.ಸು. ೮೮೫ ರ ಶಾಸನದಲ್ಲಿ ಮಹಾಬಲಿ ಬಾಣರಸನು ರಾಜ್ಯವಾಳುತ್ತಿದ್ದಾಗ, ಈ ರಾಜ್ಯದ ಮೇಲೆ ನೊಳಂಬ ರಾಚಮಲ್ಲ ಮುಂತಾದವರು ಮಾನ್ದಾವಿ ಮುಂತಾದ ಕಡೆ ಕಾಳಗ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಇನ್ನೊಂದು ಶಾಸನದಲ್ಲಿ ಮಣ್ಣೆಯ ಮೇಲೆ ಬಾಣರಸ ಧಾಳಿ ಮಾಡಿದಂತೆ ರಾಯಕೋಟೆಯ ಶಾಸನ ತಿಳಿಸುತ್ತದೆ.[7] ಕಲಕತ್ತೂರಿನ ಶಾಸನದಲ್ಲಿ ನೊಳಂಬನು ತಲಕಾಡಿನ ಮೇಲೆ ದಂಡೆತ್ತಿ ಬಂದ ಸಮಯವನ್ನು ನೋಡಿ ಪೆರ್ಮಾನಡಿಯ ಆಜ್ಞೆಯಂತೆ ಕಾಡುವೆಟ್ಟಿಯು ಪೆರ್ಮಾವಿಯಾನ್ ಎಂಬ ಗ್ರಾಮವನ್ನು ಸುಟ್ಟಂತೆ ತಿಳಿಯುತ್ತದೆ.[8]

ಇಗ್ಗಲಿಯ ಕ್ರಿ.ಶ. ೮೯೦ರ ಇಮ್ಮಡಿ ರಾಚಮಲ್ಲನ ಕಾಲದ ಶಾಸನದಲ್ಲಿ ಉತ್ತರಳ್ಳಿಗರ ಎಂಬ ಕೋಟೆಗೆ ನೊಳಂಬನ ದಂಡು ಮುತ್ತಿಗೆ ಹಾಕಿದ್ದನ್ನು ತಿಳಿಸುತ್ತದೆ.[9] ಬೇಗೂರು ಶಾಸನದಲ್ಲಿ ನೀತಿ ಮಾರ್ಗ ಎರೆಯಪ್ಪನ ಕಾಲದಲ್ಲಿ ವೀರ ಮಹೇಂದ್ರನು ಗಂಗ ರಾಜ್ಯಕ್ಕೆ ಧಾಳಿ ಮಾಡಿದಾಗ ಎರೆಯುಪ್ಪನು ತನ್ನ ವಿರುದ್ಧ ನಿಂತ ವೀರಮಹೇಂದ್ರನನ್ನು ಎದುರಿಸಲು ನಾಗತ್ತರನನ್ನು ನಿಯೋಜಿಸುತ್ತಾನೆ. ಈ ಯುದ್ಧವು ತುಂಬಾಡಿ ಎಂಬಲ್ಲಿ ನಡೆದು ಅನೇಕ ಸಾವುನೋವುಗಳಿಗೆ ಕಾರಣವಾಗುತ್ತದೆ. ಈ ಯುದ್ಧದ ಚಿತ್ರಣವನ್ನು ಬೇಗೂರು ಶಾಸನ ಶಿಲ್ಪವು ಕಣ್ಣಿಗೆ ಕಟ್ಟುವಂತೆ ಪ್ರತಿಬಿಂಬಿಸುತ್ತದೆ.[10] ಈ ಗಂಗ ನೊಳಂಬರ ಯುದ್ಧದ ವಿವರಗಳನ್ನು ಇನ್ನೂ ಬೇರೆ ಬೇರೆ ಶಾಸನಗಳು ಉಲ್ಲೇಖಿಸುತ್ತವೆ.[11]

ಕ್ರಿ.ಶ.ಸು. ೯೦೫ರಲ್ಲಿ ಒಂದನೆಯ ಅಯ್ಯಪ್ಪನ ಕಾಲದಲ್ಲಿ ಮಲ್ಲೈಕುಂದೂರು[12] ಅಸಂದಿನಾಡಿನ ಎಳಬ್ಬೆನಾಯಕ[13] ಮತ್ತು ನವಿಲೂರುಗಳಲ್ಲಿ[14] ಗಂಗರೊಡನೆ ಮತ್ತು ಬಾಣರೊಡನೆ

ಕಾಳಗಗಳು ನಡೆಯುತ್ತವೆ. ಅಯ್ಯಪ್ಪನ ಮಗ ಅಣ್ಣಿಗ ಬೀರ ನೊಳಂಬನ ಕಾಲದಲ್ಲಿಯೂ ಗಂಗ ನೊಳಂಬರ ಯುದ್ಧಗಳು ಮುಂದುವರಿಯುತ್ತವೆ. ಇವನ ಕಾಲದಲ್ಲಿ ಕಾಳಗವನ್ನು ಉಲ್ಲೇಖಿಸುವ ಹೆಚ್ಚಿನ ಶಾಸನಗಳು ದೊರೆತಿವೆ. ಬಾಣರ ಪ್ರಭಾವವು ಈ ಕಾಲಕ್ಕೆ ಕುಗ್ಗಿದ್ದು ಅವರೊಡನೆ ಕಾಳಗ ನಡೆದಿರುವುದು ಕಡಿಮೆ. ಆದರೆ ಬೇರೆ ಬೇರೆ ಸಾಮಂತರ ಮೇಲೆ ಯುದ್ಧ ಮಾಡಿರುವುದು ತಿಳಿಯುತ್ತದೆ. ಯುದ್ಧ ನಡೆದ ಸ್ಥಳಗಳು– ಕೊತ್ತಮಂಗಲದಲ್ಲಿ ಗಂಗರೊಡನೆ[15] ಸಿರಿವೂರದಲ್ಲಿ ಪೊಯ್ಸಳರ ಮೇಲೆಯೂ[16] ಕಡಬಗೆರೆಯಲ್ಲಿ ಕದಂಬರ ಮೇಲೆಯೂ[17] ಕಳಿಕಟ್ಟೆಯಲ್ಲಿ ಗಂಗರ ಮೇಲೆಯೂ[18] ಸಾಂತರಗ ಮೇಲೆಯೂ ಯುದ್ಧ ಮಾಡುತ್ತಾನೆ. ಈ ಯುದ್ಧದಲ್ಲಿ ಸಾಂತರನನ್ನು ಇರಿದು ಅವನ ತಲೆಯನ್ನು ಮತ್ತು ಒರೆ (ಕತ್ತಿ ಇಡುವ ಸಾಧನ)ಯನ್ನು ಪಡೆದಂತೆ ತಿಳಿಯುತ್ತದೆ. ಈ ಯುದ್ಧದಲ್ಲಿ ಹೋರಾಡಿದ ವೀರನಿಗೆ ಪಿರಿಯಬಿದಿರೂರನ್ನು ಕಲ್ನಾಡಾಗಿ ನೀಡುತ್ತಾನೆ.

ದಿಲೀಪನ ಕಾಲದಲ್ಲಿಯೂ ಅನೇಕ ಯುದ್ಧಗಳು ನಡೆಯುತ್ತವೆ. ಈ ಕಾಲಕ್ಕೆ ರಾಜ್ಯ ವಿಸ್ತಾರವಾಗಿದ್ದು ಗಡಿಗಳೂ ಕೂಡ ವಿಸ್ತಾರವಾಗಿರುತ್ತದೆ. ಇಂತಹ ಸನ್ನಿವೇಶದಲ್ಲಿ ಗಡಿಗಳ ರಕ್ಷಣೆ ಮಾಡಿಕೊಳ್ಳುವುದೂ ಹಾಗೂ ಹೊಸ ರಾಜ ವಂಶಗಳು ಹುಟ್ಟಿ ಆಕಾಂಕ್ಷೆಯಿಂದ ರಾಜ್ಯ ವಿಸ್ತರಣೆಯನ್ನು ಕೈಗೊಂಡ ಪರಿಣಾಮವಾಗಿ ಈ ಯುದ್ಧಗಳು ನಡೆಯುತ್ತವೆ. ಇವನ ಕಾಲದಲ್ಲಿ ಬ್ರಹ್ಮಶಿವಾಚಾರ್ಯ ಎಂಬುವವನು ಪೆರ್ಬಟ್ಟ ಮತ್ತು ಬಿದಿರೂರನ್ನು ಆಳುತ್ತಿದ್ದಾಗ ನಡೆದ ಯುದ್ಧದಲ್ಲಿ 'ಬಿದೆಯಿತ' ಸತ್ತಂತೆ ಉಲ್ಲೇಖಿಸುತ್ತದೆ.[19] ಮಡಕಸಿರಾ ಶಾಸನದಲ್ಲಿ ತಕ್ಕೊಲಂನಲ್ಲಿ ರಾಷ್ಟ್ರಕೂಟರೊಂದಿಗೆ ನಡೆದ ಯುದ್ಧದಲ್ಲಿ ನೊಳಂಬರ ದಂಡು ರಾಷ್ಟ್ರಕೂಟರ ಸೈನ್ಯಕ್ಕೆ ಸಹಾಯ ಮಾಡಿದಂತೆ ಉಲ್ಲೇಖವಿದ್ದು ಆ ಯುದ್ಧದಲ್ಲಿ ವೀರನೊಬ್ಬ ಸತ್ತಂತೆ ತಿಳಿಯುತ್ತದೆ. ಈ ಶಾಸನದಲ್ಲಿ ಚೋಳ ಅರಸನನ್ನು ಗಜಾಂಕುಸ ಚೋಳನೆಂದು ಕರೆಯಲಾಗಿದೆ.[20]

ಕ್ರಿ.ಶ.ಸು. ೯೫೦ ರ ಅಡಕನಹಳ್ಳಿ ಶಾಸನದಲ್ಲಿ ಚೋಳನು ಬಿಜಯಿತಮಂಗಲದಲ್ಲಿ ನೊಳಂಬನ ದಂಡಿನ ಮೇಲೆ ಯುದ್ಧ ಮಾಡಿದಂತೆಯೂ ಅದರಲ್ಲಿ ನೊಳಂಬ ಅರಸನೊಬ್ಬ ಕಾದು ಸತ್ತಂತೆ ತಿಳಿಯುತ್ತದೆ.[21] ಇದೇ ಕಾಲದ ಗಂಗರ ಶಾಸನಗಳಲ್ಲಿ ಗಂಗರು ನೊಳಂಬರನ್ನು ಸೋಲಿಸಿದಂತೆ ಹೇಳಿಕೊಂಡಿರುತ್ತಾರಾದರೂ ದಿಲೀಪನು ಸಮರ್ಥ ಅರಸನಾದುದರಿಂದ ಈ ಹೇಳಿಕೆಗಳನ್ನು ನಂಬಲು ಸಾಧ್ಯವಿಲ್ಲ.

ಕ್ರಿ.ಶ. ೯೬೬ರಲ್ಲಿ ನನ್ನಿ ನೊಳಂಬನು ಆಳುತ್ತಿದ್ದಾಗ ಅವನ ಆಜ್ಞೆಯಂತೆ ಜಿನಮಯ್ಯ ಎಂಬುವವನು ಸಿಂದರನ್ನು ತಾಗಿದಂತೆ (ಎದುರಿಸಿದಂತೆ) ಉಲ್ಲೇಖವಿದೆ.[22] ಕ್ರಿ.ಶ. ೯೭೧ರ ಮಾದಲಗೆರೆ ಮತ್ತು ನೇರಲಗೆರೆ[23] ಶಾಸನಗಳಲ್ಲಿ ಗಂಗ ವಂಶದ ಇಮ್ಮಡಿ ಮಾರಸಿಂಹನು ನೊಳಂಬರನ್ನು ಕಾದಿ ಗೆದ್ದಂತೆ ಉಲ್ಲೇಖಿಸುತ್ತವೆ. ಯುದ್ಧವು ಉಳನೂರಿನಲ್ಲಿ ನಡೆದಂತೆಯೂ, ಆ ಕಾಳಗದಲ್ಲಿ

ಬಿಸುಗೆಯಕಳ ನಡೆಸಿ ವೈರಿಯನ್ನು ಕೊಂದಂತೆಯು ಉಲ್ಲೇಖವಿದೆ. ಬಹುಶಃ ಈ ಯುದ್ಧದಲ್ಲಿ ಇಮ್ಮಡಿ ಪೊಳಲ್ಚೋರ ಸತ್ತಿರಬೇಕು. ಏಕೆಂದರೆ ಮುಂದೆ ಇವನ ಶಾಸನಗಳು ನಮಗೆ ದೊರೆಯುವುದಿಲ್ಲ. ಕ್ರಿ.ಶ. ೯೭೫ ರಲ್ಲಿ ಪಂಚಲದೇವನ ಹೆಗ್ಗಡೆ ಗುಂಡಯ್ಯ ಎಂಬುವನು ಐಯ್ಯಪಮಂಗಲವನ್ನು ವಶಪಡಿಸಿಕೊಂಡು ಅಲ್ಲಿ ನಡೆಯುತ್ತಿದ್ದ ಪೂರ್ವ ಮರ್ಯಾದೆಯನ್ನು ತಪ್ಪಿಸಿದಾಗ ಐಯಪಮಂಗಲವನ್ನು ಪುನಃ ವಶಕ್ಕೆ ಪಡೆದು ಗುಂಡಯ್ಯನನ್ನು ಕ್ಷಮಿಸಿದಂತೆ ಉಲ್ಲೇಖವಿದೆ.[24] ಈ ಕಾಲಕ್ಕೆ ಉತ್ತರದಲ್ಲಿ ರಾಷ್ಟ್ರಕೂಟರು, ದಕ್ಷಿಣದಲ್ಲಿ ಗಂಗರೂ, ಪೂರ್ವದಲ್ಲಿ ಪಲ್ಲವರೂ ತಮ್ಮ ರಾಜ್ಯಗಳನ್ನು ಕಳೆದುಕೊಂಡು ಸತ್ವಹೀನರಾಗಿರುತ್ತಾರೆ. ಇಂತಹ ಸನ್ನಿವೇಶದಲ್ಲಿ ನೊಳಂಬರು ಆಗ ತಾನೆ ಉದಯವಾಗಿದ್ದ ಕಲ್ಯಾಣದ ಚಾಳುಕ್ಯರ ಸಂಬಂಧವನ್ನು ಬೆಳೆಸುವುದರ ಮೂಲಕ ಅವರ ಸಾಮಂತರೂ ಆಗಿ ಮುಂದುವರಿಯುತ್ತಾರೆ. ಹೀಗಾಗಿ ಯುದ್ಧಗಳ ಸಂಖ್ಯೆ ಕಡಿಮೆಯಾಗುತ್ತದೆ. ಈ ಅವಧಿಯಲ್ಲಿ ನಡೆದ ಯುದ್ಧಗಳು ಏನಿದ್ದರೂ ಚಾಳುಕ್ಯರ ಪರವಾಗಿ ನೊಳಂಬರು ನಡೆಸಿದ ಯುದ್ಧಗಳಾಗಿರುತ್ತವೆ.

ಕ್ರಿ.ಶ. ೧೦೪೫ ರ ಶಾಸನದಲ್ಲಿ ನೊಳಂಬರು ಚೋಳನ ಸೇನೆಯನ್ನು ಎದುರಿಸಿದಂತೆ ಉಲ್ಲೇಖವಿದೆ.[25] ಇನ್ನೊಂದು ಶಾಸನದಲ್ಲಿ ಯುದ್ಧದ ಉಲ್ಲೇಖವಿದ್ದರೂ ಯಾರ ಮೇಲೆ ಯುದ್ಧ ನಡೆಸಿದರೆಂಬ ಉಲ್ಲೇಖವಿಲ್ಲ. ಬಹುಶಃ ಚಾಳುಕ್ಯರ ಪರವಾಗಿ ಚೋಳರನ್ನು ಎದುರಿಸಿರಬೇಕು.

ನೊಳಂಬರು ರಾಷ್ಟ್ರಕೂಟರ ಹಾಗೂ ಕಲ್ಯಾಣದ ಚಾಳುಕ್ಯರ ಸಾಮಂತರಾಗಿ ಗಂಗ, ಪಲ್ಲವ, ವೆಂಗಿ ಚಾಳುಕ್ಯ ಹಾಗೂ ತುಂಡರಸನಾದ ಕದಂಬ, ಆಳುಪ ಮುಂತಾದವರೊಡನೆ ಯುದ್ಧಗಳನ್ನು ಮಾಡಿರುತ್ತಾರೆ. ಈ ಯುದ್ಧಗಳಲ್ಲಿ ಕೆಲವಲ್ಲಿ ಜಯ ದೊರೆತರೆ ಕೆಲವಲ್ಲಿ ಅಪಜಯವೂ ದೊರೆತಿರುತ್ತದೆ. ಹಿಂದೆ ಹೇಳಿದಂತೆ ಇವರ ಕಾಲದಲ್ಲಿ ತುರುಗಾಳೆಗ ಕಲ್ಲುಗಳ ಜೊತೆಗೆ ಕಾಳಗದ ಉಲ್ಲೇಖದ ಕಲ್ಲುಗಳೂ ದೊರೆತಿದ್ದು ರಾಜ್ಯದಲ್ಲಿ ಅಸ್ಥಿರತೆಯನ್ನು ಇದು ಸೂಚಿಸುತ್ತದೆ. ದೀವಬ್ಬರಸಿಯ ಗಂಡ ಪೊಳಲ್ಚೋರ ಹಾಗೂ ಅವನ ಮಗ ಇಮ್ಮಡಿ ಮಹೇಂದ್ರನು ಯುದ್ಧ ರಂಗದಲ್ಲಿಯೇ ಸತ್ತಿರಬಹುದಾದ ಸಾಧ್ಯತೆಗಳಿವೆ. ಹೀಗೆ ಕಾಳಗಗಳು ರಾಜ್ಯದ, ರಾಜರ ಭವಿಷ್ಯವನ್ನು ನಿರ್ಧರಿಸುವ ಘಟನೆಗಳಾಗುತ್ತಿದ್ದವು. ಆದರೆ ಅಸ್ಥಿರತೆಯಲ್ಲಿ ಕಾಳಗಗಳು ಅನಿವಾರ್ಯವಾಗಿದ್ದವು.

ಪ್ರಾಚೀನ ಕರ್ನಾಟಕದಲ್ಲಿ ರಾಜ್ಯ ವಿಸ್ತರಣೆಯ ಆಸೆಯಿಂದ ಅಥವಾ ವೈಯುಕ್ತಿಕ ದ್ವೇಶದಿಂದಲೋ ರಾಜರಲ್ಲಿ ಯುದ್ಧಗಳು ನಡೆಯುತ್ತಿದ್ದವು. ಇಂತಹ ಕಾಳಗಗಳು ಅನೇಕ ರೀತಿಯಲ್ಲಿ ನಡೆಯುತ್ತಿದ್ದವು. ಅವುಗಳಲ್ಲಿ ಊರಳಿವು, ಪೆಂಡಿರುಡೆಯುರ್ಚುವುದು, ತುಱುಗಾಳೆಗ ಇತ್ಯಾದಿ ಕಾಳಗಗಳು ನಡೆಯುತ್ತಿದ್ದವು.

## ಊರಳಿವು

ಈ ರೀತಿಯಲ್ಲಿ ರಾಜ ರಾಜರೊಳಗೆ ನಡೆದ ಕಾಳಗಗಳಲ್ಲಿ ಸೋತ ಶತ್ರುಗಳ ಮೇಲೆ ಮತ್ತೂ ಹೆಚ್ಚಿನ ಸೇಡು ತೀರಿಸಿಕೊಳ್ಳಲು ಸೋತವರ ಊರು, ಗ್ರಾಮಗಳ ಮೇಲೆ ಆಕ್ರಮಣ ಮಾಡುತ್ತಿದ್ದರು. ಆಕ್ರಮಣ ಮಾಡಿದ ಶತ್ರುಗಳು ಮನೆಗಳಿಗೆ ನುಗ್ಗಿ ಕೊಳ್ಳೆ ಹೊಡೆಯುತ್ತಿದ್ದರು. ಇಂತಹ ಘಟನೆಗಳನ್ನು ಊರಳಿವು ಎಂಬುದಾಗಿ ಶಾಸನಗಳು ಕರೆದಿವೆ. ಇಂತಹ ಘಟನೆಗಳ ಉಲ್ಲೇಖಗಳನ್ನು ಕೋಲಾರ ಜಿಲ್ಲೆಯ ನೆಕ್ಕುಂದಿ[26] ವೆಂಕಟಾಪುರ[27] ಕಾವತ್ತನಹಳ್ಳಿ[28] ಆವನಿ[29] ಶೃಂಗೇತಿ ಸದುಮನಹಳ್ಳಿ[30] ಯ ಶಾಸನಗಳು ಹೇಳುತ್ತವೆ. ಚಿತ್ರದುರ್ಗ ಜಿಲ್ಲೆಯ ದೊಡ್ಡ ಉಳ್ಳರ್ತಿ ಗ್ರಾಮದ ಶಾಸನದಲ್ಲಿ ದಂಡನಾಯಕನಿಕ್ಕಪಯ್ಯನ ಮಗ ಕಾನ್ತದಗೊಗ್ಗಿ ಎಂಬುವವನು 'ಹರಿ (ಶತ್ರು) ಬನ್ದು. ಕಾದೊಮಱಿವೊಕ್ಕೊನಂ ಕಾದು ಕಱಿಪ್ಪಿ ವೈರಿ ಬಲಕ್ಕೆ ಇದಿರನ್ನಡೆದು ಸತ್ತು ಯಶವಂಪಡೆದಂ ... ' ಶತ್ರುವಿನೊಡನೆ ಹೋರಾಡಿ ಸತ್ತದ್ದನ್ನು ವಿವರಿಸುತ್ತದೆ.[31] ಹುಲಿಕುಂಟೆ[32] ಬಲ್ಲ[33] ಯಲಬುರಿಗೆ[34] ಕಲ್ಲಹಳ್ಳಿ[35] ಧರ್ಮಪುರಿ ಜಿಲ್ಲೆಯ ಸಲವಲಸ್ಸೆ[36] ಗ್ರಾಮಗಳ ಶಾಸನಗಳಲ್ಲಿ ಗಮನಿಸಬಹುದು.

## ಪೆಣ್ದಿರುಡೆಯುರ್ಚುವುದು

ಸೋತವರ ಮೇಲೆ ಸೇಡು ತೀರಿಸಿಕೊಳ್ಳಲು ಬಂದವರಾಗಿರಬಹುದು ಅಥವಾ ಊರಳಿವಿನ ಸಂದರ್ಭದಲ್ಲಿ ಬಂದ ಧಾಳಿಕಾರರಾಗಿರಬಹುದು. ಇವರು ಅಸಹಾಯಕರಾದ ಹೆಣ್ಣುಮಕ್ಕಳ (ಉಡುಪು ಬಿಚ್ಚಿ) ಮಾನಭಂಗ ಮಾಡಲು ಪ್ರಯತ್ನಿಸುವುದನ್ನು ಪೆಣ್ದಿರುಡೆಯುಚ್ಚುರ್ ಎಂಬುದಾಗಿ ಕರೆಯಲಾಗಿದೆ. ಇಂತಹ ಘಟನೆಗಳು ಅಪರೂಪಕ್ಕೆ ನಡೆಯುತ್ತಿದ್ದವು. ಹೆಂಗಸರ ಮಾನಭಂಗವನ್ನು ಸಹಿಸಲಾಗದ ವೀರನು ತನ್ನ ಪರಾಕ್ರಮದಿಂದ, ಶತ್ರುವಿನ ವಿರುದ್ಧ ಹೋರಾಡಿ ಇಂತಹ ಘಟನೆಗಳನ್ನು ತಪ್ಪಿಸಲು ಪ್ರಯತ್ನಿಸುತ್ತಿದ್ದ. ಅಂತಹ ಸಂದರ್ಭಗಳಲ್ಲಿ ತಮ್ಮ ಜೀವ ತೆತ್ತ ವೀರರಿಗೆ ಸ್ಮಾರಕಗಳನ್ನು ನಿರ್ಮಿಸಿರುವ ಉಲ್ಲೇಖಗಳಿವೆ. ಅಣ್ಣಿಗ ಬೀರನೊಳಂಬನ, ದಿಲೀಪನ ಮತ್ತು ಇರುಱಚೋರನ ಕಾಲದಲ್ಲಿ ಇಂತಹ ಘಟನೆಗಳು ನಡೆದಿರುವ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಕೋಲಾರ ಜಿಲ್ಲೆಯ ನಂಬಿಹಳ್ಳಿ,[37] ತಾವರೆಕೆರೆ,[38] ಮಾದಿಗೆರೆ,[39] ಚಿತ್ರದುರ್ಗ ಜಿಲ್ಲೆಯ ಸಾಯ್ಗೊಂಡನಹಳ್ಳಿ,[40] ಹರೂರು ತಾಲೂಕಿನ ಜಿನಕವುಂಡಮ್ಪಟ್ಟಿ[41] ಶಾಸನಗಳಿಂದ ಇಂತಹ ಘಟನೆಗಳು ನಡೆದಿರುವುದನ್ನು ತಿಳಿಸುತ್ತವೆ.

## ತುರುಗಾಳೆಗ ಅಥವಾ ತುರುಗೊಳ್

ತುರುಗಾಳೆಗಗಳಿಗೆ ಮುಖ್ಯ ಕಾರಣ ಗೋಸಂಪತ್ತು. ದನಗಳು ಊರಿನ ಆರ್ಥಿಕ ಸಂಪತ್ತಾಗಿತ್ತು. ಒಬ್ಬ ವ್ಯಕ್ತಿ ಅಥವಾ ಒಂದು ಊರಿನಲ್ಲಿದ್ದ ದನಗಳ ಸಂಖ್ಯೆಯು ಮೇಲೆ ಅವನ ಅಥವಾ ಅಲ್ಲಿಯ ಸಂಪತ್ತನ್ನು ಗಣಿಸಲಾಗುತ್ತಿತ್ತು. ಅದು ಅವನ ಐಶ್ವರ್ಯದ ಪ್ರತೀಕವಾಗಿತ್ತು. ಹೀಗಾಗಿ ತುರುಗಳನ್ನು ಕದಿಯುದು ಜನರ ಐಶ್ವರ್ಯವನ್ನು ಅಪಹರಿಸಿದಂತೆ ಆಗುತ್ತಿತ್ತು. ಚಿದಾನಂದಮೂರ್ತಿಯವರು ಹೇಳುವಂತೆ ತುರುಗೊಳ್ ಎಂದರೆ ತುರು+ಕೊಳ್. ತುರು ಎಂದರೆ ದನ ಅಥವಾ ಪಶು, ಕೊಳ್, ಕೋಳ್ ಎಂದರೆ ತೆಗೆದು ಕೋ ಎಂಬ ಧಾತುವಿನ ಭಾವನಾಮ. ಸಾಮಾನ್ಯವಾಗಿ ಇಂತಹ ತುರುಗಾಳೆಗಳು ರಾಜರಾಜರ ಮಧ್ಯೆ ಯುದ್ಧ ನಡೆದಾಗ ಅಥವಾ ಒಬ್ಬ ರಾಜನ ಆಳ್ವಿಕೆಯಲ್ಲಿ ಅವನ ನಾಡಿನಲ್ಲಿಯೆ ಪರಸ್ಪರ ಕಾದಾಡಿದಾಗಲೂ ತುರುಗಾಳೆಗಗಳು ನಡೆದಿರುವುದುಂಟು. ಇವು ಊರಿನ ಜನಗಳನ್ನು ಕೆಣಕುವುದಕ್ಕೆ ಸಹ ನಡೆದಿರಬಹುದು. ಇವು ಭಾರಿ ಯುದ್ಧಗಳಲ್ಲದಿದ್ದರೂ ಸ್ಥಳೀಯವಾಗಿ ನಡೆಯುತ್ತಿದ್ದ ವೈಮನಸ್ಸಿನ ಕಾಳಗಗಳಾಗಿರುತ್ತಿದ್ದವು. ತುರುಗಳನ್ನು ಸಾಕುವುದೆಷ್ಟು ಮುಖ್ಯವೊ ಅವುಗಳ ಸಂರಕ್ಷಣೆಯೂ ಅಷ್ಟೆ ಪ್ರಮುಖ ಕರ್ತವ್ಯವಾಗಿರುತ್ತಿತ್ತು. ಇಂತಹ ತುರುಗೊಳ್ ನಡೆದಾಗ ಅದನ್ನು ಹಿಮ್ಮೆಟ್ಟಿಸಲು ಅಥವಾ ಹಿಂದಿರುಗಿಸಲು ಹೋಗಿ ಸತ್ತವನು ಅಲ್ಲಿಯ ವೀರನಾಗುತ್ತಿದ್ದ ಆಗ ಸತ್ತವನ ಕುಟುಂಬಕ್ಕೆ ಅಧಿಕಾರಿಗಳೋ ಅಥವಾ ಸ್ಥಳೀಯರೊ ದಾನ, ದತ್ತಿ ನೀಡುವ ಮೂಲಕ ಸತ್ತವನ ಕುಟುಂಬಕ್ಕೆ ಸಹಾಯ ಮಾಡುವುದರ ಜೊತೆಗೆ ಅವನ ಶೌರ್ಯವನ್ನು ಗೌರವಿಸಿ ಪ್ರೋಷಿಸುತ್ತಿದ್ದರು. ಆ ಕಾಲದಲ್ಲಿ ಸ್ತ್ರೀಯರ, ಗೋವುಗಳ ರಕ್ಷಣೆಗೆ ಜನ ಅಪಾರವಾದ ಕಾಳಜಿ ವಹಿಸುತ್ತಿದ್ದರು. ಅಂತಹ ಕಾರ್ಯಗಳಲ್ಲಿ ಪ್ರಾಣಾರ್ಪಣೆ ಮಾಡಿದ ವೀರರಿಗೆ ಜನತೆ ವೀರಗಲ್ಲುಗಳನ್ನು ಹಾಕಿಸಿ ಗೌರವಿಸುತ್ತಿದ್ದರು.

ನೊಳಂಬವಾಡಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ನೊಳಂಬರ ಕಾಲದಲ್ಲಿಯೂ ಸಾಕಷ್ಟು ತುರುಗಾಳೆಗಗಳು ನಡೆದಿವೆ. ನೊಳಂಬರ ಕಾಲಕ್ಕೆ ಸೇರುವ ರನ್ನನ ಗದಾಯುದ್ಧದಲ್ಲಿ `ತುರುಗೊಳ್ ಮತ್ತು ಪೆಣ್ಬುಯಲಿನಲ್ಲಿ ಶೌರ್ಯವನ್ನು ತೋರಿದವನು ಶೂರನಲ್ಲ' ಎಂದಿದ್ದಾನೆ. ಈ ಕೆಳಗಿನ ಪದ್ಯವು –

ತುಱುಗೋಳೊಳ್ ಪೆಣ್ಬುಯ್ಯಲೊ
ಳಱುವೆಸದೊಳ್ ನಂಟನೆಡಱೊಳೂರಮಿವಿನೊಳಂ
ತಱುಸಂದು ಗಂಡುತನಮನೆ
ನೆಱಪದವಂ ಗಂಡನಲ್ಲನೆಂತುಂಷಂಡಂ ॥

ಅಂದಿನ ಶೌರ್ಯದ ಚಿತ್ರವನ್ನು ಕೊಡುವುದರ ಜೊತೆಗೆ ಯಾವುದು ಉಚಿತ ಮತ್ತು ಅನುಚಿತವೆಂದು ಸಹ ತಿಳಿಸುತ್ತದೆ.

ಪ್ರಸ್ತುತ ನೊಳಂಬ ಅರಸ ಒಂದನೆಯ ಮಹೇಂದ್ರನ ಕಾಲದಲ್ಲಿ ತುರುಗಾಳೆಗಗಳು ನಡೆದಿರುವ ಉಲ್ಲೇಖಗಳು ದೊರೆಯುತ್ತವೆ. ಕೊಲಾರ ಜಿಲ್ಲೆಯ ಮೇದು ತಂಬಿಹಳ್ಳಿ,[42] ಹುಲದೇನಹಳ್ಳಿ,[43] ಮುತ್ತುಕದಹಳ್ಳಿ,[44] ಶೆಟ್ಟಿಹಳ್ಳಿ,[45] ಭಕ್ತರಹಳ್ಳಿ,[46] ಕಾರುಬೆಲೆ,[47] ಬೆಂಗಳೂರು ಜಿಲ್ಲೆಯ ಜೋಡಿದಳಸಿಗೆರೆ,[48] ಕುಂಬಳದಹಳ್ಳಿ,[49] ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಕುಂದಪಲ್ಲಿ,[50] ಪುಲಿಯನೂರು,[51] ಅಂಬೂರು,[52] ಪೆರಿಯ ಮುಕ್ಕುಲಂ,[53] ಮಾಚಿನಾಯಕನಪಲ್ಲಿ,[54] ಪಡುತ್ತಾನ್ ಕೋಟ್ಟೈ,[55] ಮುಂತಾದ ಕಡೆಗಳಲ್ಲಿ ದೊರೆತಿವೆ. ಇಲ್ಲೆಲ್ಲಾ ಒಂದೊಂದು ಗ್ರಾಮದಲ್ಲಿ ಒಂದೊಂದು ತುರುಗಾಳೆಗ ನಡೆದಂತೆ ತಿಳಿಯುತ್ತದೆ. ತಮ್ಮ ಗ್ರಾಮಗಳ ಸಂಪತ್ತಾದ ದನಕರುಗಳನ್ನು ಉಳಿಸಿಕೊಳ್ಳಲು ಜೀವದ ಹಂಗು ತೊರೆದು ಹೋರಾಡಿದ ವೀರನ ಮತ್ತು ಅವನು ಸತ್ತ ವಿಷಯ ತಿಳಿಯುತ್ತದೆ. ಇಂತಹ ವೀರರು ಸತ್ತಾಗ ಆಯಾ ಗ್ರಾಮದ ಅಧಿಕಾರಿಗಳು ಸ್ಮಾರಕವನ್ನು ನಿಲ್ಲಿಸಿ, ಕುಟುಂಬದವರಿಗೆ ಪರಿಹಾರ ನೀಡುತ್ತಿದ್ದ ನಿದರ್ಶನಗಳು ಮೇಲಿನ ಶಾಸನಗಳಿಂದ ತಿಳಿಯುತ್ತದೆ. ಶಾಸನಗಳಲ್ಲಿ ತುವನಿಕ್ಕಿಸಿ ಎಂದರೆ ತುರುಗಳನ್ನು ಹಿಂದಿರುಗಿಸಿ ಎಂಬ ಅರ್ಥ ಮಾಡಬೇಕಾಗುತ್ತದೆ. ಅನೇಕ ವೇಳೆ ತುರುಗಳ್ಳರ ಸಂಖ್ಯಾಬಲ ಹೆಚ್ಚಿದ್ದಾಗ ತುರುಗಳನ್ನು ಹಿಂದಿರುಗಿಸಲು ಸಾಧ್ಯವಾಗದ ಸಂದರ್ಭಗಳೂ ಉಂಟು. ಇದಕ್ಕೆ ಸಂಬಂಧಿಸಿದಂತೆ ಪುಯ್ಯಲ್ಪೋಗಿ, ಹೋಗಿ ಎಂಬ ಶಬ್ದಗಳೂ ಕೂಡ ತುರುಗಾಳೆಗಕ್ಕೆ ಬಳಸುತ್ತಾರೆ.

ಒಂದನೆಯ ಮಹೇಂದ್ರನ ಮಗ ಅಯ್ಯಪದೇವನ ಕಾಲದಲ್ಲಿ ಬೆಂಗಳೂರು ಜಿಲ್ಲೆಯ ಜಕ್ಕಸಂದ್ರ[56] ಕೋಲಾರ ಜಿಲ್ಲೆಯ ಹುಲಿಕುಂದ,[57] ಮುದಲೋಡು,[58] ಹೆಬಟ,[59] ಪೆರಿಯ ಮುಕ್ಕುಲಂ,[60] ವೇಲನ್‌ಪಟ್ಟಿ,[61] ವಡಮಂಗಲಂ,[62] ಅನಂತಪುರ ಜಿಲ್ಲೆಯ ಹೇಮಾವತಿ,[63] ಮುಂತಾದ ಕಡೆಗಳಲ್ಲಿ ನಡೆದಂತೆ ಶಾಸನಗಳು ಉಲ್ಲೇಖಿಸಿವೆ. ಇವುಗಳಲ್ಲಿ ಹುಲಿಕುಂದ ಗ್ರಾಮದಲ್ಲಿ ದೊಡ್ಡ ತುರುಗಾಳೆಗ ನಡೆದಂತೆ ಅಲ್ಲಿನ ವೀರಗಲ್ಲುಗಳು ಮತ್ತು ಶಿಲ್ಪಗಳಿಂದ ತಿಳಿಯುತ್ತದೆ.

ದಿಲೀಪ ಅರಸನ ಕಾಲದಲ್ಲಿ ಹೆಚ್ಚು ತುರುಗಾಳೆಗಗಳು ನಡೆದಿರುವ ವಿಷಯವನ್ನು ಅನೇಕ ಶಾಸನಗಳು ಉಲ್ಲೇಖಿಸುತ್ತವೆ. ಕೋಲಾರ ಜಿಲ್ಲೆಯ ಭಕ್ತರಹಳ್ಳಿ,[64] ಮಲ್ಲಿಶೆಟ್ಟಿಪುರ,[65] ಕಮ್ಮಸಂದ್ರ,[66] ಯೆಲ್ದೂರು,[67] ಗೊಲ್ಲಹಳ್ಳಿ,[68] ಚೋರಪಲ್ಲಿ,[69] ಆವನಿ,[70] ಬಲ್ಲ[71] ಗ್ರಾಮದ ತುರುಗಾಳೆಗದ ಮೂರು ಶಾಸನಗಳಲ್ಲಿ ಮೂರು ಜನರು ಸತ್ತ ಉಲ್ಲೇಖವಿದೆ.

ಆವನಿಯಲ್ಲಿದ್ದ ತಪೋರಾಜ್ಯವನ್ನು ತ್ರಿಭುವನಕರ್ತಾರ ದೇವನು ಆಳುತ್ತಿದ್ದಂತೆ ಹೇಳಿದೆ. ಶೃಂಗೇರಿ ಸದುಮನಹಳ್ಳಿ,[72] ತುಮಕೂರು ಜಿಲ್ಲೆಯ ನಾರಣಪುರ,[73] ಧರ್ಮಪುರಿ ಜಿಲ್ಲೆಯ ಬೊಂಪಟ್ಟಿ,[74] ಸಿಂಗೇರಿಪಟ್ಟಿ,[75] ಪೊಮ್ಮಡಿಯ ಶಾಸನದಲ್ಲಿ 'ಬೆಲವೀಡನ ಪರ . ವಾರದ ತುರುವಕೊಳಲ್ಲಿ ಮಲವೋಗಿ ಕಾದಿ ಸತ್ತ' ಇದಕ್ಕೆ ಕಲ್ಲು ನೆಟ್ಟ ಉಲ್ಲೇಖವಿದೆ.[76]

ದಿಲೀಪನ ನಂತರ ನೊಳಂಬ ರಾಜ್ಯವು ಮೊದಲಿನ ವೈಭವವನ್ನು ಕಳೆದುಕೊಂಡ ಮೇಲೆ ತುರುಗಾಳೆಗಗಳು ನಿಲ್ಲಲಿಲ್ಲ. ತಮಿಳುನಾಡಿನ ಕೆಲವು ಭಾಗಗಳು ನೊಳಂಬರ ಕೈ ತಪ್ಪಿದವು. ಕೋಲಾರ ಜಿಲ್ಲೆಯ ಗುದ್ದಲಹಳ್ಳಿ. ಹಬ್ಬಣಿ, ಮಡಿವಾಳ, ತೇಕಲ್ಲು, ಹುಲಿಕುಂದ, ಆವನಿ, ತಾವರೆಕೆರೆ ಮುಂತಾದ ಕಡೆಗಳಲ್ಲಿ ಈ ತುರುಗಾಳೆಗಗಳು ನಡೆದ ಉಲ್ಲೇಖಗಳಿವೆ. ನೊಳಂಬರು ತಮ್ಮ ರಾಜಧಾನಿಯನ್ನು ಕಂಪಿಲಿಗೆ ಬದಲಾಯಿಸಿದ ಮೇಲೆ ಕೋಗಳಿಯಲ್ಲಿ ಮಾತ್ರ ಈ ತುರುಗಾಳೆಗ ತ್ರೈಲೋಕ್ಯಮಲ್ಲ ನನ್ನಿ ನೊಳಂಬ ಪಲ್ಲವಪೆರ್ಮಾಡಿಯ ಕ್ರಿ.ಶ.೧೦೪೭ ರ ಶಾಸನದಲ್ಲಿ ಏಚನಾಯಕನು ಕುದುರೆಯನ್ನು ಏರಿ ಪೋಗಿ ಹಸುಗಳನ್ನು ಕದ್ದೊಯ್ಯುತ್ತಿದ್ದ ಕಳ್ಳರನ್ನು ಸದೆ ಬಡಿದು ಕೋಗಳಿಯ ಹಸುಗಳನ್ನು ಹಿಂದಿರುಗಿಸಿ ತಾನು ಸತ್ತ ಉಲ್ಲೇಖವಿದೆ.[77] ಅಲ್ಲಿಂದ ಮುಂದೆ ಈ ತುರುಗಾಳೆಗಗಳು ನಡೆದ ಉಲ್ಲೇಖ ಸಿಗುವುದಿಲ್ಲ. ತುರುಗಾಳೆಗ ಹಸುಕರುಗಳನ್ನು ಕದಿಯಲು ಅಥವಾ ಅಪಹರಿಸಲು ಬರುತ್ತಿದ್ದರೆಂದು ಹೇಳಿದರೂ ಹಸುಗಳ ಜೊತೆ ಎಮ್ಮೆಗಳನ್ನು ಕೂಡ ಕದಿಯುತ್ತಿದ್ದರು. ಹಸುಗಳಂತೆ ಎಮ್ಮೆಗಳಿಗೆ ಪವಿತ್ರತೆ ಇಲ್ಲವೆಂಬ ಕಾರಣದಿಂದಲೂ ಹಾಗೂ ಪಶು ಅಥವಾ ತುರು ಎಂಬ ಅರ್ಥದಲ್ಲಿ ಎಮ್ಮೆಯೂ ಸೇರುವುದರಿಂದ ಎಮ್ಮೆ ತುರುಗೊಳ್‌ನ ಉಲ್ಲೇಖ ಶಾಸನಗಳಲ್ಲಿ ಕಡಿಮೆ. ಆದರೆ ಮಾದಿಗೆರೆ ಗ್ರಾಮದ ಶಾಸನದಲ್ಲಿ ಎಮ್ಮೆ-ತುರುಗೊಳ್ ಕಾಳಗದಲ್ಲಿ ಕಟ್ಟಿ ಇಕ್ಕಿಸಿ ಸತ್ತವನ ಉಲ್ಲೇಖವಿದೆ.[78]

## ಪ್ರಾಣಿಗಳೊಡನೆ ಹೋರಾಟ

ಬೇರೆಯವರಿಗಾಗಿ ಬೇರೆ ಬೇರೆ ರೀತಿಯಲ್ಲಿ ತಮ್ಮ ತನುವನ್ನು ಮತ್ತು ರಾಜನ ಒಳಿತಿಗಾಗಿ ಅರಿಕೆ ಮಾಡಿಕೊಂಡು ತಮ್ಮ ಪ್ರಾಣವನ್ನು ಅರ್ಪಿಸಿದ ಉದಾಹರಣೆಗಳು ಸಾಕಷ್ಟಿವೆ. ನೊಳಂಬರ ಕಾಲದಲ್ಲಿಯೂ ಕಿಚ್ಚನ್ನು ಹೊಕ್ಕು ಪ್ರಾಣ ಬಿಟ್ಟ ಹಾಗೂ ಊರಿಗೆ ಉಪದ್ರ ಕೊಡುತ್ತಿದ್ದ ಹುಲಿ, ಹಂದಿ ಇವುಗಳನ್ನು ಕೊಲ್ಲಲು ಮುಂದೆ ಬಂದ ವೀರರು ಅವರ ಜೊತೆಗಾರನಾಗಿ ಬೇಟೆಯಲ್ಲಿ ನೆರವಾದ ಪ್ರಾಣಿಗಳ ಒಂದೆರಡು ಉಲ್ಲೇಖಗಳು ಇಲ್ಲಿ ಸಿಕ್ಕುತ್ತವೆ.

ಕೋಲಾರಜಿಲ್ಲೆ, ತಾವರೆಕೆರೆಯ ಶಾಸನದಲ್ಲಿ ದಿಲೀಪ ನೊಳಂಬನು ಆಳುತ್ತಿದ್ದ "ಮಣ್ಡಿಕಲ್ಲ ಕಮ್ಬಳದಾನವಮ್ಮೆರ್ಕಡಸಂ ಪೆರ್ಬುಲಿ ಕೊಣ್ಡೊಡೆ ಆ ಪುಲಿಯ ಕೊಲ್ವೆನೆಂದು ಪ್ರತಿಜ್ಞೆ ಕಡಿದು ಜಾಮದಿನ್ದೊಳಗೆ ಕೊನ್ದಂ ಪುಲಿಯು ನಾಯುಮೊಡಸತ್ತ" ಎಂಬ ಉಲ್ಲೇಖವಿದೆ.

> ಸ್ವಸ್ತಿ ಶ್ರೀದಿಲೀಪನೊಳಂಬಂ ಪೃತಿವೀರಾಜ್ಯಂಗೆಯುತ್ತಿರೆ
> ಮಂಡಿಕಲ್ಲ ಕಂಬಲದಾನವೆಮ್ಮೆರ್ಕಡಸಂ ಪೆರ್ಬುಲಿ ಕೊಂಡೋಡೆ
> ಆ ಪುಲಿಯಂಕೊಲ್ವೆನೆಂದು ಪ್ರತಿಜ್ಞೆ ಕಡಿದು ಜಾಮದಿಂದೊಳಗೆ
> ಕೊಂದಂ ಪುಲಿಯುಂ ನಾಯಮೊಡಸತ್ತನ್ ಬೇಸಗೆಯ್ದೊಂ
> ಕಾಯತೂರ ಕಾಸಿಗಂ ವಿಕ್ರಮಾದಿತ್ಯನ್ ಬಹುಗುಣತೇಜನ್ ॥

ಈ ಶಾಸನದ ವೀರನು ಪ್ರತಿಜ್ಞೆ ಮಾಡಿದ್ದಂತೆ ಜಾವದೊಳಗೆ ಪೆರ್ಭುಲಿಯುನ್ನು ಕೊಂದು ತನ್ನ ಜೊತೆಗಾರನಾಗಿ ಹುಲಿಯ ಜೊತೆ ಹೋರಾಡಿದ ನಾಯಿ ಮತ್ತು ಆತನು ಸತ್ತದ್ದನ್ನು ತಿಳಿಸುತ್ತದೆ.[79] ನಾಯಿ ಇಂದಿಗೂ ತನ್ನ ಯಜಮಾನನಿಗೆ ನಿಷ್ಠೆ ತೋರಿಸುವ ಸಾಕು ಪ್ರಾಣಿ. ತನಗೆ ತುತ್ತು ಹಾಕಿ ಸಾಕಿದ ಯಜಮಾನ ಹುಲಿಯ ಜೊತೆಯಲ್ಲಿ ಹೋರಾಡುತ್ತಿದ್ದುದನ್ನು ಕಂಡ ಆ ಮೂಕಪ್ರಾಣಿಯು ಸಹಾಯ ಮಾಡಿದುದನ್ನು ಈ ಶಾಸನದಿಂದ ತಿಳಿಯಬಹುದು. ಕುಂದಪಲ್ಲಿಯ ಶಾಸನದಲ್ಲಿ "ಪಂಡೆಗ ಪುಲಿಯ್ಯನಿಱಿದು ಒಡ ಸತ್ತ" ಎಂದು ತಿಳಿಸುತ್ತದೆ.[80] ಈ ಶಾಸನ ಸ್ಪಷ್ಟವಿಲ್ಲದಿದ್ದರೂ ಪಂಡೆಗ ಎನ್ನುವ ವ್ಯಕ್ತಿ ಹುಲಿಯನ್ನು ಇರಿದು ಆತನು ಸತ್ತಿರಬಹುದೆಂದು ತಿಳಿಯಬಹುದು. ಅನಂತಪುರ ಜಿಲ್ಲೆಯ ಗೊಲ್ಲರಹಟ್ಟಿ ಶಾಸನದಲ್ಲಿ 'ನಾಯ್ಪೂಣಿಗನೆಂಬುದು ಪನ್ದಿಯುನ್ನಾನು ಪೊಡ ಸತ್ತತ್ತು' ಪೂಣಿಗ ಎಂಬ ಈ ಬೇಟೆ ನಾಯಿಯು ಹಂದಿಯೊಡನೆ ಹೋರಾಡಿ ಸತ್ತದ್ದಕ್ಕೆ ಸ್ಮಾರಕ ನಿಲ್ಲಿಸಿ ಆ ಪ್ರಾಣಿಗೆ ಗೌರವ ಸಲ್ಲಿಸಿರುವುದನ್ನು ತಿಳಿಯಬಹುದು.[81] ಇದೇ ಜಿಲ್ಲೆಯ ಪಡುವಲ ಬ್ಯಾಡಗೆರೆಯ ಶಿಥಿಲವಾದ ಈ ಶಾಸನದಲ್ಲಿ ನೊಳಂಬಾಧಿ ರಾಜನು ಆಳುತ್ತಿದ್ದಾಗ '... ಬೇ ... ಮುಣ್ಡಕಿಚ್ಚುವೊಕ್ಕಡೆ ನಿಱಿಸಿದ ಕಲ್ಲ' ಒಬ್ಬ ವ್ಯಕ್ತಿ ಬೆಂಕಿಯನ್ನು ಹೊಕ್ಕು ಸತ್ತದನ್ನು ಮಾತ್ರ ತಿಳಿಸಿ ಅವನಿಗೆ ಕಲ್ಲು ನೆಟ್ಟದ್ದನ್ನು ಉಲ್ಲೇಖಿಸುತ್ತದೆ.[82] ಆದರೆ ಯಾರಿಗಾಗಿ, ಯಾವುದಕ್ಕಾಗಿ ಬೆಂಕಿಯನ್ನು ಹೊಕ್ಕನೆಂದು ಈ ಶಿಥಿಲವಾದ ಶಾಸನದಿಂದ ಸ್ಪಷ್ಟವಾಗದಿದ್ದರೂ ಒಬ್ಬ ವ್ಯಕ್ತಿ ತನ್ನ ಪ್ರಾಣವನ್ನು ತ್ಯಾಗ ಮಾಡಿದ್ದನ್ನು ತಿಳಿಯಬಹುದು.

## ಕಳ್ಳರೊಡನೆ ಹೋರಾಟ ಮಾಡಿದ ವೀರರು

ಕಳ್ಳತನವನ್ನೇ ತಮ್ಮ ಕಸುಬನ್ನಾಗಿ ಮಾಡಿಕೊಂಡವರು ರಾತ್ರಿಯ ವೇಳೆ ಊರುಗಳಿಗೆ, ಮನೆಗಳಿಗೆ ನುಗ್ಗಿ ಮನೆಯಲ್ಲಿದ್ದ ವಸ್ತುಗಳನ್ನು ಅಪಹರಿಸುತ್ತಿದ್ದರು. ಕೆಲವು ವೇಳೆ ದೇವಾಲಯಗಳಿಗೆ, ನುಗ್ಗಿ ದೇವರ ಒಡವೆ ವಸ್ತ್ರಗಳನ್ನು ಕಳವು ಮಾಡುತ್ತಿದುಂಟು. ಒಂಟಿಯಾಗಿ ಪ್ರಯಾಣ ಮಾಡುತ್ತಿದ್ದವರ ಮೇಲೆಯೂ ಬಿದ್ದು ಸುಲಿಗೆ, ಮಾಡಿರುವುದನ್ನು ತಿಳಿದಿದ್ದೇವೆ. ನೊಳಂಬರ ಕಾಲದಲ್ಲಿಯೂ ಕಳ್ಳತನಗಳು ನಡೆದು ಕಳ್ಳರೊಡನೆ ಹೋರಾಡಿ ಮಾಡಿದವರ ವೀರಗಲ್ಲುಗಳು ದೊರೆಯುತ್ತವೆ. ಊರಿಗೆ ನುಗ್ಗಿದ ಕಳ್ಳರನ್ನು ಓಡಿಸುವುದು ಆ ಊರಿನವರ ಕರ್ತವ್ಯವಾಗಿತ್ತು. ಇಂತಹ ಸಂದರ್ಭಗಳಲ್ಲಿ ಧೈರ್ಯ ಸಾಹಸಗಳನ್ನು ಮೆರೆದು ಸತ್ತವರನ್ನು ವೀರರೆಂದು ಭಾವಿಸಿ ಜನ ಗೌರವಿಸುತ್ತಿದ್ದರು. ಮತ್ತು ಅವರ ಹೆಸರಿನಲ್ಲಿ ವೀರ ಸ್ಮಾರಕಗಳನ್ನು ಸಹ ಹಾಕಿಸಿ ಅವರ ನೆನಪು ಚಿರಸ್ಥಾಯಿಯಾಗಿರುವಂತೆ ಮಾಡುತ್ತಿದ್ದರು. ಈ ಬಗೆಯ ವೀರಗಲ್ಲುಗಳು ಧರ್ಮಪುರಿ ಜಿಲ್ಲೆಯ ನವಲೈ[83] ಕೋಲಾರ ಜಿಲ್ಲೆಯ ನೆಕ್ಕುಂದಿ,[84] ಯಲಬುರಿಗೆ,[85] ಅನಂತಪುರ

ಜಿಲ್ಲೆ ಹೊನ್ನೇರಲಿಹಳ್ಳಿಯ ಕ್ರಿ.ಶ.೯೬೩ ರ ಇರಿವನೊಳಂಬ ನೊಳಿಪಯ್ಯನ ಕಾಲದ ಶಿಥಿಲವಾದ ಈ ಶಾಸನದಲ್ಲಿ ಅಲ್ಲೆಯನೂರಿನಲ್ಲಿ ಕಳ್ಳರೊಡನೆ ಕಾದಿದ ಐದು ಜನರ ಉಲ್ಲೇಖವಿದ್ದು ಸತ್ತವನಿಗೆ ಕಲ್ಲು ಹಾಕಿಸಿರುವುದು ತಿಳಿಯುತ್ತದೆ.[86]

ನಮ್ಮ ಜನತೆ ದೇಶಕ್ಕಾಗಿ, ರಾಜನಿಗಾಗಿ ಅಥವಾ ಜನರಿಗೆ ಕಿರುಕುಳ ಕೊಡುತ್ತಿದ್ದವರ ವಿರುದ್ಧ ಹೋರಾಡಿ, ತಮ್ಮ ಅಮೂಲ್ಯವಾದ ಪ್ರಾಣವನ್ನು ತ್ಯಾಗ ಮಾಡುತ್ತಿದ್ದರು. ಅಂತಹ ವೀರರನ್ನು ತಮ್ಮ ಮುಂದಿನ ತಲೆಮಾರಿನವರಿಗಾಗಿ ಇಂತಹ ವೀರಗಲ್ಲು ಅಥವಾ ಸ್ಮಾರಕಗಳನ್ನು ನಿಲ್ಲಿಸಿ ಗೌರವಿಸಿದ್ದಾರೆ. ಮತ್ತು ಮುಂದಿನ ಜನಾಂಗಕ್ಕೆ ಮಾರ್ಗದರ್ಶಕರಾಗಿದ್ದಾರೆ ಎಂಬುದರಲ್ಲಿ ಸಂಶಯವಿಲ್ಲ.

✦✦

## ಟಿಪ್ಪಣಿಗಳು

1. EC.XI.Cl.8.
2. EC.XII.Tp.47.
3. [illegible]
4. EC.X.Kl.79.
5. EC.X.Mb.248
6. EC.IX.Db.3; Kn.52; EC.XII.Si.26.
7. SII.VII.No.2.
8. SII.IX.Pt.No.13.
9. EC.X.Sp.30.
10. EC.IX.Bn.95.
11. MAR.1926.P.71; EC,X.Kl.52.
12. ARIE.1977-78.B.245.
13. EC.X.(R).No.116
14. EC.X.Pt.2.No.52.
15. EC.XII.Mi.71.
16. EC.VI.(R).No.47.
17. [illegible]
18. EC.XI.(R). No.99.
19. EC.X.Sp.27.
20. SII.IX.Pt.1.No.25.
21. EC.IX.Ht.47.
22. [illegible]
23. EC.X.(R).Ch.128; Ak.284.
24. EC.XI.Hr.1.
25. EC.VII.Sm.8.
26. EC.XVII.Sppl.169.
27. EC.X.Gb.77.
28. EC.X.Mb.31.
29. MAR.1927.Mb.100.
30. MAR.1927.101
31. EC.XI.Cl.No.6.
32. EC.XII.Si.29.
33. EC.X.Mb.91.
34. EC.XVII.Suppl.94, 95.
35. EC.X.Cm.118.
36. [illegible]

37. EC.X.X.Sp.14.
38. EC.X.Mb.161
39 MAR.1924.No.47.
40. EC.XI.CI.56.
41. ಕ.ವಿ.ಶಾ.ಸಂ.೪.ನಂ.೧೮೨.
42. EC.X.KI.Pt.2.33.
43. MAR.1926.No.90.
44. EC.X.Pt.2.No.116.
45. EC.X.Sg.39.
46. EC.X.Pt.2.No.33.
47. EC.X.Bp.64.
48. EC.IX.Ht.9.
49. EC.IX.Ht.110.
50. ಕ.ವಿ.ಶಾ.ಸಂ.೪.ನಂ.೩೬.
51. ARIE.1972-73, No.287.
52. Ins.of Pallavas.p.No.520.
53. ಕ.ವಿ.ಶಾ.ಸಂ.೪. ನಂ.೫೮.
54. ಕ.ವಿ.ಶಾ.ಸಂ..೪.ನಂ.೧೨೨.
55. ARIE.1972-73.No.282.
56. EC.IX.Dg.69.
57. EC.X.Bp.41,42.
58. EC.X.58.Pt.2.No.85, 86.
59. EC.X.Sp.29.
60. ಕ.ವಿ.ಶಾ.ಸಂ.೪.ನಂ.೫೮.
61. ಕ.ವಿ.ಶಾ.ಸಂ.೪.ನಂ.೯೭.
62. ಕ.ವಿ.ಶಾ.ಸಂ.೪.ನಂ.೫೨, ೫೩.
63. SII.IX.Pt.1.No.22.
64. EC.X.Pt.2.Sg.32.
65. EC.X.Pt.2.Sg.59.
66. MAR.1923.No.32.
67. EC.X.Mg.108.
68. MAR.1923.No.55.
69. MAR.1924.No.45.
70. MAR.1923.No.34
71. EC.X.Mb.93,94,96.
72. MAR.1927.No.99.
73. EC.XII.Si.59.
74. ARIE.1972-73.No.277.

75. ಕ.ವಿ.ಶಾ.ಸಂ.೪.ನಂ.೧೧೧.
76. ಕ.ವಿ.ಶಾ.ಸಂ.೪.ನಂ.೧೦೮.
77. ಕ.ವಿ.ಶಾ.ಸಂ.೧.ಹರಪ.೯.
78. MAR.1924.No.47.
79. EC.X.Mb.162.
80. ಕ.ವಿ.ಶಾ.ಸಂ.೪.ನಂ.[illegible]
81. SII.IX.Pt.1.No.37.
82. SII.IX.Pt.1.No.35.
83. ARIE.1967-68.No.242.
84. EC.XVII.Suppl.165.
85. EC.XVII.Bp.93,96.
86. SII.IX.Pt.1.No.29.

# ಅಧ್ಯಾಯ – VI

## ನೊಳಂಬರ ಆಡಳಿತ ವಿಭಾಗಗಳು

ಕರ್ನಾಟಕದಲ್ಲಿ ಆಳಿದ ಪ್ರಮುಖ ರಾಜಮನೆತನಗಳಲ್ಲಿ ನೊಳಂಬ ಪಲ್ಲವರದ್ದೂ ಒಂದು. ಇವರು ಸುಮಾರು ಮೂರು ಶತಮಾನಗಳ ಕಾಲ ಕರ್ನಾಟಕದ ಬೇರೆ ಬೇರೆ ಭಾಗಗಳನ್ನು ಆಳಿದರು. ಆರಂಭದಲ್ಲಿ ಬಾದಾಮಿ ಚಲುಕ್ಯರ ಮತ್ತು ತಲಕಾಡಿನ ಗಂಗರೊಡನೆ ಮೈತ್ರಿಯಿಂದ ಅವರ ಸಾಮಂತರಾಗಿ ಆಳಿ, ತಮ್ಮ ಶೌರ್ಯ ಮತ್ತು ಚತುರತೆಯಿಂದ ತಮ್ಮದೇ ಆದ ಒಂದು ಸಣ್ಣ ರಾಜ್ಯವನ್ನು ಕಟ್ಟಿಕೊಂಡರು. ಇವರು ಆರಂಭದಲ್ಲಿ ನೊಳಂಬಳಿಗೆ ಸಾಸಿರ ಎಂಬ ಪ್ರದೇಶವನ್ನು ಆಳುತ್ತಿದ್ದರು. ಈ ವಂಶದ ಮೂರನೆಯ ತಲೆಮಾರಿನ ಸಿಂಹಪೋತ ಕಲಿನೊಳಂಬಾಧಿರಾಜನ ಮಗ ಚಾರುಪೊನ್ನೇರನು ತಾನು ಆಳ್ವಿಕೆ ಮಾಡುತ್ತಿದ್ದ ಪ್ರದೇಶವನ್ನು ತಮ್ಮ ವಂಶದ ಹೆಸರಿನ 'ನೊಳಂಬಳಿಗೆ ಸಾಸಿರ'ವೆಂದು ಕರೆದನು. ಕಾಲಕ್ರಮೇಣ ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಂಡು ನೊಳಂಬವಾಡಿ–೩೨೦೦೦ ಎಂಬ ವಿಸ್ತಾರ ಪ್ರದೇಶದ ಒಡೆಯರಾಗಿ ಆಳ್ವಿಕೆ ಮಾಡಿದರು. ಅನಂತರ ಈ ವಂಶದ ಅರಸರು ತಮ್ಮ ಪ್ರಭಾವದಿಂದ ಕರ್ನಾಟಕದ ಚಿತ್ರದುರ್ಗ, ತುಮಕೂರು, ಕೋಲಾರ, ಬೆಂಗಳೂರು, ಹಾಸನ, ಬಳ್ಳಾರಿ, ಆಂಧ್ರಪ್ರದೇಶದ ಅನಂತಪುರ, ಚಿತ್ತೂರು, ತಮಿಳುನಾಡಿನ ಉತ್ತರ ಆರ್ಕಾಟು, ಧರ್ಮಪುರಿ ಜಿಲ್ಲೆಗಳನ್ನೊಳಗೊಂಡ ಪ್ರದೇಶಗಳ ಮೇಲೆ ತಮ್ಮ ಆಧಿಪತ್ಯವನ್ನು ವಿಸ್ತರಿಸಿದರು. ಈಗಿನ ಆಂಧ್ರಪ್ರದೇಶದ ಮಡಕಶಿರಾ ತಾಲೂಕಿನ ಪೆಂಜೇರು/ಹೆಂಜೇರು ಅಥವಾ ಈಗಿನ ಹೇಮಾವತಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಈ ವಂಶದ ಮಹತ್ವಾಕಾಂಕ್ಷಿ ದೊರೆಯಾದ ಒಂದನೆಯ ಮಹೇಂದ್ರನು ಗಂಗವಾಡಿಯ ಕೆಲವು ಪ್ರದೇಶಗಳಿಗೂ ತನ್ನ ರಾಜ್ಯವನ್ನು ವಿಸ್ತರಿಸಿದ್ದನು. ಇವನು 'ಷಣ್ಣವತಿ ಸಹಸ್ರ ಪ್ರಮುಖ ಗಂಗ ಮಂಡಳ ವಿಳಾಸಿನೈಕ ವಲ್ಲಭೋ ಮಹೇಂದ್ರ'ನೆಂಬ ಬಿರುದನ್ನು ಧರಿಸಿದ್ದಂತೆ[1] ಅವನ ನಂತರದ ಅರಸರ ಶಾಸನಗಳು ಉಲ್ಲೇಖಿಸುತ್ತವೆ.

ಇಷ್ಟು ವಿಸ್ತಾರವಾದ ಪ್ರದೇಶಗಳನ್ನು ಆಳುತ್ತಿದ್ದು, ಉತ್ತಮ ಆಡಳಿತ ನಡೆಸಲು ಅನುಕೂಲವಾಗುವಂತೆ ಅನೇಕ ಪ್ರಾಂತ್ಯಗಳನ್ನಾಗಿ, ಆ ಪ್ರಾಂತ್ಯಗಳನ್ನು ಉಪವಿಭಾಗಗಳಾಗಿ ವಿಂಗಡಿಸಿ,

ಅವುಗಳನ್ನು ನಾಡು, ವಿಷಯ, ದೇಶ, ಹಳ್ಳಿಗಳೆಂದು ಕರೆಯುತ್ತಿದ್ದರು. ಹಳ್ಳಿ ಆಡಳಿತದ ಕನಿಷ್ಟ ಘಟಕವೆಂದು ಶಾಸನಗಳಲ್ಲಿ ಕರೆದಿರುವುದು ತಿಳಿಯುತ್ತದೆ.[2] ಈ ವಿಂಗಡಿಸಿಕೊಂಡ ಪ್ರದೇಶಗಳಿಗೆ, ನಾಡುಗಳಿಗೆ ರಾಜವಂಶದ ವ್ಯಕ್ತಿಗಳನ್ನು ನೇಮಿಸುವ ಪದ್ಧತಿ ಇತ್ತು. ಈ ನಾಡುಗಳು ಕೆಲವು ಅರಸರ ಕಾಲದಲ್ಲಿ ಕಾಣಿಸಿಕೊಂಡು ಮತ್ತೆ ಕೆಲವು ಅರಸರ ಆಳ್ವಿಕೆಯಲ್ಲಿ ಪ್ರಾಮುಖ್ಯತೆಯನ್ನು ಕಳೆದುಕೊಂಡಿರಬಹುದು. ಆದರೆ ಅವರ ವಂಶದ ಹೆಸರಿನ ನಾಡನ್ನು ಅವರ ಆಳ್ವಿಕೆಯ ಉದ್ದಕ್ಕೂ ಉಳಿಸಿಕೊಂಡು ಬಂದಿದ್ದಾರೆ.

ಬೇರೆ ಬೇರೆ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಕೆಲವು ಆಡಳಿತ ವಿಭಾಗಗಳನ್ನು ಗಮನಿಸಿದಾಗ ಒಂದು ರಾಜವಂಶದ ಪತನಾನಂತರ ಅವರ ಆಳ್ವಿಕೆಯ ಪ್ರದೇಶಗಳನ್ನು ಆಕ್ರಮಿಸಿಕೊಂಡು ತಮ್ಮ ಸಾಧನೆಯ ದಿಗ್ವಿಜಯದ ದ್ಯೋತಕವಾಗಿ ಆ ರಾಜವಂಶಗಳ ಮೂಲ ಹೆಸರಿನಲ್ಲೇ ಕರೆಯುತ್ತಿದ್ದ ಅಂಶ ತಿಳಿದು ಬರುತ್ತದೆ. ಹೀಗೆ ಇವರ ನೊಳಂಬವಾಡಿ-೩೨೦೦೦ ಪ್ರದೇಶವಾಚಿಯನ್ನು ಪಾಂಡ್ಯರು ಬಳಸಿಕೊಂಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ನೊಳಂಬ ರಾಜ್ಯದ ಕೆಲವು ಆಡಳಿತ ವಿಭಾಗಗಳನ್ನು ಗುರುತಿಸುವುದು ಕಷ್ಟಸಾಧ್ಯ. ಈ ಪ್ರದೇಶಗಳ ಹೆಸರಿನ ಜೊತೆ ಸಂಖ್ಯೆಗಳೂ ಕಂಡುಬರುತ್ತವೆ. ಸ್ಥಳಸೂಚಿಯ ಜೊತೆಯಲ್ಲಿ ಸಂಖ್ಯೆಗಳನ್ನು ಸೇರಿಸಿರುವ ಬಗ್ಗೆ ವಿದ್ವಾಂಸರು ಸಾಕಷ್ಟು ಚರ್ಚೆ ನಡೆಸಿದ್ದಾರೆ. ಈ ಸಂಖ್ಯೆಗಳು ಆ ಪ್ರದೇಶದ ಎಲ್ಲ ಹಳ್ಳಿಗಳ ಮೊತ್ತವೆಂದೂ, ಕಂದಾಯದ ಒಟ್ಟು ಲೆಕ್ಕವೆಂದೂ, ಮಹಾಜನರ ಸಂಖ್ಯೆ ಎಂದೂ, ವಿಸ್ತೀರ್ಣವನ್ನು ಸೂಚಿಸುವ ಸಂಖ್ಯೆ ಎಂತಲೂ ವಾದವನ್ನು ಮಂಡಿಸಿದ್ದಾರೆ. ಈ ವಿಷಯದಲ್ಲಿ ವಿದ್ವಾಂಸರು ಒಮ್ಮತಕ್ಕೆ ಬರಲಾಗಿಲ್ಲ.[3]

ಈ ಆಡಳಿತ ವಿಭಾಗಗಳಲ್ಲಿ ಕೆಲವನ್ನು ಅರಸರು, ರಾಣಿಯರು, ರಾಜಕುಮಾರರು ಆಳುತ್ತಿರುವುದನ್ನು ಕೆಲವು ಶಾಸನಗಳು ಉಲ್ಲೇಖಿಸಿದ್ದರೆ, ಮತ್ತೆ ಕೆಲವು ಶಾಸನಗಳು ನೊಳಂಬ ರಾಜ್ಯದ ವಿವಿಧ ಭಾಗಗಳ ಹೆಸರುಗಳು ಯಾವುದಾದರೂ ದಾನ-ದತ್ತಿಗಳನ್ನು ನೀಡುವಾಗ ಅಥವಾ ಭೂದಾನದ ಮೇರೆಯನ್ನು ನಿರ್ದೇಶಿಸುವಾಗ ಉಲ್ಲೇಖಗೊಂಡಿದೆ.

ನೊಳಂಬರ ಶಾಸನಗಳಿಂದ ತಿಳಿದು ಬರುವ ನಾಡುಗಳೆಂದರೆ :

೧) ಅರ್ಮಳೆ-೧೨
೨) ಆವನಿ-೩೦
೩) ಆವನ್ಯ-೩೦
೪) ಉಚ್ಚಂಗಿ-೩೦
೫) ಎಡದೊರೆ-೨೦೦೦
೬) ಕಣೆಯಕಲ್ಲು-೩೦೦
೭) ಕದಂಬಳಿಗೆ-೧೦೦೦
೮) ಕರಿವಿಡಿ-೩೦
೯) ಕಿಸುಕಾಡು-೭೦
೧೦) ಕುಂದೂರು-೩೦

೧೧) ಕುದಿಯ ಪರವಿ-೭೦
೧೨) ಕೋಗಳಿ-೫೦೦
೧೩) ಗಂಗ-೬೦೦೦
೧೪) ಗಂಗವಾಡಿ-೯೬೦೦೦
೧೫) ಗಂಗವೂರು-೩೦
೧೬) ಗಲ್ವಾಡಿ-೩೦೦
೧೭) ತರ್ದವಾಡಿ-೧೦೦೦
೧೮) ನೀರ್ಗುಂದ ನಾಡು-೩೦೦
೧೯) ನೊಳಂಬವಾಡಿ-೩೨೦೦೦
೨೦) ನೊಳಂಬಳಿಗೆ-೧೦೦೦
೨೧) ನೆಲ್ಗುಂಡಿ-೧೨
೨೨) ಪುಲಿನಾಡು
೨೩) ಪುಲಿಗೆರೆ-೩೦೦
೨೪) ಮಾಲ್ದರ್ಪ್ಪನ್ನೆರಡು
೨೫) ಮಾಸೆಯವಾಡಿ-೧೪೦ರೊಳಗಣ ಪಂಚಗ್ರಾಮ
೨೬) ಮೊರಸುನಾಡು
೨೭) ಬನವಾಸಿ-೧೨೦೦೦
೨೮) ಬಲ್ಲಕುಂದೆ-೩೦೦
೩೦) ಬಾನವೂರ-೧೨
೩೧) ಭ್ರಾಂತಿಕಡ-೩೦
೩೨) ಬೆಳವಲ-೩೦೦
೩೩) ಬಿಕ್ಕಿಗ ೭೦
೩೪) ಕೋಳೂರು-೧೨
೩೫) ಚಿರಪಿ-೧೨
೩೬) ಸಿಂದವಾಡಿ-೧೦೦೦

ಇವಲ್ಲದೆ ಮದರಿಕಲ್ಲು, ತ್ರೈಲೋಕ್ಯಪೊಳಲು ಮುಂತಾದ ಗ್ರಾಮಗಳು ನೇರವಾಗಿ ಯಾರ ಆಡಳಿತಕ್ಕೂ ಸೇರದೆ ಪ್ರತ್ಯೇಕವಾಗಿದ್ದವು.

**ಅರ್ಮಳೆ – ೧೨**

ಶಾಸನಗಳಲ್ಲಿ ಅಮ್ಮವಳ್ಳಿ,[4] ಅಮ್ಮಳೆ,[5] ಅರ್ಮಳೆ,[6] ಎಂದು ಕರೆದಿದೆ. ಇದು ನೆಲ್ಲುದುರೆ, ಸೊನ್ನ, ಪೊಳಲ್ಗುಂದೆ, ಸೂಗೂರು, ಮೋರಿಂಗೆರೆ ಮುಂತಾದ ಹನ್ನೆರಡು ಹಳ್ಳಿಗಳ ಕೇಂದ್ರ ಸ್ಥಾನವಾಗಿದ್ದಿತು. ಈ ನಾಡಿನ ಪ್ರಾಚೀನ ಉಲ್ಲೇಖ ಕ್ರಿ.ಶ.ಸು. ೯೦೦ ರ ಒಂದನೆಯ ಮಹೇಂದ್ರನ ಕಾಲದ ಶಾಸನದಲ್ಲಿ ಉಲ್ಲೇಖವಾಗಿದ್ದು ಮುಂದೆ ಕ್ರಿ.ಶ. ೧೦೪೬ ರ ತ್ರೈಲೋಕ್ಯಮಲ್ಲ ನನ್ನಿನೊಳಂಬನ ಶಾಸನದಲ್ಲಿ ಉಕ್ತವಾಗಿದೆ. ಅಲ್ಲಿಂದ ಮುಂದಿನ ಶಾಸನಗಳಲ್ಲಿ ಈ ನಾಡಿನ ಉಲ್ಲೇಖ ಕಾಣಬರುವುದಿಲ್ಲ. ಎಂ.ಎಸ್.ಕೃಷ್ಣಮೂರ್ತಿಯವರು ಇದರ ಬಗ್ಗೆ ನಿಖರವಾದ ವಿವರಗಳಿಲ್ಲ ಎಂದಿದ್ದಾರೆ. ಈಗಿನ ಹಗರಿಬೊಮ್ಮನಹಳ್ಳಿ ತಾಲೂಕಿನ ಅಂಬಳಿಯೇ ಹಿಂದಿನ ಅರ್ಮೈಳೆ ಅಥವಾ ಅಮ್ಮವಳ್ಳಿ ಆಗಿದೆ. ಇದು ಹಗರಿಯ ದಡದಲ್ಲಿದ್ದು, ಕೋಗಳಿಯ ಉತ್ತರಕ್ಕಿದ್ದು ಬಹುಶಃ ಕೋಗಳಿ ನಾಡಿನಲ್ಲಿ ಅಂತರ್ಗತವಾಗಿತ್ತು. ಒಂದನೆಯ ಮಹೇಂದ್ರನ ಕಾಲಕ್ಕಾಗಲೇ ಈ ಪ್ರದೇಶ ಅವರ ಅಧೀನದಲ್ಲಿತ್ತೆಂದು ತಿಳಿದುಬರುತ್ತದೆ.

ಅಲ್ಲದೆ ಉದಯಾದಿತ್ಯನಿಗೆ ಪರೋಕ್ಷವಿನಯವಾಗಿ 'ಲೆಂಕಸಾಸಿರ್ವರು ಅಮ್ಮಳ್' ಮುಂತಾದುವುಗಳನ್ನು ಆಳುತ್ತಿರುವ ಉಲ್ಲೇಖವಿದ್ದು, ತಿಕಣ್ಣ ದಂಡನಾಯಕನ ನಿಯೋಗ ನೊಳಂಬೇಶ್ವರ ಮತ್ತು ಲೆಂಕೆಶ್ವರ ದೇವಾಲಯಗಳನ್ನು ಮಾಡಿಸಿ ದೇವರ ರಂಗಭೋಗಕ್ಕೆ, ಪಾದಮೂಲ ಪರಿವಾರಕ್ಕೆ, ಮಠದ ವಿದ್ಯಾದಾನಕ್ಕೆ ಬಿನ್ನಹವನ್ನು ಮಾಡಿ ಸವಂಟೆಯ ಪಾಳಂ ಪಡೆದು ಅದಕ್ಕೆ ಶಿವಪುರವೆಂದು ಹೆಸರನ್ನಿಟ್ಟಿರುವುದು ತಿಳಿಯುತ್ತದೆ.[7]

ಆವನ್ಯ-೩೦

ಆವನಿ ನಾಡಿನ ಉಲ್ಲೇಖ ಕ್ರಿ.ಶ.ಸು.೯೫೦ ರ ಶಾಸನದಲ್ಲಿ ಉಲ್ಲೇಖವಾಗಿದೆ.[8] ಅದರಲ್ಲಿ ಆವನ್ಯದ ಸ್ಥಾನ-೧೨ ಎಂದು ಕರೆಯಲಾಗಿದೆ. ಮತ್ತೆ ಕೆಲವು ಶಾಸನಗಳಲ್ಲಿ ಆವನ್ಯ-೩೦ ಎಂದೂ ಕರೆಯಲಾಗಿದೆ. ಮುಂದೆ ನೊಳಂಬರು ಹೆಂಜೇರನ್ನು ಬಿಟ್ಟು ಕಂಪಿಲಿಗೆ ಹೋಗುವವರೆಗೆ ಈ ಆವನ್ಯ ನಾಡು ಪ್ರಸಿದ್ಧಿಯನ್ನು ಪಡೆದಿತ್ತು. ಈ ಆವನ್ಯ ಸ್ಥಾನವು ನೊಳಂಬರ ಆಳ್ವಿಕೆಗೆ ಒಳಪಟ್ಟಿದ್ದರೂ ದಿಲೀಪ ಮತ್ತು ಅವನ ಮಗ ಇಮ್ಮಡಿ ಮಹೇಂದ್ರನ ಕಾಲದಲ್ಲಿ ಇದನ್ನು ತ್ರಿಭುವನ ಕರ್ತಾರದೇವನ ತಪೋರಾಜ್ಯವೆಂದು ಕರೆದಿದೆ. ಇವನನ್ನು 'ಆವನ್ಯದ ಸ್ಥಾನಪುರಪರಮೇಶ್ವರ ತ್ರಿಭುವನ ಕರ್ತಾರ ಪಂಡಿತರ್' ಎಂದು ಶಾಸನವೊಂದರಲ್ಲಿ ಉಲ್ಲೇಖಿಸಲಾಗಿದೆ. ಇದು ನೊಳಂಬರ ಕಾಲದಲ್ಲಿ ತ್ರಿಭುವನ ಕರ್ತಾರನಿಗಿದ್ದ ಸ್ಥಾನಮಾನವನ್ನು ತಿಳಿಸುತ್ತದೆ.[9] ಇವನ ಕಾಲದಲ್ಲಿ ಈ ಆವನ್ಯಕ್ಕೆ ಬಾಣರವಾಡಿ-೧೨೦೦೦, ಗಂಗವಾಡಿ-೯೬೦೦೦ ದ ವ್ಯಾಪಾರಿಗಳು ವ್ಯಾಪಾರಕ್ಕೆ ಬಂದು ಹೋಗುತ್ತಿದ್ದ ಸಂಗತಿಯನ್ನು ಕ್ರಿ.ಶ.ಸು. ೯೫೦ ರಶಾಸನವೊಂದು ಉಲ್ಲೇಖಿಸುತ್ತದೆ.[10] ಈ ತ್ರಿಭುವನ ಕರ್ತಾರದೇವನು ತನ್ನ ಜೀವಿತದ ಕಾಲದಲ್ಲಿ ಎರಡು ದೊಡ್ಡ ಕೆರೆಗಳೂ ಸೇರಿದಂತೆ ೫೦ ದೇವಸ್ಥಾನಗಳನ್ನು ಕಟ್ಟಿಸಿದಂತೆ ಶಾಸನವೊಂದು ತಿಳಿಸುತ್ತದೆ.[11]

ಕ್ರಿ.ಶ.ಸು.೧೦೦೭ ರಲ್ಲಿ ಈತ ಸತ್ತಾಗ ಇವನ ಹೆಸರಿನಲ್ಲಿ ಇವನ ಶಿಷ್ಯ ಆವನ್ಯದಲ್ಲಿ ಇವನ ನೆನಪಿನಲ್ಲಿ ದೇವಾಲಯವನ್ನು ಕಟ್ಟಿಸುತ್ತಾನೆ. ಆವನ್ಯದ ಉಲ್ಲೇಖ ಮುಂದಿನ ನೊಳಂಬರ ಶಾಸನಗಳಲ್ಲಿ ಬರುವುದಿಲ್ಲ. ಈಗಿನ ಆವನಿಯೇ ಹಿಂದಿನ ಆವನ್ಯನಾಡಿನ ಕೇಂದ್ರಬಿಂದು. ಈ ನಾಡಿನ ಅನೇಕ ದೇವಾಲಯಗಳನ್ನು ಈ ತ್ರಿಭುವನ ಕರ್ತಾರದೇವನೇ ಕಟ್ಟಿಸಿರಬೇಕು. ಇವನ ಶಿಲ್ಪವು ಅಲ್ಲಿನ ಲಕ್ಷ್ಮಣೇಶ್ವರ ದೇವಾಲಯದ ಸೋಮಸೂತ್ರದ ಬಳಿ ಇದೆ.[12]

ಉಚ್ಚಂಗಿ-೩೦

ಉಚ್ಚಂಗಿಯು ಕದಂಬರ ಕಾಲದಲ್ಲಿ ಉಚ್ಚಶೃಂಗಿ ಎಂಬ ಹೆಸರನ್ನು ಪಡೆದಿತ್ತು. ಮುಂದೆ ಈ ಗ್ರಾಮವು ನೊಳಂಬವಾಡಿಯನ್ನು ಆಳಿದ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಗದೇವನ ಕಾಲದಲ್ಲಿ ನೊಳಂಬರಿಗೆ ಸೇರಿತ್ತು. ಇವನ ಕಾಲದಲ್ಲಿ ಉಚ್ಚಂಗಿ-೩೦ನ್ನು

ದಂಡನಾಯಕ ದಾಮಪಯ್ಯ ಎಂಬುವನು ಕ್ರಿ.ಶ.೧೦೭೦ ರಲ್ಲಿ ಆಳುತ್ತಿದ್ದನು.[13] ಉಚ್ಚಂಗಿಯ ಕೋಟೆಯಲ್ಲಿ ಕಾಳಾಮುಖ ಪಂಥದ ಕಂಟೆಯ ವಕ್ಕಾಣಿದೇವನ ಶಿಷ್ಯನಾದ ಸೋಮೇಶ್ವರಪಂಡಿತನು ಸ್ಥಾನಪತಿಯಾಗಿದ್ದನು. ಈ ನಾಡು ಅಲ್ಪ ಕಾಲಾವಧಿಯಲ್ಲಿ ಮಾತ್ರ ನೊಳಂಬರ ವಶದಲ್ಲಿತ್ತು.

**ಎಡದೊರೆ-೨೦೦೦**

ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ತಾಲೂಕು, ಬಾಳ್ಗುಳಿ ಗ್ರಾಮದಲ್ಲಿ ದೊರೆತ ಕ್ರಿ.ಶ. ೧೦೧೮ರ ಶಾಸನದಲ್ಲಿ ಎಡದೊರೆ-೨೦೦೦ ದ ಹೆಸರು ಉಲ್ಲೇಖವಾಗಿದೆ. ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮಾನಡಿ ಉದಯಾದಿತ್ಯನ ಆಳ್ವಿಕೆಯಲ್ಲಿದ್ದ ಗಂಗವಾಡಿ-೯೬೦೦೦, ಕದಂಬಳಿಗೆ-೧೦೦೦, ಕೋಗಳಿ-೫೦೦, ಮಾಸಿವಾಡಿ-೧೪೦ರೊಳಗಣ ಪಂಚಗ್ರಾಮಗಳು, ಬಲ್ಲಕುಂದೆ-೩೦೦ ಮತ್ತು ಎಡತೊರೆ-೨೦೦೦ದೊಳಗಣ ಕುದಿಹಾರ-೭೦ ಎಂದು ಉಲ್ಲೇಖವಾಗಿದೆ. ಎಡತೊರೆ ಪ್ರದೇಶವೆಂದರೆ ಹಿಂದಿನ ದೊ-ಅಬ್ ಪ್ರದೇಶ, ಅಂದರೆ ಕೃಷ್ಣಾ-ತುಂಗಭದ್ರೆಯ ಮಧ್ಯದ ಪ್ರದೇಶ.[14]

**ಕಣೆಯಕಲ್ಲು-೩೦೦**

ಈಗಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲೂಕಿನ ಗ್ರಾಮವಾಗಿದ್ದು ಹಗರಿಯ ತಡಿಯಲ್ಲಿದೆ. ತ್ರೈಳೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾನಡಿಯ ಕ್ರಿ.ಶ. ೧೦೫ರ ಶಾಸನದಲ್ಲಿ ಅವನ ಆಳ್ವಿಕೆಗೆ ಸೇರಿದ್ದಿತೆಂದು ಉಲ್ಲೇಖವಿದೆ. ಈಗಿನ ಕಣೆಯಕಲ್ಲು ಆಗಿನ ಕಣೆಯಕಲ್ಲು-೩೦೦ ರ ಕೇಂದ್ರಸ್ಥಳವಾಗಿತ್ತು.[15]

ಕದಂಬಳಿಗೆ-೧೦೦೦

ಈ ಪ್ರದೇಶ ಜಗದೇಕಮಲ್ಲ ನೊಳಂಬ ಪಲ್ಲವಪೆರ್ಮಾಡಿದೇವನ ಕ್ರಿ.ಶ. ೧೦೧೭ರ ಶಾಸನದಲ್ಲಿ ಉಲ್ಲೇಖವಾಗಿದೆ.[16] ಕದಂಬಳಿಗೆ ಸಾಸಿರದ ಮನ್ನೆಯ ಶೀಮತ್ನಾಗತಿಯರಸರು ಮತ್ತು ಉಚ್ಚಂಗಿಯನಾಳುತ್ತಿದ್ದ ಕುಮಾರ ಚೋರಯದೇವನು ಇದ್ದು ಅಸಗೊಡಿನ ಸ್ವಯಂಭೂದೇವರಿಗೆ ದಾನ ಮಾಡಿದ ಉಲ್ಲೇಖವಿದೆ.[17] ಈ ಶಾಸನದಲ್ಲಿ ಕದಂಬಳಿಗೆ ಸಾಯಿರದ ಬಳಿಯ ಕಂಪಣಕುನ್ದುರೆಪ್ಪತರೊಳಗಣ ಕುನ್ದೂರು, ಬನ್ನಿಕೋಡು, ಹಪ್ಪವನಹಾಳು, ನಿಟ್ಟೂರನ್ನು ಶ್ರೀಮನ್ನಾಗ್ಗಾವುಣ್ಡ ಬಿಲ್ಲಯ್ಯ ಆಳುತ್ತಿದ್ದಂತೆ ಉಲ್ಲೇಖವಾಗಿದೆ. ಕ್ರಿ.ಶ. ೧೦೩೬ ರಲ್ಲಿ ನೊಳಂಬ ಪಲ್ಲವಪೆರ್ಮಾಡಿಯು ಕದಂಬಳಿಗೆ ಸಾಯಿರವನ್ನು ಆಳುತ್ತಿದ್ದುದನ್ನು ಹಡಗಲಿ ಶಾಸನದಲ್ಲಿ ಉಕ್ತವಾಗಿದೆ.[18] ಇವನ ನಂತರ ಮುಂದಿನ ನೊಳಂಬ ಅರಸರ ಶಾಸನಗಳಲ್ಲಿ ಈ ಉಲ್ಲೇಖವಿಲ್ಲ. ಈ ಕದಂಬಳಿಗೆ-೧೦೦೦ ದಲ್ಲಿ ಕುಕ್ಕವಾಡಿ-೩೦೦, ಕೂರವಾಡಿ-೩೦೦, ಕುಂದೂರು-೭೦, ಭ್ರಾಂಥಿ-೩೦, ತಿಕಾಡು-೩೦, ಹೊಸ್ನುಂದ-೩೦, ಬೆಲ್ತುರು-೧೨, ಅತ್ತಿಗಳೆ-೧೨, ಪಡದೆ-೧೨, ಮುರ್ಚನೂರು-

೧೨ ಮುಂತಾದ ಬಾಡಗಳು ಸೇರಿದ್ದವೆಂದು ಪಿ.ವಿ. ಕೃಷ್ಣಮೂರ್ತಿಯವರು ಅಭಿಪ್ರಾಯಪಡುತ್ತಾರೆ. ಇವರ ಶಾಸನಗಳಲ್ಲಿ ಕದಂಬಳಿಗೆ-೧೦೦೦ ದ ಜೊತೆಗೆ ಇನ್ನು ಅನೇಕ ಪ್ರದೇಶಗಳಾದ ನೊಳಂಬವಾಡಿ-೩೨೦೦೦, ಕೋಗಳಿ-೫೦೦, ಬಲ್ಲಕುಂದೆ-೩೦೦, ಕುದಿಯ ಪರವಿ-೭೦, ಕರಿವಿಡಿ-೩೦, ಮಾಸೆಯವಾಡಿ-೧೪೦ರೊಳಗಣ ಪಂಚಗ್ರಾಮಗಳು, ಎಡದೊರೆ-೨೦೦೦, ಕಣೆಯಕಲ್ಲ್ಮೂನುರು ಮುಂತಾದ ಪ್ರದೇಶಗಳನ್ನು ನೊಳಂಬ ಅರಸರು ಆಳುತ್ತಿದ್ದುದನ್ನು ಶಾಸನಗಳು ಉಲ್ಲೇಖಿಸಿವೆ.

ಕದಂಬಳಿಗೆ ಸಾಯಿರದ ಪ್ರದೇಶದಲ್ಲಿನ ದೇವಸ್ಥಾನಗಳು ನೈಷ್ಠಿಕ ತಪೋಧನರಾದ ಕಾಳಾಮುಖ ಸ್ಥಾನಿಕರ ಆವಾಸಸ್ಥಾನವೂ ಆಗಿತ್ತು. ಬಳ್ಳಾರಿ ಜಿಲ್ಲೆ ಹರಪನಹಳ್ಳಿ ತಾಲೂಕಿನ ಕಡಬಗೆರೆ ಎಂಬ ಸ್ಥಳವು ಪ್ರಾಯಶಃ ಕದಂಬಳಿಗೆ ಸಾವಿರ ಪ್ರದೇಶಗಳ ಕೇಂದ್ರ ಸ್ಥಳವಾಗಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುತ್ತಾರೆ.[19]

**ಕರಿವಿಡಿ-೩೦**

ಈ ಪ್ರದೇಶವು ಎಡದೊರೆ ನಾಡಿನ ಭಾಗವಾಗಿದ್ದು ಕಂಪಿಲಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ನೊಳಂಬರ ವಶದಲ್ಲಿರುತ್ತದೆ. ಕ್ರಿ.ಶ. ೧೦೧೭ ರ ಜಗದೇಕಮಲ್ಲ ನೊಳಂಬ ಪಲ್ಲವಪೆರ್ಮಾನಡಿ ಉದಯಾದಿತ್ಯನ ಶಾಸನದಲ್ಲಿ ಈ ನಾಡು ನೊಳಂಬರ ಆಳ್ವಿಕೆಯಲ್ಲಿದ್ದಂತೆ ತಿಳಿಯುತ್ತದೆ.[20] ಇದು ಕ್ರಿ.ಶ.ಸು.೧೦೫೦ ರವರೆಗೆ ನೊಳಂಬರ ವಶದಲ್ಲಿದ್ದಂತೆ ತಿಳಿಯುತ್ತದೆ. ಇವರ ಮುಂದಿನ ಶಾಸನಗಳು ಈ ನಾಡಿನ ಬಗ್ಗೆ ಮೌನವನ್ನು ವಹಿಸಿವೆ.

**ಕಿಸುಕಾಡು-೭೦**

ರೋಣ ತಾಲೂಕಿನ ಕ್ರಿ.ಶ. ೧೦೬೯ ರಲ್ಲಿ ಭುವನೈಕಮಲ್ಲ ನೊಳಂಬಾಧಿರಾಜ ಸಿಂಗನದೇವ (ಮೂರನೆಯ ಜಯಸಿಂಹ)ನ ಕಾಲದಲ್ಲಿ ನೊಳಂಬರ ಆಳ್ವಿಕೆಗೆ ಒಳಪಟ್ಟಿತ್ತು. ಇದರಲ್ಲಿ ಅಚಲೇಶ್ವರ ದೇವರಿಗೆ ದಾನ ಕೊಟ್ಟಿದ್ದನ್ನು ಉಲ್ಲೇಖಿಸಿದೆ.[21] ಬಾದಾಮಿ ತಾಲೂಕಿನ ಕ್ರಿ.ಶ. ೧೦೭೦ ರ ಶಾಸನದಲ್ಲಿ ನೊಳಂಬ ಪಲ್ಲವಪೆರ್ಮಾನಡಿ ಸಿಂಗಣದೇವನು ಆಳ್ವಿಕೆ ಮಾಡುತ್ತಿರಲು ಪಟ್ಟಣಾಧಿಪತಿ ಕಿಸುವೊಳಲ ಮೂಲಸ್ತಾನದ ಮಹಾದೇವರ ಉಪಭೋಗಕ್ಕೆ ದಾನ ಮಾಡಿದ ಉಲ್ಲೇಖವಿದೆ.[22]

ಕಿಸುಕಾಡು ಪಾರಂಪರಿಕವಾಗಿ ಬಾದಾಮಿ ಚಲುಕ್ಯರ ಪಟ್ಟಬಂಧೋತ್ಸವದ ಸ್ಥಳವಾಗಿತ್ತು. ಕಿಸುಕಾಡು-೭೦ ರ ಕೇಂದ್ರಸ್ಥಳ ಈಗಿನ ಪಟ್ಟದಕಲ್ಲು ಆಗಿತ್ತು. ಮುಂದೆ ಜಯಸಿಂಹನ ನಂತರ ಈ ಪ್ರದೇಶವು ನೊಳಂಬರ ಕೈ ತಪ್ಪುತ್ತದೆ.

**ಕುಕ್ಕನೂರು–೩೦**

ರಾಯಚೂರು ಜಿಲ್ಲೆ, ಯಲಬುರ್ಗಿ ತಾಲೂಕಿನ ಈಗಿನ ಕುಕ್ಕನೂರು ಮತ್ತು ಅದರ ಸುತ್ತಲಿನ ಪ್ರದೇಶ. ಕ್ರಿ.ಶ.೧೦೧೧ರ ಆಲೂರು ಶಾಸನದಲ್ಲಿ ಘಟೆಯಂಕಕಾರ ಇರಿವ ನೊಳಂಬನ ಕಾಲದಲ್ಲಿ ಈ ಕುಕ್ಕನೂರಿನ ಉಲ್ಲೇಖವಾಗಿದೆ.[23]

**ಕುದಿಯುಪರವಿ–೭೦**

ಕಂಪಲಿ ನೊಳಂಬರ ಬಹಳಷ್ಟು ಶಾಸನಗಳಲ್ಲಿ ಈ ನಾಡಿನ ಉಲ್ಲೇಖ ಬರುತ್ತದೆ. ಆದರೆ ಈ ನಾಡು ಎಲ್ಲಿತ್ತೆಂದು ಸ್ಪಷ್ಟವಾಗುತ್ತಿಲ್ಲ.

**ಕುಂದೂರು–೭೦**

ಕುಂದೂರು–೭೦ ರ ಉಲ್ಲೇಖವೂ ಉದಯಾದಿತ್ಯದೇವನ ಶಾಸನದಲ್ಲಿ ಉಲ್ಲೇಖವಾಗಿದೆ. ಈ ಶಾಸನದಲ್ಲಿ ಕೆಲವು ಪಾರಂಪರಿಕ ನಾಡುಗಳ ಹೆಸರುಗಳನ್ನು ಉಲ್ಲೇಖಿಸದೆ ಈ ಊರನ್ನು ಕದಂಬಳಿಗೆ–೧೦೦೦ ದ ಬಳಿಯ ಕಂಪಣ ಕುಂದೂರೆಪ್ಪತ್ತು ಎಂದು ಹೆಸರಿಸಿದೆ.[24] ಇದು ದಾವಣಗೆರೆ ತಾಲೂಕಿನ ಪ್ರದೇಶವನ್ನೊಳಗೊಂಡಿತ್ತು. ಇದರ ಬಗ್ಗೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ.

**ಕೋಗಳಿ–೫೦೦**

ಅಯ್ಯಪದೇವನ ಕಾಲದಲ್ಲಿ ಕೋಗಳಿ–೫೦೦ ರ ನಾಡಿನ ಉಲ್ಲೇಖವಿದೆ.[25] ಕೋಗಳಿ ಉಲ್ಲೇಖ ಕನ್ನಡದ ಪ್ರಾಚೀನ ಕಾವ್ಯ ವಡ್ಡಾರಾದನೆಯ ಕಾಲಕ್ಕೆ ಇದು ಪ್ರಸಿದ್ಧ ಜೈನಕೇಂದ್ರವಾಗಿತ್ತು. ಮುಂದೆ ಕದಂಬರ ಅಂತ್ಯದ ನಂತರ ಈ ನಾಡು ನೊಳಂಬರ ವಶದಲ್ಲಿದ್ದುದು ಶಾಸನಗಳಿಂದ ತಿಳಿಯುತ್ತದೆ. ಹಡಗಲಿ ತಾಲೂಕಿನ ಕ್ರಿ.ಶ.ಸು. ೧೧೦೦ ರ ಶಾಸನದಲ್ಲಿ ಈ ಕೋಗಳಿನಾಡಿನ ವರ್ಣನೆಯಿದ್ದು

ಎಸೆವ ನೊಣಂಬವಾಡಿಯೊಳಗಗ್ಗದೆ ಕೋಗಳಿನಾಡಲೆಂತು ಬಂ
ಣಿಸುವಡಮೊಪ್ಪುಗುಂ ಪೊಸವಡಂಗಿಲೆ ಪೊಂಗಳಸಂಗಳಿಂದೆ ಮಾ
ಡಿಸಿದ ಮಾಹೇಶ್ವರಾಲಯದಿನೊಪ್ಪುವ ವಿಷ್ಣುಗ್ರಿಹೋತು ಕರುಂಗಳಿಂ
ದ ಶದ್ರಿಶಮಪ್ಪ ವಿಪ್ರಭವನಂಗಳಿನೋದುವ ವೇದದ ನಾದದಿಂ ॥

ಎಂದು ಕೋಗಳಿಯನ್ನು ಮತ್ತು ಅಲ್ಲಿದ್ದ ಈಶ್ವರನ ಮತ್ತು ವಿಷ್ಣುದೇವಸ್ಥಾನದ ಬಗ್ಗೆ ಶಾಸನವು ಮುಕ್ತವಾಗಿ ಪ್ರಶಂಸಿಸಿದೆ.[26]

ನೊಳಂಬರ ನಂತರ ಕೋಗಳಿ ಉಚ್ಚಂಗಿ ಪಾಂಡ್ಯರ ವಶವಾಗುತ್ತದೆ. ಇಂದಿನ ಹಗರಿಬೊಮ್ಮನಹಳ್ಳಿ ತಾಲೂಕಿನ ಕೋಗಳಿಯೇ ಅಂದಿನ ಕೋಗಳಿ-೫೦೦ ರ ಮುಖ್ಯ ಕೇಂದ್ರವಾಗಿದ್ದಿತು.

**ಕೋಳೂರು-೧೨**

ಈ ಪ್ರದೇಶದ ಉಲ್ಲೇಖ ಚಳ್ಳಕೆರೆ ತಾಲೂಕಿನ ಶಾಸನದಲ್ಲಿ ಉಲ್ಲೇಖವಾಗಿದ್ದು ಬಹುಶಃ ಚಳ್ಳಕೆರೆ ಅಥವಾ ಹಿರಿಯೂರು ತಾಲೂಕುಗಳಲ್ಲಿ ಯಾವುದಾದರೂ ಒಂದು ಸ್ಥಳವಾಗಿದ್ದಿರಬೇಕು.[27] ಬಳ್ಳಾರಿ ತಾಲೂಕಿನಲ್ಲಿ ಈ ಹೆಸರಿನ ಗ್ರಾಮವಿದೆಯಾದರೂ, ಅದೇ ಎಂದು ಹೇಳಲು ಆಧಾರಗಳು ಸಾಲವು.

**ಗಂಗ-೬೦೦೦**

ಗಂಗ-೬೦೦೦ ಪ್ರದೇಶವು ತಲಕಾಡನ್ನು ಕೇಂದ್ರ ಸ್ಥಾನವನ್ನಾಗಿ ಪಡೆದು ಆಳ್ವಿಕೆ ನಡೆಸಿದ ಗಂಗರ ಮೂಲಸ್ಥಾನವಾಗಿದ್ದಿರಬೇಕು. ಗಂಗ-೬೦೦೦ ಎಂಬ ಉಲ್ಲೇಖ ಗಂಗರ ಶಾಸನಗಳಲ್ಲಿ ಮಾತ್ರವಲ್ಲದೆ ಬಾಣರ ಮತ್ತು ನೊಳಂಬರ ಶಾಸನಗಳಲ್ಲಿಯೂ ಉಲ್ಲೇಖವಾಗಿದೆ. ಈ ಪ್ರದೇಶದ ಒಡೆತನಕ್ಕಾಗಿ ಈ ರಾಜರ ನಡುವೆ ಯುದ್ಧ ನಡೆದಿದೆ. ಒಂದನೆಯ ಮಹೇಂದ್ರನ ಕಾಲದ ಕ್ರಿ.ಶ.೮೮೩ ರ ನಂತರದ ಶಾಸನಗಳಲ್ಲಿ ಗಂಗ-೬೦೦೦ ವನ್ನು ನೊಳಂಬರು ಗಂಗರಿಂದ ಉಡುಗೊರೆಯಾಗಿ ಪಡೆದಿರುವುದು ತಿಳಿದು ಬರುತ್ತದೆ. ಅಲ್ಲಿಂದ ಮುಂದೆ ಅಯ್ಯಪ ಮತ್ತು ದಿಲೀಪನ ಕಾಲದವರೆಗೆ ಈ ನಾಡು ನೊಳಂಬರ ವಶದಲ್ಲಿರುತ್ತದೆ. ಈ ಗಂಗ-೬೦೦೦ ಪ್ರದೇಶವೇ ಮೊರಸುನಾಡು ಎಂಬ ಹೆಸರನ್ನು ಪಡೆದಿತ್ತೆಂಬುದಾಗಿ ದೇವರಕೊಂಡಾರೆಡ್ಡಿಯವರು ಅಭಿಪ್ರಾಯ ಪಡುತ್ತಾರೆ.[28] ಕೋಲಾರ ತಾಲೂಕಿನ ಸುತ್ತಮುತ್ತಲ ಪ್ರದೇಶಗಳು, ಧರ್ಮಪುರಿ ಜಿಲ್ಲೆಯ ಉತ್ತರ ಭಾಗ ಮತ್ತು ಬೆಂಗಳೂರು ಜಿಲ್ಲೆಯ ಪೂರ್ವಭಾಗ ಈ ನಾಡಿಗೆ ಸೇರಿತ್ತು.

**ಗಂಗವಾಡಿ-೯೬೦೦೦**

ಗಂಗವಾಡಿ-೯೬೦೦೦ ಎಂಬುದು ತಲಕಾಡಿನ ಗಂಗರು ಆಳಿದ ಪ್ರದೇಶಕ್ಕಿದ್ದ ಪಾರಂಪರಿಕ ಹೆಸರು. ಈ ನಾಡು ದಕ್ಷಿಣ ಕರ್ನಾಟಕದ ಅನೇಕ ಜಿಲ್ಲೆಗಳನ್ನು ಒಳಗೊಂಡಿತ್ತು. ಉತ್ತರಕ್ಕೆ ಬನವಾಸಿ-೧೨೦೦೦, ಪಶ್ಚಿಮಕ್ಕೆ ಆಳ್ವಖೇಡ, ಪೂರ್ವಕ್ಕೆ ನೊಳಂಬವಾಡಿ, ದಕ್ಷಿಣಕ್ಕೆ ಕೊಂಗುನಾಡು ಇದರ ಗಡಿಗಳಾಗಿದ್ದವು. ಒಂದನೆಯ ಮಹೇಂದ್ರನು ಕೆಲವು ಕಾಲ ಈ ನಾಡಿನ ಉತ್ತರಾಧಿಕಾರಿಯೆಂಬಂತೆ ನೊಳಂಬ ಅಣ್ಣಿಗನ ಕಾಲದ ಎರಡು ಶಾಸನಗಳಲ್ಲಿ ಉಲ್ಲೇಖವಾಗಿದೆ. ''ಷಣ್ಣವತಿ ಸಹಸ್ರ ಪ್ರಮುಖ ಗಂಗ ಮಂಡಳ ವಿಳಾಸಿನ್ಯೈಕ ವಲ್ಲಭೋಮಹೇನ್ದ್ರಃ'' ಎಂಬ

ಉಲ್ಲೇಖವಿದ್ದು, ಗಂಗವಾಡಿ-೯೬೦೦೦ ವು ಮಹೇಂದ್ರ (ಒಂದನೆಯ)ನ ಕಾಲದಲ್ಲಿ ನೊಳಂಬರ ಆಡಳಿತದಲ್ಲಿ ಇದ್ದಿರಬೇಕೆಂದು ಭಾವಿಸಬಹುದಾಗಿದೆ.[29]

**ಗಂಗವೂರು-೩೦**

ಗಂಗವೂರಿನ ಉಲ್ಲೇಖವು ಒಂದನೆಯ ಮಹೇಂದ್ರನ ಶಾಸನದಲ್ಲಿ ಉಲ್ಲೇಖಿತವಾಗಿದೆ. ಉಲ್ಲೇಖಿತವಾಗಿರುವ ಸ್ಥಳ ಚಳ್ಳಕೆರೆ ಪ್ರದೇಶವಾಗಿದ್ದು ಈ ನಾಡನ್ನು ಗುರುತಿಸುವುದು ಕಷ್ಟವಾಗುತ್ತದೆ. ಅನೇಕ ನಾಡುಗಳ ಮಧ್ಯೆ ಈ ನಾಡು ಉಲ್ಲೇಖಿತವಾಗಿರುವುದರಿಂದ ಸ್ಪಷ್ಟವಾಗಿ ಸ್ಥಳವನ್ನು ಗುರುತಿಸುವುದು ಸಾಧ್ಯವಿಲ್ಲ.[30]

**ಗಲ್ವಾಡಿ-೩೦೦**

ಈ ಪ್ರದೇಶ ಒಂದನೆಯ ಮಹೇಂದ್ರನ ಕಾಲದಲ್ಲಿ ನೊಳಂಬವಾಡಿಗೆ ಸೇರಿತ್ತು.[31] ಮುಂದೆ ಇವರ ಯಾವ ಶಾಸನಗಳೂ ಈ ನಾಡನ್ನು ಉಲ್ಲೇಖಿಸಿಲ್ಲ. ಈ ಪ್ರದೇಶವನ್ನು ಗುರುತಿಸುವುದು ಕಷ್ಟ.

**ಚಿರಪಿ-೧೨**

ಕ್ರಿ.ಶ. ೯೫೦-೫೧ ರ ಮಡಕಶಿರಾ ಶಾಸನದಲ್ಲಿ ಇರಿವ ನೊಳಂಬನ ಕಾಲದಲ್ಲಿ ಚಿರಪಿ-೧೨ರ ಉಲ್ಲೇಖ ಬಂದಿದೆ. ಈ ನಾಡಿನ ಏಕೈಕ ಉಲ್ಲೇಖ ಇದಾಗಿದೆ.[32] ಇರಿವ ನೊಳಂಬನ ಕಾಲದಲ್ಲಿ ಚಿರಪಿ-೧೨ರ ಮಂಡಲ 'ಸಿವರಿ'ಯಲ್ಲಿ ಒಳಗೆರೆಯನ್ನು ಕಟ್ಟಿಸಿದ ಕಾಡಿಯಣ್ಣ ಎಂಬುವವನಿಗೆ ಮತ್ತು ಪಳ್ಳಿಕಾರ ತುವಣ್ಣ ಎಂಬುವವನಿಗೆ ಚಿರಪಿ, ಚಿಂತಕುಂಟೆ, ಚೆರಿಯವೊಳಲು, ಉಳವಟ್ಟ ಎಂಬ ನಾಲ್ಕು ಊರಿನ ಜನ ಸೇರಿ ದಾನವನ್ನು ಕೊಟ್ಟ ಉಲ್ಲೇಖವಿದೆ. ಮಡಕಶಿರಾದಲ್ಲಿ ಈ ಶಾಸನ ದೊರೆತಿರುವುದರಿಂದ ಮಡಕಶಿರವೇ ಚಿರಪಿಯ ಕೇಂದ್ರವಾಗಿದ್ದಿರಬೇಕು.

**ತರ್ದವಾಡಿ-೧೦೦೦**

ಈ ಪ್ರದೇಶವು ಕೃಷ್ಣಾನದಿಯ ಮೇಲುಭಾಗದ ಈಗಿನ ಜಮಖಂಡಿ ತಾಲೂಕು, ಬಿಜಾಪುರ ತಾಲೂಕು, ಇಂಡಿ ತಾಲೂಕು, ಬಾಗೇವಾಡಿ ತಾಲೂಕುಗಳನ್ನು ಒಳಗೊಂಡಿತ್ತು. ಇಂಡಿ ತಾಲೂಕಿನ ತದ್ದೆವಾಡಿ ಈ ನಾಡಿನ ಕೇಂದ್ರ ಸ್ಥಾನವಾಗಿದ್ದಿರಬೇಕು ?

**ನೀರ್ಗುಂದ ನಾಡು-೩೦೦**

ಸಿಂಹಪೋತನ ಕಾಲದ ಶಾಸನದಲ್ಲಿಯೇ ನೀರ್ಗುಂದ-೩೦೦ ರ ಉಲ್ಲೇಖವಿದೆ. ಹೀಗಾಗಿ ನೊಳಂಬರ ಪ್ರವರ್ಧಮಾನ ಕಾಲಕ್ಕೆ ನೀರ್ಗುಂದ-೩೦೦ ಅವರ ವಶದಲ್ಲಿತ್ತು. ಗವಣಬ್ಬೆ ನೀರ್ಗುಂದ

ನಾಡಿಗೆ ಸೇರಿದ ಮದರಿಕಲ್ಲನ್ನು ಆಳುತ್ತಿದ್ದಂತೆ ಉಲ್ಲೇಖಿಸಿದೆ.[33] ಮಹೇಂದ್ರನ ಪತ್ನಿಯೂ ಅಯ್ಯಪದೇವನ ತಾಯಿಯೂ ಆದ ಗವಣಬ್ಬೆ ಮದರಿಕಲ್ಲಿನಲ್ಲಿ ಗವಣೇಶ್ವರ ಎಂಬ ಶಿವಾಲಯವನ್ನು ಮಾಡಿಸಿ ಅದಕ್ಕೆ ಕೊಟ್ಟ ದಾನದ ಪ್ರಮಾಣವನ್ನು ಉಲ್ಲೇಖಿಸಿದೆ.[34] ಇದೇ ಶಾಸನದಲ್ಲಿ ಮುಂದೆ ನೊಳಂಬ ಒಂದನೆಯ ಮಹೇಂದ್ರನ ಕಾಲದಲ್ಲಿ ನೀರ್ಗುಂದ ನಾಡಿನ ಜೊತೆಗೆ ಗಲ್ಪಾಡಿ-೩೦೦, ಗಂಗವೂರು-೩೦, ನೆಲ್ಲಿಗುಂಡಿ-೧೨ ಸೇರಿರುತ್ತದೆ. ಈ ನಾಡುಗಳಲ್ಲದೆ ಮಾಲ್ದೆ-೧೨, ಅಮ್ಮವಳ್ಳಿ-೧೨, ಕೋಳೂರು-೧೨ ಇವರಿಗೆ ಸೇರಿತ್ತು. ಈ ನಾಡುಗಳನ್ನು ಅಯ್ಯಪದೇವ ಆಳುತ್ತಿದ್ದ ಉಲ್ಲೇಖವಿದೆ.

ಹೀಗಾಗಿ ನೀರ್ಗುಂದ ನಾಡು ಪ್ರಮುಖವಾದಂತಹ ಪ್ರದೇಶವಾಗಿತ್ತೆಂದು ಈ ಶಾಸನಗಳ ಆಧಾರದಿಂದ ಊಹಿಸಬಹುದಾಗಿದೆ. ನೀರ್ಗುಂದ ನಾಡಿನ ಕೇಂದ್ರ ಸ್ಥಳವು ಈಗಿನ ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲೂಕಿನ ನೀರ್ಗುಂದವಾಗಿದೆ.

**ನೆಲ್ಲಗುಂಡಿ-೧೨**

ಈ ಪ್ರದೇಶದ ಉಲ್ಲೇಖ ಚಳ್ಳಕೆರೆ ತಾಲೂಕಿನ[35] ಶಾಸನದಲ್ಲಿ ಬಂದಿದ್ದು ಇದನ್ನು ಶಿರಾ ತಾಲೂಕಿನ ಈಗಿನ ನೆಲ್ಲಿಕಟ್ಟೆಯ ಸುತ್ತಮುತ್ತಲ ಪ್ರದೇಶ ಎಂದು ಗುರುತಿಸುತ್ತಾರೆ.

**ನೊಳಂಬಳಿಗೆ-೧೦೦೦**

ಈ ಪ್ರದೇಶದ ಉಲ್ಲೇಖವೂ ನೊಳಂಬರ ಆರಂಭದ ಶಾಸನಗಳಲ್ಲಿ ಸಿಕ್ಕುತ್ತದೆ. ಚಾರುಪೊನ್ನೇರನು ನೊಳಂಬಳಿಗೆ-೧೦೦೦, ನೀರ್ಗುಂದ-೩೦೦ ನ್ನು ಆಳುತ್ತಿದ್ದಂತೆ ಶಾಸನವೊಂದು[36] ತಿಳಿಸುತ್ತದೆ. ಈ ನೊಳಂಬಳಿಗೆ-೧೦೦೦ ವು ನೊಳಂಬರ ಆರಂಭದ ಆಳ್ವಿಕೆಯ ಪ್ರದೇಶವಾಗಿದ್ದು ನೊಳಂಬರ ಹೆಸರಿನಲ್ಲಿ ಸ್ಥಾಪಿಸಿದ ರಾಜ್ಯ ಇದಾಗಿದೆ. ಹೆಂಜೇರು ಅಥವಾ ಹೇಮಾವತಿಯ ಸುತ್ತಮುತ್ತಲ ಪ್ರದೇಶ ನೊಳಂಬಳಿಗೆ-೧೦೦೦ ಕ್ಕೆ ಸೇರಿರಬೇಕು. ಮುಂದೆ ಒಂದನೆಯ ಮಹೇಂದ್ರನ ಕಾಲದಲ್ಲಿ ರಾಜ್ಯವಿಸ್ತಾರವಾಗಿ ದಕ್ಷಿಣದಲ್ಲಿ ತಮಿಳುನಾಡಿನ ಧರ್ಮಪುರಿಯಿಂದ ಉತ್ತರದಲ್ಲಿ ಬಲ್ಲಕುಂದೆಯವರೆಗೆ ರಾಜ್ಯ ವಿಸ್ತರಿಸಿದಾಗ ನೊಳಂಬಳಿಗೆ-೧೦೦೦ ಎಂಬ ಹೆಸರನ್ನು ನೊಳಂಬಳಿಗೆ-೩೨೦೦೦ ವೆಂದು ಕರೆಯಲಾಗುತ್ತದೆ. ನಂತರ ನೊಳಂಬವಾಡಿ ಎಂಬ ಹೆಸರೇ ಹೆಚ್ಚು ಹೆಚ್ಚು ಪ್ರಚಲಿತಗೊಳ್ಳುತ್ತಾ ಬಂದಂತೆ, ನೊಳಂಬಳಿಗೆ-೧೦೦೦ ದ ಬಳಕೆ ಕಡಿಮೆಯಾಗುತ್ತಾ, ಕೊನೆಗೆ ಆ ಹೆಸರನ್ನು ಮುಂದೆ ಯಾವ ಶಾಸನವೂ ಬಳಸುವುದಿಲ್ಲ. ಈ ನೊಳಂಬಳಿಗೆ-೧೦೦೦ ವು ಈಗಿನ ಚಳ್ಳಕೆರೆ ಮತ್ತು ಪಾವಗಡ, ಹಿರಿಯೂರು, ಶಿರಾ ತಾಲೂಕುಗಳ ಭಾಗಗಳನ್ನು ಒಳಗೊಂಡಿತ್ತು.

### ನೊಳಂಬವಾಡಿ-೩೨೦೦೦

ನೊಳಂಬರು ಆಳಿದ ಪ್ರಾಂತ್ಯಕ್ಕೆ ಈ ಹೆಸರು ಬಂದಿದೆ. ನೊಳಂಬವಾಡಿ-೩೨೦೦೦ ದ ಆಡಳಿತ ವಿಭಾಗವು ನೊಳಂಬರ ಆಳ್ವಿಕೆಯ ರಾಜ್ಯಕ್ಕೆ ಒಂದನೆಯ ಅಯ್ಯಪದೇವನ ಕಾಲದಿಂದ ಪ್ರಚಲಿತಕ್ಕೆ ಬಂತು. ನೊಳಂಬಳಿಗೆ-೧೦೦೦, ನೀರ್ಗುಂದ-೩೦೦, ಗಲ್ವಾಡಿ-೩೦೦, ಕಣೆಯಕಲ್ಲು-೩೦೦, ಸಿಂದವಾಡಿ-೧೦೦೦, ಬಲ್ಲಕುಂದೆ-೩೦೦ ಮುಂತಾದ ನಾಡುಗಳು ಇದರಲ್ಲಿ ಅಂತರ್ಗತವಾಗಿದ್ದವು. ಈ ನೊಳಂಬವಾಡಿಯ ಮೊದಲ ರಾಜಧಾನಿ ಹೆಂಜೇರಾಗಿತ್ತು. ಕ್ರಿ.ಶ.ಸು. ೧೦೦೦ದ ನಂತರ ಕಂಪಿಲಿ ಇವಗ ರಾಜಧಾನಿಯಾಯಿತು. ಕಾಲದಿಂದ ಕಾಲಕ್ಕೆ ಈ ನಾಡು ಹೆಚ್ಚುತ್ತಾ, ಕುಗ್ಗುತ್ತಾ ರಾಜಕೀಯ ಏಳು-ಬೀಳುಗಳೊಂದಿಗೆ ತನ್ನ ವಿಸ್ಥಾರವನ್ನು ಹೆಚ್ಚು ಕಡಿಮೆ ಮಾಡಿಕೊಂಡು ಬಂದಿದೆ. ಈಗಿನ ತುಮಕೂರು, ಬೆಂಗಳೂರು, ಕೋಲಾರ, ಚಿತ್ರದುರ್ಗ, ಬಳ್ಳಾರಿ, ಆಂಧ್ರಪ್ರದೇಶದ ಅನಂತಪುರ ಜಿಲ್ಲೆ, ಚಿತ್ತೂರು ಜಿಲ್ಲೆಯ ಕೆಲವು ಭಾಗಗಳೂ, ತಮಿಳುನಾಡಿನ ಧರ್ಮಪುರಿ ಜಿಲ್ಲೆ ಇವರ ರಾಜ್ಯದ ಭಾಗಗಳಾಗಿದ್ದವು. ಈ ನೊಳಂಬವಾಡಿ ಒಂದು ಕಾಲ ಘಟ್ಟದಲ್ಲಿ ಕೃಷ್ಣಾನದಿಯ (ತರ್ದವಾಡಿ ನಾಡು) ಆಚೆಗೂ ಹೆಚ್ಚಿತ್ತು. ಆದರೆ ಅದು ತಾತ್ಕಾಲಿಕ ಮಾತ್ರ. ತಮಿಳುನಾಡಿನ ಧರ್ಮಪುರಿಯ ಭಾಗಗಳು ಒಂದನೆಯ ಮಹೇಂದ್ರನ ಕಾಲದಿಂದ ಸುಮಾರು ೫೦ ವರ್ಷಗಳ ಕಾಲ ನೊಳಂಬವಾಡಿಗೆ ಸೇರಿತ್ತು. ನೊಳಂಬವಾಡಿಯನ್ನು ಗಂಗ ದೊರೆ ಮಾರಸಿಂಹ ಗೆದ್ದು 'ನೊಳಂಬ ಕುಲಾನ್ತಕ' ಎಂಬ ಬಿರುದು ಧರಿಸಿದ್ದ. ಈ ನಾಡಿನ ವರ್ಣನೆಯನ್ನು ದಾವಣಗೆರೆ ತಾಲೂಕಿನ ಶಾಸನದಲ್ಲಿ ಉಲ್ಲೇಖಿಸಿದೆ.

ನೋಡೆ ನೊಣಂಬವಾಡಿಯೊಳಗಗ್ಗದ ಸಾವಿರ ನಾಡಿನೊಳು ಕರಂ
ನಾಡೆಯುಮೊಳ್ಪುವೆತ್ತೆಸೆವ ಬೆಳ್ತುಱು ಲಕ್ಷ್ಮಿಗೆ ಜನ್ಮ ಭೂಮಿ
ಕೊಂಡಾಡುವ ಬೋಗ ಭೂಮಿಗನುಸಾರಿ ಸಮಸ್ತ ಜನಕ್ಕೆ ಸಂತಸಂ
ಮಾಡಲು ಗಂಧ ಸಾಳಿಯುಂ .. ವನಾಳಿಯಂ . ಚೆಲ್ವಿನಾಗಂ ॥
ಅಗ್ರಮಾಧಿಪರರಖಿಳಗು
ಣಾಗ್ರಣಿಗಳು ಧರ್ಮ್ಮಕಾರ್ಯ್ಯಮಂ ನೆಱೆ ಮಾಡ
ಲ್ಕಾಗ್ರಹಿಗಳು ಪ್ರಭು ಶಕ್ತಿ ಸಮಗ್ರ ಪ್ರಭು
ರತ್ನ ಮೆನಿಪ ಮೂರ್ವಪ್ರಭುಗಳು[37]

ಈ ನೊಳಂಬವಾಡಿಯು ಉತ್ತರದ ಅರಸರ ದಕ್ಷಿಣ ದಿಗ್ವಿಜಯದ ಹಾದಿಯಲ್ಲಿದ್ದು ಗಡಿನಾಡ ಪ್ರಾಂತ್ಯವಾಗಿತ್ತು. ನೊಳಂಬವಾಡಿ-೧೦೦೦/೩೨೦೦೦ ನೊಳಂಬರ ಕೈ ತಪ್ಪಿದ ಮೇಲೂ ಉಚ್ಚಂಗಿಯ ಪಾಂಡ್ಯರು, ಕಲ್ಯಾಣಿ ಚಾಲುಕ್ಯರ ಅರಸುಕುಮಾರರು ನೊಳಂಬವಾಡಿಯ ಹೆಸರನ್ನು ತಮ್ಮ ಆಳ್ವಿಕೆಯಲ್ಲಿ ಪಡೆಯಲು ಪ್ರತಿಷ್ಠೆಯ ಪ್ರಶ್ನೆಯಾಗಿ ಭಾವಿಸಿದ್ದರು. ನೊಳಂಬರ ಪ್ರಾಚೀನ

ಗಡಿಭಾಗಗಳೆಂದರೆ ಪಶ್ಚಿಮಕ್ಕೆ ಗಂಗವಾಡಿ–೯೬೦೦೦, ಪೂರ್ವಕ್ಕೆ ರೇನಾಡು, ವಡಗಾವಳಿ, ಉತ್ತರಕ್ಕೆ ಎಡದೊರೆ–೨೦೦೦ ಅಥವಾ ತುಂಗಭದ್ರಾನದಿ ಎಲ್ಲೆಯಾಗಿತ್ತು.

**ಪುಲಿನಾಡು**

ಇದು ಕೋಲಾರ ಜಿಲ್ಲೆಯ ಶ್ರೀನಿವಾಸಪುರ, ಮುಳಬಾಗಿಲಿನ ಮೇಲುಭಾಗ, ಚಿತ್ತೂರು ಜಿಲ್ಲೆಯ ಪಶ್ಚಿಮ ಭಾಗಗಳನ್ನು ಒಳಗೊಂಡಿತ್ತೆಂದು ಶಾಸನಗಳಿಂದ ತಿಳಿಯಬಹುದಾಗಿದೆ. ನೊಳಂಬ ಮಹೇಂದ್ರನ ಕ್ರಿ.ಶ.ಸು. ೯೮೦ ರ ಶಾಸನದಲ್ಲಿ ಇದರ ಉಲ್ಲೇಖ ಬರುತ್ತದೆ.[38] ಈ ಪುಲಿನಾಡು ಅಥವಾ ಪುಲಿನಾಟು ವೈದುಂಬರ ರಾಜ್ಯಕ್ಕೂ ಬಾಣರ ರಾಜ್ಯಕ್ಕೂ, ನೊಳಂಬವಾಡಿಗೂ, ಮಧ್ಯೆ ಇದ್ದ ಪ್ರದೇಶ ಇದರ ಸ್ವಾಧೀನಕ್ಕಾಗಿ ರಾಜ ರಾಜರ ನಡುವೆ ಅನೇಕ ಸಣ್ಣ ಪುಟ್ಟ ಕಾಳಗಗಳು ನಡೆದಿವೆ.

**ಪುಲಿಗೆರೆ–೩೦೦**

ಈ ಪ್ರದೇಶವು ಕ್ರಿ.ಶ. ೧೦೭೭ ರ ಕ್ರಿ.ಶ. ೧೦೮೧ ರ ವೀರನೊಳಂಬ ಪಲ್ಲವಪೆರ್ಮಾಡಿ ಜಯಸಿಂಹದೇವನ ವಶದಲ್ಲಿದ್ದಂತೆ ಶಾಸನಗಳು ತಿಳಿಸುತ್ತವೆ. ಇದು ಬೆಳವೊಲ ಪ್ರದೇಶದ ಪ್ರಮುಖ ಸ್ಥಾನವಾಗಿದ್ದು ಪಾರಂಪರಿಕ ನೊಳಂಬರ ನಂತರ ನೊಳಂಬವಾಡಿಯ ಉತ್ತರ ಭಾಗಕ್ಕೆ ಸೇರಿತ್ತು. ಈಗಿನ ಲಕ್ಷ್ಮೇಶ್ವರವೇ ಹಿಂದಿನ ಪುಲಿಗೆರೆ. ಈ ಪುಲಿಗೆರೆಯಲ್ಲಿ ಜೈನ ಮತ್ತು ವೈದಿಕ ಧರ್ಮಗಳ ಜನರು ವಾಸಿಸುತ್ತಿದ್ದ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಪುಲಿಗೆರೆ–೩೦೦ ಮತ್ತು ಬೆಳ್ವೊಲ–೩೦೦ ನ್ನು ಒಟ್ಟಾಗಿ ಸೇರಿಸಿ ಎರಡರುನೂರು ಎಂದು ಕರೆದಿವೆ.[39]

**ಬಲ್ಲಕುಂದೆ–೩೦೦**

ನೊಳಂಬರ ರಾಜ್ಯ ಹೆಂಜೇರಿನಿಂದ ಕಂಪಿಲಿಯ ಕಡೆಗೆ ಸರಿದಂತೆ ಹೊಸ ಹೊಸ ನಾಡುಗಳು ಇವರ ಆಡಳಿತಕ್ಕೆ ಸೇರುತ್ತವೆ. ಅವುಗಳಲ್ಲಿ ಬಲ್ಲಕುಂದೆಯೂ ಒಂದಾಗಿತ್ತು. ಈ ಪ್ರದೇಶವು ಹಗರಿಯ ದಡದಲ್ಲಿದ್ದುದರಿಂದ ಸಂಪತ್ಭರಿತವಾದ ಪ್ರಾಂತ್ಯವಾಗಿತ್ತು. ಕಂಪಿಲಿಯ ನೊಳಂಬರ ಅಂತ್ಯದವರೆಗೆ ಈ ಬಲ್ಲಕುಂದೆ–೩೦೦ ಅವರ ಪಾರಂಪರಿಕ ನಾಡುಗಳಲ್ಲಿ ಸೇರಿರುತ್ತದೆ. ಮುಂದೆ ಜಯಸಿಂಹನ ಕಾಲದಲ್ಲಿ ನಾಡುಗಳ ಪಟ್ಟಿಯಿಂದ ಇದು ಹೊರಗುಳಿಯುತ್ತದೆ. ಅಲ್ಲಿಂದಾಚೆಗೆ ನೊಳಂಬರ ಆಡಳಿತದಿಂದ ಈ ನಾಡು ತಪ್ಪಿ ಹೋಗುತ್ತದೆ. ಇಂದಿನ ತೆಕ್ಕಲಕೋಟೆ ಬಳಿಯ ಬಲ್ಕುಂದಿ ಈ ನಾಡಿನ ಕೇಂದ್ರ ಸ್ಥಳವಾಗಿತ್ತು.[40]

ಬನವಾಸಿ–೧೨೦೦೦

ಈ ಪ್ರದೇಶವು ನೊಳಂಬ ಅರಸ ಜಯಸಿಂಗದೇವನು ನೊಳಂಬವಾಡಿಯ ರಾಜನಾಗಿ ಆಳುತ್ತಿದ್ದಾಗ ಅವನ ಆಡಳಿತಕ್ಕೆ ಸೇರಿರುತ್ತದೆ. ಇದು ಬನವಾಸಿ ಕದಂಬರ ಪಾರಂಪರಿಕ ಆಳ್ವಿಕೆಯ ಪ್ರದೇಶ. ಇದರ ಕೇಂದ್ರ ಸ್ಥಳ ಈಗಿನ ಸಿರಸಿ ತಾಲೂಕಿನ ಬನವಾಸಿ ಆಗಿರುತ್ತದೆ. ಅರೆಮಲೆನಾಡ ಪ್ರದೇಶವಾಗಿರುವುದರಿಂದ ಫಲವತ್ತಾದ ಭೂಮಿಯನ್ನೊಳಗೊಂಡಿದ್ದು ಇದರ ಒಡೆತನಕ್ಕಾಗಿ ರಾಜರ ನಡುವೆ ಮತ್ತು ಅಧಿಕಾರಿಗಳ ನಡುವೆ ಪೈಪೋಟಿ ನಡೆಯುತ್ತಿದ್ದಿತು. ಈ ಪ್ರದೇಶದ ಒಡೆತನ ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಇಲ್ಲಿ ಅಡಿಕೆ, ಭತ್ತ, ಮೆಣಸು, ಎಲೆ, ಮುಂತಾದ ಬೆಳೆಗಳಿಗೆ ಪ್ರಸಿದ್ಧಿ ಪಡೆದಿತ್ತು. ಕೇವಲ ಕೆಲವು ವರ್ಷಗಳು ಮಾತ್ರ ಈ ಪ್ರದೇಶ ನೊಳಂಬರ ಆಡಳಿತಕ್ಕೆ ಒಳಪಟ್ಟಿತ್ತು.[41]

ಬಾನವ್ರೂರ–೧೨

ಈ ಪ್ರದೇಶದ ಉಲ್ಲೇಖ ದಾವಣಗೆರೆ ತಾಲೂಕಿನ ಶಾಸನವೊಂದರಲ್ಲಿ ಬಂದಿದೆ.[42] ಭ್ರಾಂತಿಕಡದ ಪಕ್ಕದಲ್ಲಿ ಈ ನಾಡಿದ್ದಿರಬೇಕು. ಇದು ಕದಂಬಳಿಗೆ–೧೦೦೦ ದಲ್ಲಿ ಅಂತರ್ಗತವಾಗಿತ್ತು.

ಬಿಕ್ಕಿಗ–೭೦

ಈ ನಾಡು ಬಹುಶಃ ಕೋಗಳಿ ನಾಡಿಗೆ ಸೇರಿದ್ದ ಪ್ರದೇಶವಾಗಿತ್ತು. ಇದು ನೊಳಂಬರ ಕಾಲದಲ್ಲಿ ಒಂದು ಪ್ರಮುಖವಾದ ಕೇಂದ್ರವಾಗಿತ್ತು. ಬಾಗಳಿ ಈ ನಾಡಿಗೆ ಸೇರಿತ್ತು. ಇಂದಿನ ಹರಪನಹಳ್ಳಿ ತಾಲೂಕಿನ ಬಿಕ್ಕಿಗನ ಮರಡಿ ಎಂಬ ಬೇಚಿರಾಕ್ ಗ್ರಾಮವು ಈ ನಾಡಿನ ಕೇಂದ್ರವಾಗಿತ್ತು.

ಬೆಳ್ವೊಲ–೩೦೦

ಈ ನಾಡು ಈಗಿನ ಗದಗ ಜಿಲ್ಲೆಯ ಉತ್ತರದ ಭಾಗವನ್ನೊಳಗೊಂಡಿತ್ತು. ಬೆಳ್ವೊಲ ಎಂದರೆ ನೀರಿನ ಸಮೃದ್ಧಿಯಿಂದ ಕೂಡಿದ ಪ್ರದೇಶ. ಹಿಂದಿನಿಂದಲೂ ಈ ನಾಡು ಪ್ರಸಿದ್ಧಿಯನ್ನು ಪಡೆದಿತ್ತು. ಪಲ್ಲವ ಪೆರ್ಮಾನಡಿ ಜಯಸಿಂಹದೇವನ ಕಾಲದಲ್ಲಿ ಈ ಪ್ರದೇಶವು ಇವನ ಆಳ್ವಿಕೆಯಲ್ಲಿರುತ್ತದೆ. ಜಯಸಿಂಹನ ನಂತರ ಈ ನಾಡು ನೊಳಂಬರ ಅಧೀನದಿಂದ ಕೈ ತಪ್ಪಿ ಹೋಗುತ್ತದೆ.[43]

ಭ್ರಾಂತಿಕಡ–೩೦

ಕ್ರಿ.ಶ. ೧೦೪೨ ರಲ್ಲಿ ಜಗದೇಕಮಲ್ಲ ಇರ್ಮಡಿ ನೊಳಂಬನ ಶಾಸನದಲ್ಲಿ ಭ್ರಾಂತಿಕಡದ ಉಲ್ಲೇಖ ಬರುತ್ತದೆ. ಭ್ರಾಂತಿಕಡ–೩೦, ಬಾನವೂರು, ಮುಚ್ಚನೂರು–೧೨, ಅಂತು ೫೪ ಬಾಡ

(ಊರು)ಗಳನ್ನು ಒಟ್ಟಿಗೆ ಸೇರಿಸಿ ಹೇಳಿರುವುದರಿಂದ ಈ ಮೂರು ಸುತುಮುತ್ತಲ ನಾಡುಗಳೆಂದು ಊಹಿಸಬಹುದಾಗಿದೆ. ಭ್ರಾಂತಿಕಡವು ಕದಂಬಳಿಗೆ-೧೦೦೦ ಪ್ರದೇಶದ ಒಂದು ಭಾಗವಾಗಿತ್ತು.

**ಮಾಲ್ದೆ-೧೨**

ಈ ಮಾಲ್ದೆ-೧೨ ರ ಉಲ್ಲೇಖವು ಚಳ್ಳಕೆರೆ ತಾಲೂಕಿನ ಶಾಸನದಲ್ಲಿ ಬಂದಿದ್ದು,[44] ಮಾಲ್ದೆ-೧೨ ಗ್ರಾಮಗಳ ಸಮೂಹವನ್ನು ತಿಳಿಸುತ್ತದೆ. ಅನೇಕ ನಾಡುಗಳ ಜೊತೆಯಲ್ಲಿ ಈ ನಾಡನ್ನು ಉಲ್ಲೇಖಿಸಿರುವುದರಿಂದ ಇದು ಯಾವ ಪ್ರದೇಶಕ್ಕೆ ಸೇರಿದ್ದೆಂದು ಸ್ಪಷ್ಟವಾಗುತ್ತಿಲ್ಲ. ಆದರೂ ಹಗರಿಬೊಮ್ಮನಹಳ್ಳಿ ತಾಲೂಕಿನ ಮಾಲ್ವಿಯೇ ಈ ನಾಡಿನ ಕೇಂದ್ರವಾಗಿರಬೇಕು.

**ಮಾಸೆವಾಡಿ-೧೪೦**

ಈ ಪ್ರದೇಶದ ಉಲ್ಲೇಖ ಹರಪನಹಳ್ಳಿ ತಾಲೂಕಿನ ೨೧೦ ಮತ್ತು ೨೧೧ ನೇ ಶಾಸನಗಳಲ್ಲಿ ಉಲ್ಲೇಖವಾಗಿದ್ದು ಕ್ರಿ.ಶ. ೯೨೨ ರಲ್ಲಿ ನೊಳಂಬರ ವಶದಲ್ಲಿದ್ದಂತೆ ತಿಳಿಯಬಹುದಾಗಿದೆ. ಇದು ಕ್ರಿ.ಶ.ಸು. ೧೦೧೮ ರ ವರೆಗೆ ಈ ನಾಡಿನ ಉಲ್ಲೇಖ ಬಂದಿಲ್ಲ. ಮುಂದೆ ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮ್ಮಾನಡಿ ಉದಯಾದಿತ್ಯದೇವನ ಕಾಲದಲ್ಲಿ ಇವರಿಗೆ ಸೇರಿದಂತೆ ಉಲ್ಲೇಖವಿದೆ. ಈ ನಾಡು ಪೂರ್ಣವಾಗಿ ನೊಳಂಬರಿಗೆ ಸೇರಿರಲಿಲ್ಲ. ಮಾಸೆವಾಡಿ-೧೪೦ ರೊಳಗೆ ಐದು ಗ್ರಾಮಗಳು ಮಾತ್ರ ಸೇರಿದ್ದವು. ಆ ಗ್ರಾಮಗಳ ವಿವರ ಶಾಸನಗಳಲ್ಲಿ ದೊರೆಯುತ್ತಿಲ್ಲ. ಮಾಸೆವಾಡಿ-೧೪೦ ರೊಳಗಣ ಭತ್ತಗ್ರಾಮವಾದ ಪಂಚಗ್ರಾಮಗಳು ಸೇರಿತ್ತೆಂದು ಶಾಸನ ಸ್ಪಷ್ಟವಾಗಿ ಉಲ್ಲೇಖಿಸುತ್ತದೆ.[45]

**ಮುಚ್ಚುನೂರು-೧೨**

ಈ ಪ್ರದೇಶವು ಕದಂಬಳಿಗೆ ೧೦೦೦ಕ್ಕೆ ಸೇರಿತ್ತು. ಇದು ಭ್ರಾಂತಿ ಕಡುವಿನ ಸಮೀಪವಿದ್ದ ಗ್ರಾಮ. ಭ್ರಾಂತಿಕಡು-೩೦, ಬಾನವೂರ-೧೨, ಮುಚ್ಚುನೂರು-೧೨ ಈ ಮೂರು ನಾಡುಗಳನ್ನು ಸೇರಿಸಿ ೫೪ ಗ್ರಾಮಗಳೆಂದು ಶಾಸನದಲ್ಲಿ ಲೆಕ್ಕ ಹಾಕಲಾಗಿದೆ. ಇದರ ಉಲ್ಲೇಖ ಕ್ರಿ.ಶ. ೧೦೪೨ ರ ಜಗದೇಕಮಲ್ಲನಿರ್ಮಡಿ ನೊಳಂಬನ ಆಳ್ವಿಕೆಗೆ ಸೇರಿತ್ತೆಂದು ತಿಳಿಯುತ್ತದೆ.[46]

**ಮೊರಸುನಾಡು**

ಮೊರಸುನಾಡಿನ ಉಲ್ಲೇಖ ನೊಳಂಬರ ಶಾಸನಗಳಲ್ಲಿ ಕ್ವಚಿತ್ತಾಗಿ ಉಲ್ಲೇಖವಾಗಿದೆ.[47] ಈ ಮೊರಸುನಾಡು ಗಂಗ-೬೦೦೦ ಕ್ಕೆ ಪರ್ಯಾಯ ನಾಮವೆಂಬಂತೆ ದೇವರಕೊಂಡಾರೆಡ್ಡಿಯವರು ಅಭಿಪ್ರಾಯಪಡುತ್ತಾರೆ.[48] ಇದು ಇಂದಿನ ಕೋಲಾರ ಜಿಲ್ಲೆ, ಮತ್ತು ಬೆಂಗಳೂರು ಜಿಲ್ಲೆಯ ಪೂರ್ವ ಭಾಗ, ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಉತ್ತರ ಭಾಗವನ್ನು ಒಡಗೊಂಡಿತ್ತು.

**ಸಿಂದವಾಡಿ–೧೦೦೦**

ಸಿಂದವಾಡಿ–೧೦೦೦ ದ ಉಲ್ಲೇಖವು ನೊಳಂಬರ ಶಾಸನದಲ್ಲಿ[49] ಬಂದಿದೆ. ಇದರ ನಂತರದ ಉಲ್ಲೇಖಗಳು ನೊಳಂಬರ ಕ್ರಿ.ಶ. ೧೦೫೨, ೧೦೬೮, ಮುಂತಾದ ಶಾಸನಗಳಲ್ಲಿ ದಾಖಲಾಗಿದೆ. ಈ ನಾಡು ಪಾರಂಪರಿಕವಾಗಿ ಸಿಂದರ ನಾಡಾಗಿತ್ತು. ಇದು ಮುಂದೆ ಕುರುಗೋಡು ಸಿಂದರ ವಶವಾಗುತ್ತದೆ. ಬಳ್ಳಾರಿ ತಾಲೂಕಿನ ಈಗಿನ ಸಿಂದವಾಳವೇ ಈ ನಾಡಿನ ಕೇಂದ್ರ ಸ್ಥಾನವಾಗಿದ್ದಿರಬೇಕು.

ಈ ಮೇಲಿನ ನಾಡುಗಳಲ್ಲದೆ, ನಾಡುಗಳಷ್ಟೇ ಪ್ರಮುಖವಾದ ಅನೇಕ ಗ್ರಾಮಗಳು ಇವರ ಕಾಲದಲ್ಲಿ ಪ್ರಾಮುಖ್ಯತೆಯನ್ನು ಪಡೆದಿದ್ದವು. ಈ ಗ್ರಾಮಗಳನ್ನು ರಾಜನ ಕಡೆಯವರು ಅಥವಾ ಅವನ ಪ್ರಮುಖ ಅಧಿಕಾರಿಗಳೂ ಆಳುತ್ತಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಇವು ಅಗ್ರಹಾರಗಳಾಗಿದ್ದಿರಬಹುದು. ಇಲ್ಲವೆ ಪ್ರಮುಖ ವಾಣಿಜ್ಯ ಕೇಂದ್ರಗಳಾಗಿದ್ದಿರಬಹುದು. ರಾಜಧಾನಿಗಳು ಯಾವ ನಾಡಿಗೂ ಯಾವ ಅಧಿಕಾರಿಗಳಿಗೂ ಒಳಪಡದೆ ನೇರ ರಾಜನ ಆಡಳಿತಕ್ಕೆ ಒಳಪಟ್ಟಿರಬೇಕು. ಹೀಗಾಗಿ ಅವುಗಳ ಹೆಸರಿನ ನಾಡುಗಳು ದೊರೆಯುತ್ತಿಲ್ಲ. ಶಾಸನೋಕ್ತ ಊರು/ನಗರಗಳಲ್ಲಿ ಕೆಲವನ್ನು ಈ ಮುಂದೆ ಹೆಸರಿಸಲಾಗಿದೆ.

ಆನೆವೂರು, ಉಳನೂರ, ಎರೆಡೆಯೂರು, ಕಕ್ಕರಮದಲೂರು, ಕಂಪಲಿ, ಕಪ್ಪೆಕಲ್ಲೂರು, ಕುಂದೂರು, ಕೂಡಲ್ ಕಣ್ಣುನೂರು, ಕೊನಡಿಂಯೂರು, ಗೊಂದವಾಡಿ/ಗೋವಿಂದವಾಡಿ, ಚಿಂತಕುಂಟೆ, ಚೋರಗಿರಿ, ತಗಡೂರು, ತೊಣ್ಣೂರು, ತ್ರೈಲೋಕ್ಯವೊಳಲು, ಧರ್ಮವೊಳಲು, ನವಿಲೂರು, ನಿಟ್ಟೂರು ನೆಲ್ಮಲ್ಲಿಯೂರು, ಪಾಪೆಕಲ್ಲು, ಪಿರಿಯಮೆಳಪಿ, ಪುತ್ತೂರು, ಪುಸುಗೂರು, ಪೆರ್ಬಟ್ಟ, ಪೊಕುಂದ, ಪೊಟ್ಟಳಕೆರೆ, ಪೊಳಲ್ಚೋರಮಂಗಲ, ಪ್ರಭುರಾಮ ಮಂಗಲ, ಬರಗೂರು, ಬನ್ನಿಕೊಡು, ಬಲ್ಲ ಬಂಗವಾಡಿ, ಬಾಗುಳಿ, ಬಾಣಗೆರೆ, ಬಿದಿರೂರು, ಬಿಲ್ಲಕೊತ್ತಮಂಗಲ, ಬೆಣ್ಣೆವೂರು, ಮದರಿಕಲ್ಲು, ಮಂಡಿಕಲ್ಲು, ಮರವೂಳಲು, ಮೂಲೆಕುನ್ದೂರು, ಬಿಜಯಿತಮಂಗಲ; ಈಗಿನ ಬೇತಮಂಗಲ, ವಿಪ್ರನಾರಾಯಣ, ವಿಣುಮಂಗಲ, ಸಿರಿವೂರು, ಹೆಂಜೇರು, ಹೊನ್ನವಾಡಿ, ಱೊಲ್ಲೆಯನೂರು ಮುಂತಾದ ಊರುಗಳು ತುರುಗಾಳೆಗದಿಂದ, ಅಗ್ರಹಾರಗಳಾಗಿ, ಪ್ರಸಿದ್ಧ ದೇವಾಲಯಗಳಿಂದ ವ್ಯಾಪಾರ ವಹಿವಾಟಿನ ಕಾರಣದಿಂದ ಪ್ರಖ್ಯಾತವಾಗಿದ್ದವು. [ಈ ಗ್ರಾಮಗಳಲ್ಲಿ ಹೆಂಜೇರು ಪಟ್ಟಣವು ನೊಳಂಬರ ಆರಂಭಿಕ ರಾಜಧಾನಿಯಾಗಿ ಕ್ರಿ.ಶ.ಸು. ೧೦೦೦ ರವರೆಗೂ ಇರುತ್ತದೆ.] ಈಗಿನ ಅನಂತಪುರ ಜಿಲ್ಲೆ ಮಡಕಶಿರಾ ತಾಲೂಕಿನ ಹೇಮಾವತಿ ಗ್ರಾಮವೇ ಹಿಂದಿನ ಪೆಂಜೇರು ಅಥವಾ ಹೆಂಜೇರು. ಹಿಂದೆ ಇದು ಒಂದು ಪ್ರಸಿದ್ಧ ಘಟಿಕಾಸ್ಥಾನವೂ ಆಗಿತ್ತು.

ಒಂದನೆಯ ಮಹೇಂದ್ರನ ಕಾಲದಿಂದ ಇಮ್ಮಡಿ ಮಹೇಂದ್ರನವರೆಗೆ ಅನೇಕ ದೇವಾಲಯಗಳ ರಚನೆ ಮಾಡಿರುತ್ತಾರೆ. ದೊಡ್ಡೇಶ್ವರ ದೇವಾಲಯ, ಸಿದ್ದೇಶ್ವರ ದೇವಾಲಯ,

ಅಕ್ಕ ತಂಗಿಯರ ದೇವಾಲಯ ಇವು ಪ್ರಮುಖವಾದವುಗಳು. ಅನೇಕ ವೀರಗಲ್ಲು ಶಾಸನಗಳು ಈ ಗ್ರಾಮದಲ್ಲಿ ದೊರೆತಿವೆ.

ಕಂಪಿಲಿ ನೊಳಂಬರ ಮುಂದಿನ ರಾಜಧಾನಿಯಾಗಿತ್ತು. ಇಲ್ಲಿ ನೊಳಂಬರು ಹೆಂಜೇರರನ್ನು ಬಿಟ್ಟ ಮೇಲೆ ಉತ್ತರಕ್ಕೆ ಬಂದು ಕಂಪಿಲಿಯನ್ನು ರಾಜಧಾನಿಯನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ. ಈ ಗ್ರಾಮದಲ್ಲಿಯೂ ಕೂಡ ತಮ್ಮ ಪೂರ್ವದ ರಾಜಧಾನಿ ಹೆಂಜೇರಿನಲ್ಲಿದ್ದಂತೆ ಸಿದ್ದೇಶ್ವರ ದೇವಾಲಯವನ್ನು (ಈಗಿನ ಸೋಮೇಶ್ವರ ದೇವಸ್ಥಾನ) ಮಾಡಿಸುತ್ತಾರೆ. ಇವರ ಅಂತ್ಯದವರೆಗೆ ಕಂಪಿಲಿಯೇ ಇವರ ರಾಜಧಾನಿಯಾಗಿತ್ತು. ಕಂಪಿಲಿಯು ಹೊಸಪೇಟೆಗೆ ಸೇರಿದ ತುಂಗಭದ್ರಾ ತಡಿಯ ಗ್ರಾಮ.

ವಿಪ್ರನಾರಾಯಣ ಎಂಬ ಗ್ರಾಮವು ಗಂಗಾವತಿಗೆ ಸಮೀಪದ ವಿಪ್ರ ಗ್ರಾಮವಾಗಿದ್ದು ಅದನ್ನು ಕೆಲವು ಕಾಲ ನೊಳಂಬರು ತಮ್ಮ ನೆಲೆವೀಡಾಗಿ ಮಾಡಿಕೊಂಡಿದ್ದ ಉಲ್ಲೇಖವನ್ನು ಶಾಸನವೊಂದು ತಿಳಿಸುತ್ತದೆ. ಅಲ್ಲಿಯೂ ಸಹ ನೊಳಂಬರ ಕಾಲದ ದೇವಾಲಯವೊಂದಿದ್ದು ಬಹುಶಃ ತ್ರೈಲೋಕ್ಯಮಲ್ಲ ಇರ್ಮಡಿ ನೊಳಂಬನ ಕಾಲದಲ್ಲಿ ಅದು ರಚಿತವಾಗಿರಬೇಕು.

ಏರಿಗಲ್ಲು

ನಿಡುಗಲ್ಲಿನಲ್ಲಿ ಒಂದನೆಯ ಮಹೇಂದ್ರನು ತನ್ನ ತಂದೆಯ ಹೆಸರಿನಲ್ಲಿ ದೇವಾಲಯವೊಂದನ್ನು ಕಟ್ಟಿಸುತ್ತಾನೆ.

ಬರಗೂರು

ಬರಗೂರು ಇಂದಿನ ಸಿರಾ ತಾಲೂಕಿನ ಅದೇ ಹೆಸರಿನ ಗ್ರಾಮವಾಗಿದೆ. ಈ ಗ್ರಾಮದಲ್ಲಿ ಮಹೇಂದ್ರನು ತನ್ನ ಹೆಸರಿನಲ್ಲಿ ತನಗೆ ಶ್ರೇಯಸ್ಸಾಗಬೇಕೆಂದು ತನ್ನ ಹೆಸರಿನಲ್ಲಿ ಮಹೇಂದ್ರೇಶ್ವರಾಲಯವನ್ನು ಮಾಡಿಸುತ್ತಾನೆ. ಇದೇ ಸಂದರ್ಭದಲ್ಲಿ ಇವನ ರಾಣಿಯಾದ ಬಿಜಯ ಮಹಾದೇವಿ ಬರಗೂರನ್ನು, ಪರಮ ಮಹಾದೇವಿ ಧರ್ಮಪೊಳಲನ್ನು, ಅಕ್ಕಬ್ಬೆ ಸಿಯುಪೂರನ್ನು, ದೊಮ್ಮೊಬ್ಬೆ ತ್ರೈಳೋಕ್ಯಪೊಳಲನ್ನು ಆಳುತ್ತಿದ್ದಂತೆ ಶಾಸನಗಳು ಉಲ್ಲೇಖಿಸುತ್ತವೆ.

ಬಾಗಳಿ

ಬಾಗಳಿಯು ಯಾವ ಅಧಿಕಾರಿಯ ಆಡಳಿತಕ್ಕೂ ಒಳಪಟ್ಟಿದ್ದಂತೆ ತೋರುವುದಿಲ್ಲ. ಬಹುಶಃ ಬಾಳ್ಗುಳಿಯ (ಬಾಗಳಿ) ಮಹಾಜನರೆ ಈ ಗ್ರಾಮದ ಆಗುಹೋಗುಗಳನ್ನು ನೋಡಿಕೊಳ್ಳುತ್ತಿದ್ದರು. ೧೦೧೮ರಲ್ಲಿ ನೊಳಂಬ ಉದಯಾದಿತ್ಯನು ಕಲ್ಲೇಶ್ವರ ದೇವಾಲಯವನ್ನು ಕಟ್ಟಿಸಿದ ಮೇಲೆ ಹೆಚ್ಚಿನ ಪ್ರಸಿದ್ಧಿ ಪಡೆಯಿತು, ಕಲ್ಲೇಶ್ವರ ದೇವಾಲಯವು ಚಟುವಟಿಕೆಗಳ ಆಗರವಾಗಿತ್ತು.

ಈ ಮೇಲೆ ಉಲ್ಲೇಖಿತ ಅನೇಕ ಗ್ರಾಮಗಳಲ್ಲಿ ನೊಳಂಬರು ತಮ್ಮ ಕುಲದೈವದ ಹೆಸರಿನ ಶಿವ ಮತ್ತು ವಿಷ್ಣು ದೇವಾಲಯಗಳನ್ನು ಕಟ್ಟಿಸಿ ಆ ದೇವಾಲಯಗಳಿಗೆ ನೊಳಂಬೇಶ್ವರ, ನೊಳಂಬ ನಾರಾಯಣೇಶ್ವರ ಎಂಬ ಹೆಸರುಗಳಿಂದ ಕರೆಯುತ್ತಿದ್ದುದನ್ನು ಅನೇಕ ಶಾಸನಗಳು ಉಲ್ಲೇಖಿಸಿವೆ. ಇವಲ್ಲದೆ ಕೆಲವು ಸ್ಥಳಗಳಲ್ಲಿ ಮೈಲಾರನ ಹೆಸರಿನ ದೇವಾಲಯಗಳನ್ನು ಮೊದಲು ನಿರ್ಮಿಸುತ್ತಾರೆ. ಅನೇಕ ಗ್ರಾಮಗಳಲ್ಲಿ ನೀರಾವರಿ ಉಪಯೋಗಕ್ಕಾಗಿ ಹೊಸದಾಗಿ ಕೆರೆಗಳನ್ನು ಕಟ್ಟಿಸಿ ತಮ್ಮ ಹೆಸರಿನಲ್ಲಿ ಕರೆದಿದ್ದಾರೆ.

ತಗಡೂರು

(ಈಗಿನ ತಮಿಳುನಾಡಿನ ಧರ್ಮಪುರಿ) ಮಹೇಂದ್ರನ ಕಾಲದಲ್ಲಿ ಅವನ ರಾಜ್ಯದ ದಕ್ಷಿಣದ ತುದಿಯಲ್ಲಿದ್ದು ಪ್ರಮುಖ ನಗರವಾಗಿತ್ತು. ಇಲ್ಲಿ ಮಹೇಂದ್ರನ ಕಾಲದಲ್ಲಿ ನಿಧಿಯಣ್ಣ ಮತ್ತು ಚಂದಿಯಣ್ಣ ಎಂಬ ಇಬ್ಬರು ಜೈನ ವ್ಯಾಪಾರಿಗಳು ಬಸದಿಯೊಂದನ್ನು ಕಟ್ಟಲು ಭೂಮಿ ದಾನ ಪಡೆದುಕೊಳ್ಳುತ್ತಾರೆ. ಅಯ್ಯಪನ ಹೆಸರಿನಲ್ಲಿ ಅಗ್ರಹಾರವೊಂದನ್ನು ನಿರ್ಮಿಸಿ ಅಯ್ಯಪ ಮಂಗಲವೆಂದು ಹೆಸರನ್ನು ಕೊಡುತ್ತಾರೆ. ಅದು ಈಗಿನ ಐಮಂಗಲ.

ಪೊಳ್ಕುಂದ

ಹುನ್ಕುಂದ ಅಥವಾ ಪೊಂಕುಂದ ಅಥವಾ ಪೊಕ್ಕುಂದ ಅಥವಾ ಪಂಗವಾಡಿ ಎಂದು ಕರೆಯುವ ಈ ನಾಡಿನಲ್ಲಿ ಮತ್ತು ಬಲ್ಲ, ಎರಡೆಯೂರು (ಯೆಲ್ದೂರು) ಬಿದಿರೂರು ಮುಂತಾದ ಅನೇಕ ಗ್ರಾಮಗಳಲ್ಲಿ ದೊಡ್ಡ ತುರುಗಾಳೆಗಗಳು ನಡೆದಿದ್ದು, ಅದರಲ್ಲಿ ಸತ್ತ ವೀರರಿಗೆ ಸ್ಮಾರಕವಾಗಿ ಅನೇಕ ವೀರಗಲ್ಲುಗಳನ್ನು ಇಂದಿಗೂ ಕಾಣಬಹುದು ಈ ಪ್ರದೇಶವೂ ನೊಳಂಬರ ಆಳ್ವಿಕೆಗೆ ಸೇರಿದ್ದ ಪ್ರದೇಶ.

ಸಿಂಹಪೋತನು ತನ್ನ ಮಗ ಚಾರುಪೊನ್ನೇರನ ಜಾತಕರ್ಮಗಳನ್ನು ಮಾಡಿಸಿ, ಗೊರವಿಗೆರೆಯನ್ನು ಪ್ರಭುರಾಮ ಮಂಗಲವೆಂದು ಹೆಸರನ್ನು ನೀಡಿದ ಉಲ್ಲೇಖ ತಾಮ್ರಪಟದಿಂದ ತಿಳಿಯುತ್ತದೆ.

ಹಂಪೆಯಲ್ಲಿ ಇವರ ಕಾರ್ಯ ಚಟುವಟಿಕೆಯ ಬಗ್ಗೆ ನೇರವಾದ ಉಲ್ಲೇಖಗಳಿಲ್ಲದಿದ್ದರೂ ಉದಯಾದಿತ್ಯನು ಬಾಗಳಿ ದೇವಾಲಯಕ್ಕೆ ದಾನ ನೀಡುವ ಸಂದರ್ಭದಲ್ಲಿ ಪಂಪಾತೀರ್ಥದಲ್ಲಿ ಇದ್ದಂತೆ ತಿಳಿಸಿರುವುದರಿಂದ ಅವನ ಕಾಲದಲ್ಲಿ ಹಂಪೆಯಲ್ಲಿಯೂ ಕೂಡ ದೇವಾಲಯದ ರಚನೆ ಮತ್ತಿತರ ಚಟುವಟಿಕೆಗಳು ನಡೆದಿರಬೇಕು. ಅಲ್ಲಿರುವ ದೇವಾಲಯಗಳನ್ನು ಅಧ್ಯಯನ ಮಾಡಿದಾಗ

ನೊಳಂಬ ವಾಸ್ತುಶೈಲಿಯನ್ನು ಕೆಲವು ದೇವಾಲಯಗಳಲ್ಲಿ ಕಂಡುಬಂದಿರುವುದರಿಂದ ಅಲ್ಲಿಯೂ, ದೇವಾಲಯಗಳನ್ನು ಅವರು ನಿರ್ಮಿಸಿರಬೇಕು.

ಶಾಸನಗಳಲ್ಲಿ ದೊರಕಿದ ನೊಳಂಬರ ಆಡಳಿತ ಪ್ರದೇಶಗಳನ್ನು ಇಲ್ಲಿ ಉಲ್ಲೇಖಿಸಿ ಅವುಗಳ ಪ್ರಾಮುಖ್ಯತೆಯನ್ನು ಅವುಗಳು ಒಳಗೊಂಡಿದ್ದ ಧಾರ್ಮಿಕ ಕಾರ್ಯಗಳನ್ನು ಗುರುತಿಸಲಾಗಿದೆ. ಅಷ್ಟೇ ಅಲ್ಲದೆ ಬೇರೆ ಬೇರೆ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಕೆಲವು ಆಡಳಿತ ವಿಭಾಗಗಳನ್ನು ಗಮನಿಸಿದಾಗ ಒಂದು ರಾಜವಂಶದ ಪತನಾನಂತರ ಅವರ ಆಳ್ವಿಕೆಯ ಪ್ರದೇಶಗಳನ್ನು ಆಕ್ರಮಿಸಿಕೊಂಡು ತಮ್ಮ ಸಾಧನೆಯ ದಿಗ್ವಿಜಯದ ಸೂಚಕವಾಗಿ ಆ ರಾಜವಂಶಗಳ ಮೂಲ ಹೆಸರಿನಲ್ಲೇ ಕರೆಯುತ್ತಿದ್ದ ಅಂಶಗಳು ತಿಳಿದುಬರುತ್ತದೆ. ಹೀಗೆ ನೊಳಂಬ ವಂಶದ ನಂತರ ಅವರ ಆಡಳಿತ ಪ್ರದೇಶಗಳ ಹೆಸರಿನಲ್ಲಿ ಪಾಂಡ್ಯರು ನೊಳಂಬವಾಡಿಯ ಹೆಸರನ್ನು ಉಲ್ಲೇಖಿಸಿರುವುದು ಅವರ ಶಾಸನಗಳಿಂದ ತಿಳಿದುಬರುತ್ತದೆ. ಹೊಯ್ಸಳರೂ ಸಹ ಅವರ ಕೆಲವು ಶಾಸನಗಳಲ್ಲಿ ಉಲ್ಲೇಖಿಸಿರುವ ಉದಾಹರಣೆಗಳು ದೊರಕಿವೆ.

✦✦

## ಟಿಪ್ಪಣಿಗಳು

1. SIIXIPtNo.38; ಕ.ವಿ.ಶಾ.ಸಂ.೧. [illegible]
2. EC.XI.Dg.56; CI.33, 34; EC.XII.Si.24. 38.
3. A.S.Altekar - Rastrakutas & their times.
4. EC.XI.CI.34.
5. [illegible]
6. [illegible]
7. [illegible]
8. EC.X.Mb.51.
9. MAR.1923.No.34.
10. EC.XVI.Suppl.Mb.306.
11. EC.X.Mb.65.
12. EC.X.Mb.43.
13. ಕ.ವಿ.ಶಾ.ಸಂ.೧.ಸಾದಸ.೨
14. ಕ.ವಿ.ಶಾ.ಸಂ.೧.ಬರಬ.೯೭.
15. SII.IX.Pt.1.No.551.
16. ಕ.ವಿ.ಶಾ.ಸಂ.೧.[illegible]ರಗ.೫೯.
17. EC.XI.Jl.10.
18 ಕ.ವಿ.ಶಾ.ಸಂ.೧.ಪಡಗ.೬೦.
19. M.S.Krishnamurty - The Nolambas.p.196.Mysore.1980.
20. ಕ.ವಿ.ಶಾ.ಸಂ.೧.ಸಿರಗ.೫೯.
21. SII.XI.Pt.1.No.109.
22. SII.IX.Pt.1.No.110.
23. EI.Vol.16.No.7.
24. EC.XI.Dg.71.
25. [illegible]
26. [illegible]
27. EC.XI.CI.34.
28. ಮಾಸಪಿಕ ಕರ್ನಾಟಕ ಸಂ.೧೬-೨, ೮೫-೧೦೯.
29. ಕ.ವಿ.ಶಾ.ಸಂ. [illegible]
30. EC.XI.CI.34.
31. EC.XI.CI.34.
32. SII.IX.Pt.1.No.26.
33. EC.XI.CI.33.
34. EC.XI.CI.34.
35. EC.XI.CI.34.
36. EC.XI.CI.33.

37. EC.XI.Dg.3.p.59.

38. SII.IX.Pt.1.No.20,39,40.

39. SII.XI.Pt.2.No.124.

40. SII.XI.Pt.2.No.109.

41. MAR.1929.No.54.

42. EC.XII.Dg.19.

43. SII.XI.pp.124.

44. EC.XI.Cl.34.

45. [illegible]

46. EC.XI.Dg.19.

47. EC.IX.Bn.40.

48. [illegible]

49. SII.XI.Pt.2.175.

ಅಧ್ಯಾಯ – VII

# ಜೈನಧರ್ಮ

ಅಶೋಕನ ಮೊಮ್ಮಗ ಸಂಪ್ರತಿ ಚಂದ್ರಗುಪ್ತನ ಕಾಲದಲ್ಲಿ ಜೈನಧರ್ಮ ಕರ್ನಾಟಕದಲ್ಲಿ ಕಾಲಿರಿಸಿತು. ಭದ್ರಬಾಹುಭಟಾರರು ಸಂಪ್ರತಿ ಚಂದ್ರಗುಪ್ತನೊಂದಿಗೆ ದಕ್ಷಿಣದ ಶ್ರವಣಬೆಳಗೊಳಕ್ಕೆ ಬಂದು ನೆಲೆಸಿದರು. ಆ ಕಾಲದ ಜೈನ ಶಾಸನಗಳು ಕರ್ನಾಟಕದಲ್ಲಿ ದೊರೆಯದಿದ್ದರೂ ಕರ್ನಾಟಕದ ಮೂಲಕ ತಮಿಳುನಾಡಿಗೆ ಹೋಗಿ ನೆಲೆಸಿದ ಜೈನಯತಿಗಳ ಉಲ್ಲೇಖಿಸುವ ಶಾಸನಗಳು ದೊರೆತಿವೆ. ಕದಂಬರ ಕಾಲದ ಹಲಸಿಗೆ ಶಾಸನಗಳಲ್ಲಿ (ಪಲಾಸಿಕ) ಜೈನಧರ್ಮದ ದಿಗಂಬರ, ಶ್ವೇತಾಂಬರ ಮತ್ತು ಯಾಪನೀಯ ಸಂಘಕ್ಕೆ ಸೇರಿದ ಜನರು ಇದ್ದ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಮುಂದೆ ಶ್ರವಣಬೆಳಗೊಳ, ಸೋಸಲೆ, ನೊಣಮಂಗಲ ಮುಂತಾದ ಕಡೆಗಳಲ್ಲಿ ಜೈನ ಯತಿಗಳು ವಾಸವಾಗಿದ್ದುದನ್ನು ಮತ್ತು ಬಸದಿಗಳಿದ್ದುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಕರ್ನಾಟಕದ ಅನೇಕ ಅರಸು ಮನೆತನಗಳು ಜೈನಧರ್ಮಕ್ಕೆ ಆಶ್ರಯ ನೀಡಿದ್ದವು.

ನೊಳಂಬ ಪಲ್ಲವರು ಗಂಗರ ಮಾಂಡಲೀಕರಾಗಿ ತಮ್ಮ ರಾಜಕೀಯವನ್ನು ಆರಂಭಿಸಿದರೂ ಇವರ ಆಡಳಿತದಲ್ಲಿ ಗಂಗರ ರಾಜ್ಯದಲ್ಲಿದ್ದಂತೆ ಜೈನಧರ್ಮೀಯರು ಹೆಚ್ಚಿಗೆ ಇರಲಿಲ್ಲ. ಇದಕ್ಕೆ ಕಾರಣ ನೊಳಂಬರು ಶೈವ ಪರಂಪರೆಯವರಾಗಿದ್ದುದು ಒಂದು ಕಾರಣವಾದರೆ ಕಂಚಿಯ ಪಲ್ಲವರು, ಗಂಗರು, ರಾಷ್ಟ್ರಕೂಟರು, ಬಾಣರು, ವೈದುಂಬರು, ಚೋಳ ಇವರೆಲ್ಲ ಈ ಪ್ರದೇಶದ ಮೇಲೆ ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಮೇಲಿಂದ ಮೇಲೆ ಅಥವಾ ಆಗಾಗ್ಗೆ ಯುದ್ಧಗಳು ನಡೆಯುತ್ತಿದ್ದು, ಈ ಯುದ್ಧಗಳು ನಾಡಿನ ಸ್ಥಿರತೆಯನ್ನು, ನೆಮ್ಮದಿಯನ್ನು ಕದಡುತ್ತಿದ್ದು, ಶಾಂತಿ ಮತ್ತು ನೆಮ್ಮದಿಯಿಂದ ಬದುಕ ಬಯಸುತ್ತಿದ್ದ ಜೈನರಿಗೆ ಈ ಬಗೆಯ ಅಸ್ಥಿರತೆಯಲ್ಲಿ ಬದುಕಲಾಗದೆ ಗಂಗ ರಾಜ್ಯದ ಕಡೆಗೆ ಬಂದಿರಬಹುದು. ಹೀಗಾಗಿ ನೊಳಂಬರ ಶಾಸನಗಳನ್ನು ಗಮನಿಸಿದಾಗ ಮತ್ತು ಕ್ಷೇತ್ರ ಪರಿವೀಕ್ಷಣೆಯಲ್ಲಿ ದೊರೆಯುವ ಅವಶೇಷಗಳ ಬಗ್ಗೆ ಗಮನಿಸಿದಾಗ ಜೈನಧರ್ಮ ನೊಳಂಬರ ಆಳ್ವಿಕೆಯಲ್ಲಿ ಹೆಚ್ಚು ಪ್ರಭಾವಯುತ ಧರ್ಮವಾಗಿರಲಿಲ್ಲವೆಂದು ತಿಳಿಯುತ್ತದೆ. ನೊಳಂಬವಾಡಿಯ ಕೆಲವೇ ಆಯ್ದ ಸ್ಥಳಗಳಲ್ಲಿ ಜೈನಧರ್ಮದ ಅವಶೇಷಗಳು ದೊರೆಯುತ್ತವೆ.

ಅವು ತಗಡೂರು (ಈಗಿನ ಧರ್ಮಪುರಿ) ಪೆಂಜೇಱು, ಮರೋಳ, ಕೋಗಳಿ, ಅಸಗೋಡು, ನಂದಿಬೇವ್ವೂರು, ಮೊರಬ, ಹುನಗುಂದ ಮುಂತಾದ ಕಡೆಗಳಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ಶಾಸನಗಳು ಸಿಗುತ್ತವೆ.

ನೊಳಂಬವಾಡಿಯ ಉಲ್ಲೇಖಿತ ಪ್ರಾಚೀನ ಜೈನ ಶಾಸನಗಳೆಂದರೆ ಹುಲಿಕುಂಟೆ ಗ್ರಾಮದ ಕ್ರಿ.ಶ.ಸು. ೮೮೦ ರ ಮಹೇಂದ್ರನ ಕಾಲದ ಶಾಸನದಲ್ಲಿ[1] ಬಸದಿಯ ಉಲ್ಲೇಖವಿದೆ. ಅನಂತಪುರ ಜಿಲ್ಲೆಯ ಹೇಮಾವತಿಯ ಶಾಸನದಲ್ಲಿ, ಅನಂತಶಿವರು, ಲಗುಳೀಶ್ವರರು ಕಮಲ ಪ್ರಭೆಗೊರವರು ನಕರೇಶ್ವರದ ದೇವನ ಸೋಪಗೊರವರು ಅವರ ಶಿಷ್ಯರಾದೋರು ಪಾಲಿಸುವಂತೆ ಹೇಳಿ ಬಸದಿಗೆ ದಾನ ಕೊಟ್ಟಂತೆ ಹೇಳಿದೆ. ಬಹುಶಃ ಇದು ಒಂದನೆಯ ಮಹೇಂದ್ರನ ಕಾಲಕ್ಕೆ ಸೇರಿದ ಶಾಸನ.[2] ಧರ್ಮಪುರಿಯ ಮಲ್ಲಿಕಾರ್ಜುನ ದೇವಾಲಯದ ಬಳಿ ದೊರೆತಿರುವ ಶಾಸನ ಇದು. ಕ್ರಿ.ಶ. ೮೯೨ರ ನೊಳಂಬ ಅರಸ ಮಹೇಂದ್ರನ ಕಾಲಕ್ಕೆ ಸೇರಿದ್ದಾಗಿದೆ. ಈ ಶಾಸನದಲ್ಲಿ ಚಂದಿಯಣ್ಣ, ನಿಧಿಯಣ್ಣ ಎಂಬುವವರು ತಗಡೂರಿನಲ್ಲಿ ಬಸದಿಯನ್ನು ಮಾಡಿಸಿದಂತೆಯೂ ಆ ಬಸದಿಯ ನಿರ್ವಹಣೆಗೆ ಮೂಲಪಳ್ಳಿ ಎಂಬ ಹಳ್ಳಿಯನ್ನು ಮೂಲಸಂಘ ಸೇವಾನ್ವಯದ ಪೊಗರಿಯಗಣದ ವಿನಯಸೇನ ಸಿದ್ಧಾಂತಭಟಾರರ ಶಿಷ್ಯ ಕನಕಸೇನ ಸಿದ್ಧಾಂತ ಭಟಾರರಿಗೆ ನೀಡಿದಂತೆ ತಿಳಿಯುತ್ತದೆ.[3] ಅದೇ ಗ್ರಾಮದ ಕ್ರಿ.ಶ.೯೧೦ರ ಒಂದು ಶಾಸನದಲ್ಲಿ ಲೋಕಯ್ಯ ಎಂಬುವವನು ನಿಧಿಯಣ್ಣ ಮಾಡಿಸಿದ ಬಸದಿಗೆ ದಾನ ಕೊಟ್ಟದ್ದನ್ನು ತಿಳಿಸುತ್ತದೆ.[4] ಅದೇ ಗ್ರಾಮದ ಕ್ರಿ.ಶ. ೯೫೯ ರ ಅಪೂರ್ಣ ಶಾಸನದಲ್ಲಿ ಇರುಳಚೋರನು ರಾಜ್ಯಭಾರ ಮಾಡುತ್ತಿದ್ದಾಗ 'ಮಾಂಗಬ್ಬೆ ಕನ್ತಿಯ' ಉಲ್ಲೇಖ ಬಂದಿದ್ದು, ಈಕೆ ಅಲ್ಲಿಯ ಒಬ್ಬ ಶ್ರಾವಕಿಯಾಗಿದ್ದಳೆಂದು ತಿಳಿಯಬಹುದು.[5]

ಇಲ್ಲಿಂದ ಮುಂದೆ ಸುಮಾರು ನೂರು ವರ್ಷಗಳ ಕಾಲ ಜೈನಧರ್ಮಕ್ಕೆ ಸಂಬಂಧಿಸಿದಂತೆ ನೊಳಂಬವಾಡಿಗೆ ಸಂಬಂಧಿಸಿದ ಶಾಸನಗಳು ಯಾವ ಪ್ರದೇಶದಲ್ಲಿಯೂ ದೊರೆಯುವುದಿಲ್ಲ.

ಮರೋಳ ಗ್ರಾಮದ ಕ್ರಿ.ಶ.೧೦೨೪ರ ಶಾಸನದಲ್ಲಿ ಜೈನಬಸದಿಯ ಉಲ್ಲೇಖ ಬಂದಿದ್ದು, ಅಲ್ಲಿಯ ಅನಂತವೀರ್ಯಮುನಿಪನ ಹೊಗಳಿಕೆ ಬಂದಿದೆ. ಈ ಬಸದಿಗೆ ಚಾಳುಕ್ಯ ಸತ್ಯಾಶ್ರಯನ ತಂಗಿಯೂ, ಜಗದೇಕಮಲ್ಲ ನೊಳಂಬನ ಪತ್ನಿಯೂ ಆದ ಮಹಾದೇವಿಯು ದಾನ ನೀಡಿದ ಉಲ್ಲೇಖವಿದೆ. ಬಸದಿಯಲ್ಲಿದ್ದ ಗುರುಗಳನ್ನು ನಿಯಮಾಚಾರ ವಿಚಾರ ಸಾರಗುಣ ಬಾಲಜ್ಞಾನ ಸಂಸಾರ ನಿರ್ಣಯ ನಿರ್ವ್ಯಕ್ತಿ ನಿಯೋಗಿ ನಿರ್ಮಾಣ ಚಿತ್ರಮಾರ್ಯ . . ಯಯಿಂ . . ತಾಳ್ದಿದತಿ . . ಎನಿಸುತಲೀ ಆಣ್ಡಿಯ ಭಟ್ಟರಕರನ್ನವಲ್ಲ ಮುನಿಪರ್ ವಿಶ್ವಮ್ಬರಾಭಾಗದೊಳ . . ಸಕಳ ವ್ಯಾಕರಣಂ ನಿಘಂಟು ಗಣಿತಂ ವಾತ್ಸಾಯನಂ ಜೋತಿಸಂಶಕುನಂಛಂದಮನುವ್ರೂ ಗಾಂಧಾರಮಳಂಕಾರಂ ಮಹಾಕಾವ್ಯ ನಟಕಧ್ಯಾತ್ಮಿಕಮರ್ತ್ಥ ಶಾಸ್ತ್ರತತಿ ಸಿದ್ಧಾಂತ ಪ್ರಮಾಣಂಗಳೆಂಬ ಕಳಾವಿದ್ಯೆ

ಗನಂತವೀರ್ಯ್ಯಮುನಿಪರ್ಸ್ಸರ್ವ್ವಜ್ಞರೀ ಧಾತ್ರಿಯೊಳ್ ಎಡೆಯುಂ ಉಂಟೆ .. ಎಂದು ವರ್ಣಿಸುತ್ತದೆ.[6] ಕೋಗಳಿಯ ಕ್ರಿ.ಶ.ಸು. ೧೦೪೫ ರ ಶಾಸನದಲ್ಲಿ ಇಂದ್ರನಂದಿಪಂಡಿತನ ಶಿಷ್ಯನಾದ ವಾದಿಘೇರುಂಡ ಚಂದ್ರನಂದಿಪಂಡಿತನ ಉಲ್ಲೇಖ ಬಂದಿದ್ದು, ಅಲ್ಲಿನ ಬಸದಿಗೆ ಅನೇಕ ಜನರು ದಾನ ಕೊಟ್ಟಂತೆ ತಿಳಿಯುತ್ತದೆ. ಕೋಗಳಿಯು ಈ ಶಾಸನದಲ್ಲಿಯಲ್ಲದೆ ಕನ್ನಡದ ಪ್ರಾಚೀನ ಕಾವ್ಯವಾದ ವಡ್ಡಾರಾದನೆಯೂ ಆ ಕಾಲಕ್ಕೆ ಕೋಗಳಿ ಪ್ರಸಿದ್ಧ ಜೈನಕೇಂದ್ರವಾಗಿತ್ತೆಂಬ ಅಂಶವನ್ನು ತಿಳಿಸುತ್ತದೆ. ಈ ವಡ್ಡಾರಾದನೆಯು ನೊಳಂಬರ ಕಾಲದಲ್ಲಿ ರಚನೆಯಾಗಿದೆಯೆಂಬ ಅಂಶವನ್ನು ಗಮನಿಸಬಹುದು.[7]

ನಂದಿಬೇವೂರಿನ ಕ್ರಿ.ಶ ೧೦೫೪ರ ಶಾಸನದಲ್ಲಿ ನೊಳಂಬಪಲ್ಲವ ಪೆರ್ಮಾಡಿದೇವನು ಆಳುತ್ತಿದ್ದಾಗ ಅಷ್ಟೋಪವಾಸಿಭಳಾರನು ಮಾಡಿಸಿದ ಬಸದಿಗೆ ಭೂದಾನವನ್ನು ಮಾಡುತ್ತಾನೆ, ಈ ಶಾಸನದಲ್ಲಿ ಅಷ್ಟೋಪವಾಸಿಯ ವರ್ಣನೆ ಬಂದಿದ್ದು, ಅದರಲ್ಲಿ ಪರಮ ಶ್ರೀ ಜೈನಮಾರ್ಗ ಪ್ರಕಟಿತ ಮಹಿಮಾಕಾರೌದಾರ್ಯ್ಯರೀ ಸಂಸರಣಾಂಬೋರಾಶಿಯಿಂದಂ ಪೊಱಮಡುವ ಸುಖೋಪಾಯಮಂ ತೋರೆ ಜೈನೋತ್ಕರಮಂ ಕಾರುಣ್ಯದಿಂ ನಡೆಯಿಸುವಗುಣ ... ಜಿಗರ್ ಮೂಲಸಂಘಾಭರಣರ್ ದೇಶಿಗಗಣರ್ ಪೊತ್ತಗೆವಳಿ ... ಸರ್ವಶಾಸ್ತ್ರ ಪ್ರವೀಣರ್ ॥

ಕಂತು ಮದಾಹವರ್ ಸಕಳದಯಾಪರರ್ ಉದ್ಘಭೋದರ
ತ್ಯಂತ ತಪೋಮಯರ್ಜ್ಜಿನಮ.... ರಾರ್ಯದೇವದ್ವಪ
ರ್ಯಂತರವರ್ಗೆ ಶಿಷ್ಯರಖಿಳಾಗಾ... ಗವೀರಣಾಂದಿಸಿ
ದ್ಧಾಂತಿಗರೆಂದೊಡೆ ಹೊಗಳ್ವುದುನತಿಯಂ ಮ...ರೀರ್ವ್ವರಂ ॥
ಅಷ್ಟೋಪವಾಸಿ ಮುನಿಪತಿ
ಗಷ್ಟಮಹಾ... ಹಾರ್ಯ ವಿಭವಂಗರುಹು
ಗಷ್ಟವಿಧ ಕರ್ಮ್ಮರ...
.. ಷ್ಟ ವಿಧಾರ್ಚನ ನಿಮಿತ್ತಮೆಂದಿದನಿತ್ತರ್ ॥

ಈ ವಿವರಗಳಿಂದ ಅಷ್ಟೋಪವಾಸಿ ಯತಿಯ ಮೂಲಸಂಘ ದೇಸಿಗಗಣ ಪುಸ್ತಕಗಚ್ಚಕ್ಕೆ ಸೇರಿದವರೆಂದು ವಿಧಿತವಾಗುತ್ತದೆ.[8]

ಮೊರಬದ ಕ್ರಿ.ಶ ೧೦೭೭ರ ಶಾಸನದಲ್ಲಿ ವೀರನೊಳಂಬ ಪಲ್ಲವಪೆರ್ಮಾನಡಿ ಜಯಸಿಂಹದೇವನು ಆಳುತ್ತಿದ್ದಾಗ ಅವನು ನೀಡಿದ ದಾನವನ್ನು ಉಲ್ಲೇಖಿಸುವಾಗ ದಾನದ ಗಡಿಯಾಗಿ ಘಟಾನ್ತಕಿ ಬಸದಿಯ ದಾನ ಶಾಲೆಯ ಉಲ್ಲೇಖ ಬಂದಿದ್ದು, ಆ ಊರಿನಲ್ಲಿ ಬಸದಿಯಿದ್ದ ಬಗ್ಗೆ ಮಾಹಿತಿ ನೀಡುತ್ತದೆ.[9] ಹುನಗುಂದದ ಕ್ರಿ.ಶ. ೧೦೮೦ ರ ಶಿಥಿಲ ಶಾಸನದಲ್ಲಿ ಜಿನಬಸದಿಯ

ಉಲ್ಲೇಖ ಬಂದಿದ್ದು ಅಲ್ಲಿನ ಗುರುಗಳನ್ನು ಕುಂದಕುಂದಾನ್ವಯದ ಮೂಲಸಂಘದ ದೇಶಿಯಗಣ ಪುಸ್ತಕಗಚ್ಛದ ಅ(ಹ)ನಸೋಗೆ ಬಳಿಯ ಇಂದ್ರಣಂದಿ ಶಿಷ್ಯ ಬಾಹುಬಲಿಯ ಉಲ್ಲೇಖವಿದೆ.[10]

ಮೇಲಿನ ವಿವರಗಳ ಹಿನ್ನೆಲೆಯಲ್ಲಿ ಕ್ರಿ.ಶ.೮೯೨ರಿಂದ ಕ್ರಿ.ಶ.೧೦೮೦ರ ವರೆಗೆ, ಸುಮಾರು ೨೦೦ ವರ್ಷಗಳ ಅವಧಿಯಲ್ಲಿ ನೊಳಂಬರ ಕಾಲಕ್ಕೆ ಸಂಬಂಧಿಸಿದಂತೆ ನೊಳಂಬವಾಡಿಯಲ್ಲಿ ಬೆರಳೆಣಿಕೆಯಷ್ಟು ಮಾತ್ರ ಶಾಸನಗಳು ದೊರಕಿದ್ದು, ಆ ನಾಡಿನಲ್ಲಿ ಜೈನಧರ್ಮ ಪ್ರಧಾನವಾಗಿ ಇರಲಿಲ್ಲವೆಂಬ ಅಂಶವನ್ನು ಗಮನಿಸಬೇಕಾದ ಅಂಶವಾಗಿದೆ.

++

## ಟಿಪ್ಪಣಿಗಳು

1. EC.XII.12.Si.24.
2. SII.IX.Pt.1.No.9.
3. ಕ.ವಿ.ಶಾ.ಸಂ.೪.ಧರ್ಮಪುರಿ.೯೨೩.
4. ಕ.ವಿ.ಶಾ.ಸಂ.೪.ಧರ್ಮಪುರಿ.೯೧.
5. SII.IX.Pt.1.No 23.
6. SII.XI.Pt.1.61.
7. ಕ.ವಿ.ಶಾ.ಸಂ.೧.ಹಗರಿ.೧೬.
8. SII.IX.Pt.1.115.
9. SII.IX.Pt.2.No.144.
10. SII.XI.Pt.2.No.123; SII.IX.Pt.2.123.

## ಅಧ್ಯಾಯ - VIII

# ಸಾಂಸ್ಕೃತಿಕ ಕೊಡುಗೆ

### ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆ

ಸಾರ್ವಜನಿಕ ಕೆಲಸ ಕಾರ್ಯಗಳಲ್ಲಿ ಕೆರೆಯ ನಿರ್ಮಾಣ ಬಹಳ ಮಹತ್ವದ ಸ್ಥಾನ ಪಡೆದಿದೆ. ಹಿಂದಿನ ಕಾಲದಲ್ಲಿ ತಾಯಿಯಾದವಳು ತನ್ನ ಮಗುವಿಗೆ ತೊಡೆಯಮೇಲಿರಿಸಿಕೊಂಡು ಹಾಲೂಡಿಸುವಾಗ ಕಿವಿಯಲ್ಲಿ ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು ಎಂದು ಸಾರ್ವಜನಿಕವಾಗಿ ಧರ್ಮಕಾರ್ಯಗಳನ್ನು ಮಾಡುವಂತೆ ಪ್ರಚೋದಿಸುತ್ತಿದ್ದುದು ತಿಳಿದುಬರುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ಈಗಿನಂತೆ ನದಿಗಳಿಗೆ ಅಡ್ಡಗಟ್ಟೆ ಹಾಕಿ ನೀರನ್ನು ಸಂಗ್ರಹಿಸಿ ವ್ಯವಸಾಯ ಮುಂತಾದ ಜನೋಪಯೋಗಿ ಕೆಲಸಕಾರ್ಯಗಳಿಗೆ ಬಳಸಿಕೊಳ್ಳುವಂತೆ, ಹಿಂದೆ ದೊಡ್ಡದೊಡ್ಡ ಕೆರೆಗಳನ್ನು ನಿರ್ಮಿಸಿ ಜನರಿಗೆ, ದನಕರುಗಳಿಗೆ, ಪ್ರಾಣಿಪಕ್ಷಿಗಳ ಜೀವನಾಧಾರಕ್ಕೆ ಅಗತ್ಯವಾದಂತಹ ಧಾರ್ಮಿಕಕಾರ್ಯಗಳನ್ನು ಮಾಡುತ್ತಿದ್ದರು.

ಕೆರೆಯನ್ನು ನಿರ್ಮಾಣ ಮಾಡುವುದು ಸುಲಭದ ಕೆಲಸವೇನೂ ಆಗಿರಲಿಲ್ಲ. ರಾಜ ಅಥವಾ ಅವನ ಕೈ ಕೆಳಗಿನ ಅಧಿಕಾರಿಗಳು, ಹಣವಂತರು ಹಾಗೂ ಊರಿನ ಅಥವಾ ಗ್ರಾಮದ ಜನರೆಲ್ಲಾ ಒಟ್ಟಾಗಿ ಸೇರಿ ಇಂತಹ ಕೆಲಸ ಮಾಡುತ್ತಿದ್ದರು.

ನೊಳಂಬವಾಡಿಯು ಬಯಲು ಸೀಮೆಯಾದ್ದರಿಂದ ಮಳೆಯ ಪ್ರಮಾಣವು ಕಡಿಮೆ. ಬೀಳುವ ಮಳೆಯನ್ನು ಆಧರಿಸಿ ವ್ಯವಸಾಯ ಮಾಡುವುದು ಕಷ್ಟ ಸಾಧ್ಯವೇ ಸರಿ. ಬೀಳುವ ಕಡಿಮೆ ಮಳೆ. ಬಿದ್ದ ನೀರನ್ನು ಶೇಖರಿಸಿ ಅದನ್ನು ಸದುಪಯೋಗಪಡಿಸಿಕೊಳ್ಳುವ ಕೆಲಸ ಬಹು ಹಿಂದಿನಿಂದಲೂ ನಡೆದು ಬಂದಿದೆ. ನೊಳಂಬರ ರಾಜ್ಯಾಡಳಿತ ಕಾಲದಲ್ಲಿಯೂ ಕೆರೆ ನಿರ್ಮಾಣದಂತಹ ಕೆಲಸ ಮುಂದುವರಿದಿದ್ದು ಇದರಿಂದ ರಾಜ್ಯದ ಪರಿಸ್ಥಿತಿಯೂ ಆರ್ಥಿಕ ಪರಿಸ್ಥಿತಿಯ ಸುಧಾರಣೆಯಾಗಿ ರಾಜನ ಬೊಕ್ಕಸ ತುಂಬುತ್ತಿತ್ತು. ಇದರಿಂದ ಕೆರೆಗಳ ನಿರ್ಮಾಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದರು. ಕೆರೆಗಳ ನಿರ್ಮಾಣವಾದಾಗ ನೀರಾವರಿಯಿಂದ ಬರಬಹುದಾದ ಉತ್ಪತ್ತಿಯ ಕೆಲ ಅಂಶವನ್ನು ಕೆರೆ

ಕಟ್ಟಿಸಿದವನಿಗೆ ರಾಜನು ಕೊಡುಗೆಯಾಗಿ ನೀಡುತ್ತಿದ್ದ. ಕೆರೆಗಳನ್ನು ಕಟ್ಟಿಸುವುದಲ್ಲದೆ ಕೆರೆಗಳು ಹೂಳು ತುಂಬಿ ಮುಚ್ಚಿಹೋಗದಂತೆ ವ್ಯವಸ್ಥೆ ಮಾಡುವುದು, ಒಡೆದುಹೋದ ಕೆರೆಯನ್ನು ಪುನರ್ನಿರ್ಮಿಸುವುದು ಹಾಗೂ ಜೀರ್ಣೋದ್ಧಾರದ ಕಾರ್ಯಗಳು ಮುಖ್ಯವಾಗಿರುತ್ತಿತ್ತು. ಹೀಗೆ ಕೆರೆಗಳ ರಚನೆ ಅವುಗಳ ನಿರ್ವಹಣೆ ಮತ್ತು ಜೀರ್ಣೋದ್ಧಾರ ಕಾರ್ಯಗಳಿಗೆ ಲೋಪವಾಗದಂತೆ ಹಿಂದಿನ ಅಳರಸರು ವ್ಯವಸ್ಥೆಗೆ ಗಮನ ಕೊಟ್ಟಿದ್ದರು. ನೊಳಂಬರು ಸಹ ಇದಕ್ಕೆ ಹೊರತಾಗಿರಲಿಲ್ಲ.

ಕಂಬದೂರಿನ ಕ್ರಿ.ಶ.ಸು. ೮೦೦ ರ ಶಾಸನದಲ್ಲಿ 'ವೀರನೊಮ್ಬಾಧಿರಾಜ ರಾಜಪರಮೇಶ್ವರ ಬೆದ್ದುನೊನ್ದೆಯ ಕೆಱೆಯ ಕಟ್ಟಿಪ್ಪನ್ದು ಅಜ್ಜಪರ್ವರ ಭಿದಿಯೆಱೆಯರ ನೊಟಂಮ್ಬ ದೊಡ್ಡನೆನ್ದು ಕಡಗಮಿಟ್ಟರ್ ಶ್ರೀಮುಖರಾಮರ್ ಶ್ರೀಮುಕದೊಡ್ಡರೆನ್ದು ಕಡಗಮಿಟ್ಟರ್' ಸಿಂಗಪೋತರಸರು ಪೊನ್ನೇಱರಸರು ಧರ್ಮಮಹಾದೇವಿಯರುಮಿಬ್ಬ ಪೊನ್ನೇಱದೊಡ್ಡರೆನ್ದು ಕಡಗಮಿಟ್ಟರ್ ಎಂದಿದೆ. ಕೆರೆಯನ್ನು ಕಟ್ಟಿಸಿದವರಿಗೆ ನೀಡುತ್ತಿದ್ದುದರ ಗೌರವವನ್ನು ಈ ಶಾಸನದಿಂದ ತಿಳಿಯಬಹುದು[1] ಇದೇ ಊರಿನ ಕ್ರಿ.ಶ. ೯೬೫ ರ ಶಾಸನದ್ದಲ್ಲಿ 'ಬೆದ್ದುಗುನ್ದೆಯ ಕೆಱೆಯಬಿತ್ತುವಾಟಮಂ ಕೆಱೆಗೆ ಗೊಟ್ಟರ್' ಎಂದಿದ್ದು ಇದನ್ನು ಊರಿನ ನೂರಾರು ಗಾವುಂಡರು ನೋಡಿಕೊಳ್ಳಬೇಕಾಗಿತ್ತು ಎಂಬುದನ್ನೂ ಸೂಚಿಸುತ್ತದೆ. ಬಿತ್ತುವಾಟವನ್ನು ಪೊಳಲ್ಚೋರನ ಅಮಾತ್ಯ ಶ್ರೀ ಚಾವುಂಡಯ್ಯನು ಮಾಡಿಸಿದುದನ್ನು ತಿಳಿಸುತ್ತದೆ.[2]

ಧರ್ಮಪುರಿಗ್ರಾಮದ ಕ್ರಿ.ಶ. ೮೭೮ ರ ಶಾಸನದಲ್ಲಿ 'ಮರುದನೇರಿಯುಮ್ಮಹೇನ್ದ್ರ ನೊಳಮ್ಬನಲ್ಲಿ ಪೊನ್ನೇಱ ಗೊರವರ್ಪ್ಪಡೆದಾರ್ಕ್ಕೆರೆಯಂ ಕಟ್ಟಿಸಿ' ಮಹೇಂದ್ರ ನೊಳಂಬನಲ್ಲಿ ಪೊನ್ನೇರ ಗೊರವನು ಆರು ಕೆರೆಯನ್ನು ಕಟ್ಟಿಸಿ ಧಾರೆಯೆರೆದಂತೆ ಉಲ್ಲೇಖವಿದೆ.[3] ಬೇಡಕೂರಿನ ಕ್ರಿ.ಶ.ಸು. ೮೮೦ ರಲ್ಲಿ ಚಲದಂಕಕಾರ ಚೋರಿಗನು ಕೆರೆಯನ್ನು ಕಟ್ಟಿಸಿದ್ದಕ್ಕೆ ಕಟ್ಟಿಸಿದವನಿಗೆ 'ಮೂರು ಗಣ್ಡುಗ ಗಟ್ಟಿವಂ ಪಳ್ಳಿ ಸಾಂಬವಯ್ಯನಿಗೆ ದಯೆಗೆಯ್ದು ಎಲ್ಲಾ ಕಾಲಕ್ಕೆಂದು ಸಾಸನ ಮಾಗೆ ಸಲ್ವದು' ಎಂದು ತಿಳಿಸುತ್ತದೆ. ಸಖ್ರಗ್ರಾಮದ ಕ್ರಿ.ಶ.ಸು. ೯೦೦ ರಲ್ಲಿ 'ಮಱುಗರೆಯರ್ ಚಿತ್ತಪ್ಪಜ್ಜೆಕೆಱೆಯಂ ಕಟ್ಟಿಶಿ ನಾಲ್ಕಳವೆಯ ಟಾಗಂ ಬಿತ್ತು ವಾಟಂ ಕೆರೆಗೆ ಕುಡುವುದು ಕುಡುದವ ಭಾರನಾಸ್ಯನಱದೋ' ಬಿತ್ತುವಾಟ ಕೊಡದವರಿಗೆ ಶಾಪಾಶಯವನ್ನು ಹೇಳಿದೆ.[4] ಮನೆಪಲ್ಲೆಯ ಶಾಸನದಲ್ಲಿ 'ಪುರುಸಯ್ಯನ ಮಗ ಚೋರಯ್ಯ ಮತ್ತು ಎರಡುಮುರ ಗಾಮುಣ್ಡರು ಪನ್ನಸಿಗರು ಅಯ್ಯಪದೇವನಲ್ಲಿ ಕೆರೆಗೆ ಬಿತ್ತು ವಾಟವ ಪಡೆದ ಅರಮಹ್ಮೊದಲಾಗಿ' ಎಂದಿದೆ.[5] ಬೇತಮಂಗಲದ ಕ್ರಿ.ಶ.ಸು.೯೨೦ ಶಾಸನದಲ್ಲಿ ವಿಜಯಾದಿತ್ಯಮಂಗಲದ ಪಿರಿಯ ಕೆಱೆಯ ಭಿನ್ನ ಪ್ರತಿಸನ್ಧಾನಜ್ಗೆಯ್ದು ಸ್ಥಿರೀಕರಿಸಿ ಬಿತ್ತು ಕಟ್ಟು ನೀಡಿದನ್ನು ಹೇಳುತ್ತದೆ.[6] ಗುಣಿಮೊರುಬಾಗಲಿನ ಕ್ರಿ.ಶ. ೯೩೬ ರ ಶಾಸನದಲ್ಲಿ ಊರ ಮಹಾಜನರು ವರುಣಶಿವಬಟಾರರು ಸೇರಿ 'ಕೆಱೆಗೆ ಬಿತ್ತುವಟವ' ಕೊಟ್ಟದ್ದನ್ನು ಹೇಳುತ್ತದೆ.[7]

ಕೊಡಹಳ್ಳಿ ಶಾಸನದಲ್ಲಿ 'ತನ್ನ ಕಯ್ವರನಾಡ ನೆಕ್ಕುನ್ದಿನಾಡ ಊರಳಿಯ ದೇವಭೋಗ ತೋರೋವೆಲ್ಲ ಸಲ್ಸುದು ಕೆರೆಗೆ ಕೊಡದಾತ ಭರನಾಸಿಯು' ಎಂದು ಹೇಳಿದೆ.[8] ಮಡಕಸಿರಾ ಕ್ರಿ.ಶ.೯೫೦ ರಲ್ಲಿ 'ಮಲ್ಲಣ ಸಿವರಿಯೊಳೆ ಒಳಗೆಱೆಯ ಕಟ್ಟಡಕ್ಕೆ ನಾಲ್ಕೂರು ಮಿಱ್ದು ಕಾಡಿಯಣ್ಣ, ಪಳ್ಳಿಕಾರ ತುವಣ್ಣ ಗಾವುಂಡರು ಚಿರಪಿಯ ಚಿನ್ತಕುಂಟೆಯನ್ನು' ಪಡೆಯುತ್ತಾರೆ.[9] ಕಲ್ಲೂರಿನ ಶಾಸನದಲ್ಲಿ 'ಕಲ್ಲಳೊರ ಕೆಱೆಯ ಕೆಱಗುಟ್ಟಿ ಬಿತ್ತಲಣ್ಡೆಯಂ ಕೆಱೆಗೆ ಇಕ್ಕದನ್ದು' ಎಂದು ಹೇಳಿದೆ.[10] ಕುರುಬರಹಳ್ಳಿಯ ಶಾಸನದಲ್ಲಿ 'ಮಣಿಗಲ್ಲ ಕೆರೆಗೆ ಬಿತ್ತುಕಟ್ಟು ಬಿಟ್ಟ'ದ್ದನ್ನು ಉಲ್ಲೇಖಿಸಿದೆ.[11] ಹಿಂದೂಪುರದ ಶಾಸನದಲ್ಲಿ ಕೆಂಗೂರ-೩೦೦ ಮಹಾಜನರು ಒಂದು ಖಂಡುಗ ಭತ್ತ ಬೆಳೆಯುವ ಗದ್ದೆಯನ್ನು ಕೆರೆಗೆ ತೂಬು ಮಾಡಿಸಿದ ದುಗ್ಗಶೆಟ್ಟಿ ಎಂಬುವವನಿಗೆ ಬಿಟ್ಟಲಟ್ಟೆಯನ್ನು ಕೊಡುತ್ತಾರೆ.[12] ಗಾಂಡ್ಲಹಳ್ಳಿ ಶಾಸನದಲ್ಲಿ ಬಜ್ಜವಾಡಿಯ ಕೆರೆಗೆ ಬಿತ್ತುಕಟ್ಟು ಬಿಟ್ಟದ್ದನ್ನು ಉಲ್ಲೇಖಿಸುತ್ತದೆ.[13] ಹೆಬಟಗ್ರಾಮದ ಶಾಸನದಲ್ಲಿ ಕೊಣ್ಡಲಗಾಮುಣ್ಡರ ಮಗಳನ್ಮಾರಿಯು ಮಾಡಿಸಿದ ತೂಮ್ಬು ಎಂದು ಹೇಳಿದೆ. ಈ ಶಾಸನದಲ್ಲಿ ಒಬ್ಬ ಮಹಿಳೆಯು ಕೆರೆಯೊಂದಕ್ಕೆ ತೂಬು ಮಾಡಿಸಿದ್ದನ್ನು ತಿಳಿಸುತ್ತದೆ.[14]

ಕೆರೆಹಳ್ಳಿ ಶಾಸನದಲ್ಲಿ ನೊಳಂಬನ ಪೆರ್ಗಡೆ ತ್ರಿಭುವನಯ್ಯ ಎಂಬುವವನು ಪೆರ್ಮಾಡಿಯನ್ನು ಒಲಗಿಸಿ ಸಿವಯ್ಯನ ಕೆರೆಗೆ ಬಿತ್ತುವಾಟ ಬಿಟ್ಟದ್ದನ್ನು ಹೇಳುತ್ತದೆ.[15] ಉತ್ತನೂರಿನ ಕ್ರಿ.ಶ. ೯೭೧ ರ ಶಾಸನದಲ್ಲಿ ಸಾಂಬಯ್ಯನು ಬಿದಿರೂರ ಕೆರೆಗೆ ಬಿತ್ತುಕಟ್ಟ ಬಿಟ್ಟ ಎಂಬುದನ್ನು ತಿಳಿಸುತ್ತದೆ.[16] ಕರ್ಷನಪಲ್ಲೆ ಶಾಸನದಲ್ಲಿ ಕೀರ್ತಿಗಾಮುಂಡನ ಮಗನಿಗೆ ಪಟ್ಟವನ್ನು ಕಟ್ಟಿ ಪುಲಿನಾಟ್ಟ ಕೆರೆಯ ಬೆಳಗಟೂರನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ.[17] ಆವನಿಯ ಕ್ರಿ.ಶ. ಸು. ೯೮೨ ರ ಶಾಸನದಲ್ಲಿ ಇಮ್ಮಡಿ ಪೊಳಲ್ಚೋರನ ಪತ್ನಿ ದೀವಳಬ್ಬರಸಿ ಕಟ್ಟಿಸಿದ ಕೆರೆಯ ವರ್ಣನೆಯನ್ನು ಈ ಶಾಸನದ ಕವಿ ಸೊಗಸಾಗಿ ಈ ಕೆಳಗಿನಂತೆ ವರ್ಣಿಸಿದ್ದಾನೆ.

ವಿದಿತಂ ಲೋಕಕ್ಕೆ ಮುನ್ನಂ ರಘುಕುಳದ ಹನೋಗ್ರಷುವಿಂಕಾಯ್ದು ತಿಣ್ಣಂ
ಕುದಿಗೊಣ್ಡಿೞ್ಕತ್ತಗಸ್ತ್ಯಂ ಕುಡಿಯುತುಗುೞ್ದಿನಿಂ ಕಟ್ಟು ಪಟ್ಟಿೞ್ದಿನ್ತ
ಪ್ಪುದು ಪೆಂಪಸ್ತಾಳ್ದಿತೆನ್ದನ್ದಱಿಯರೆಲವಣಾಂಭೋಧಿಯಂ ಪೋಲಿಸಲ್ವೇ
ಡಿದುವೆತ್ತಾನೆತ್ತಳೆಂಬನ್ತಿ ಬಹಳ ಜಳನ್ದೀವಳಬ್ಬಾ ಸಮುದ್ರಂ ॥

ಪದೆದಾಯಾಸಕ್ಕೆ ಪಕ್ಕಾಗಿರೆ ಗಡಪಿರಿದು ಭಾನ್ತಿನಿಂಪೋ . ದೊನ್ದ
ಬ್ಬದೊಳಿನ್ತೆನ್ತಾನುಮೆಯ್ದುತ್ತಿರದಮರನದೀ ಕಾನ್ತೆಯಂ ಕಾಣ್ಬರೀ ..
. ದೇಸರ್ಸಿಯ್ವಿದೇಂ ಸಂಭವಿಸಿತೋ ನಮಗಪ್ಪಟ್ಕಱಂಗಂಗೆ ತೆಂಕ
ಣ್ಗಿದಿರಂಬನ್ದಿೞ್ದದೆಂಬಂನ್ತಿ ಬಹಳ ಜಳನ್ದೀವಳಬ್ಬಾ ಸಮುದ್ರಂ ॥

ದೀವಬ್ಬರಸಿಯು ತನ್ನ ಹೆಸರಿನಲ್ಲಿ ದೀವಳಬ್ಬಾಸಮುದ್ರವೆಂಬ ತಟಾಕವನ್ನೂ, ತನ್ನ ಅಳಿದ ಹಿರಿಯ ಮಗನಾದ ಇಮ್ಮಡಿ ಮಹೇಂದ್ರನ ಹೆಸರಿನಲ್ಲಿ ಕೊಳವನ್ನು ಮಾಡಿಸಿ ದಾನ ಮಾಡಿದುದನ್ನು

ಈ ಶಾಸನ ತಿಳಿಸುತ್ತದೆ. ಈ ರೀತಿಯ ಪುಣ್ಯದ ಕೆಲಸ ಮಾಡಿದರೆ, ಅದರಿಂದ ಪುಣ್ಯದ ಫಲ ದೊರೆಯುವುದೆಂಬ ನಂಬಿಕೆ ಇದ್ದುದನ್ನು ಕಾಣಬಹುದು.[18]

ಹೆಬ್ಬಣಿಗ್ರಾಮದ ಶಾಸನದಲ್ಲಿ ಮುಮ್ಮಡಿ ಚೋಳನ ಪಟ್ಟ ಕಟ್ಟಿದ ೧೬ನೇ ವರ್ಷದಲ್ಲಿ ಘಂಟೆಯಂಕಕಾರ ನೊಳಂಬಾದಿರಾಜ ಮೊದಲಿದ್ದ ಪಿರಿಯಕೆರೆ ಹಾಳಾಗಿದ್ದು, ಅದನ್ನು ಜೀರ್ಣೋದ್ಧಾರ ಮಾಡಿದ ಮಣ್ಣೆಯ ಗಾವುಂಡನ ಮಗ ಪೃಥುವೀರಾವ ಸೆಟ್ಟಿಗೆ ಪೂರ್ವ ಸಿದ್ಧಾಯದಂತೆ ಹತ್ತು ಗದ್ಯಾಣ ಪೊನ್ನು ಮೂರು ಗಂಡುಗ ಭತ್ತದ ಗದ್ದೆಯನ್ನು ದಾನ ಮಾಡಿ ಎಲ್ಲಾ ಕಾಲಕ್ಕೂ ಬಿತ್ತುಕಟ್ಟು ನಡೆವುದು ಎಂದಿದೆ.[19] ಬಲ್ಲಕುಂದೆ ಗ್ರಾಮದ ಕ್ರಿ.ಶ. ೧೦೧೭ ರ ಶಾಸನದಲ್ಲಿ ಕೆರೆಯಿದ್ದ ಸ್ಥಿತಿಯನ್ನು ಹೇಳಿ ಆ ಕೆರೆಗೆ ಬಿತ್ತುವಟ ಬಿಟ್ಟದ್ದನ್ನು ಹೇಳಿದೆ.[20] ಬಾಗುಳಿಯ ಕ್ರಿ.ಶ.೧೦೧೮ ರ ಶಾಸನದಲ್ಲಿ ನಾರಣೊರ್ಝುರಕೆರೆ ಮತ್ತು ಶಂಕರೋರ್ಝುರ ಕೆರೆಯ ಉಲ್ಲೇಖವಿದ್ದು ಇವು ಬಿಕ್ಕಿನೆಳ್ವತ್ತರ ಪ್ರಾಂತ್ಯದಲ್ಲಿ ಇತ್ತೆಂದು ತಿಳಿಸುತ್ತದೆ. ಈ ಎರಡೂ ಕೆರೆಗಳನ್ನು ಕಟ್ಟಿಸಿದ ವ್ಯಕ್ತಿಗಳ ಹೆಸರಿನಲ್ಲಿಯೆ ಕೆರೆ ಪ್ರಸಿದ್ಧವಾಗಿರುವುದನ್ನು ತಿಳಿಯಬಹುದು.[21] ಮೊರಿಗೇರಿಯ ಕ್ರಿ.ಶ. ೧೦೪೬ ರ ಶಾಸನದಲ್ಲಿ ದೇವರಕೆರೆಯಲ್ಲಿದ್ದ ಕೆರೆಯ ಬಗ್ಗೆ ಹೇಳುತ್ತದೆ.[22] ದೊಡ್ಡಬಾಣಗೆರೆಯ ಕ್ರಿ.ಶ. ೧೦೭೩ ರ ಶಾಸನದಲ್ಲಿ ಬಾಣಗೆರೆಯ ಕೆರೆಗೆ ಬಿತ್ತುವಟ್ಟವನ್ನು ಚೆಲ್ಲುಕ ಗಾವುಂಡನಿಗೆ ಮತ್ತು ಇದನ್ನು ಕಟ್ಟಿದ ಚೆಲ್ಲುಕ ಬೋವನಿಗೆ ಬಿತ್ತುವಾಟದಲ್ಲಿ ಕೆಲವು ಪಾಲನ್ನು ಬಿಟ್ಟಿರುವುದನ್ನು ಹೇಳುತ್ತದೆ. ಅಲ್ಲದೆ ಈ ಚೆಲ್ಲುಕ ಭಟಾರನು ಐದು ಕೆರೆಗಳನ್ನು ಕಟ್ಟಿಸಿ ಅವುಗಳ ನಿರ್ವಹಣೆಗೆ ತಕ್ಕ ಏರ್ಪಾಡುಗಳನ್ನು ಮಾಡಿದಂತೆ ತಿಳಿಸುತ್ತದೆ.[23] ಈ ಶಾಸನದಲ್ಲಿ ಗಾವುಂಡನಿಗೆ ಮತ್ತು ಕೆರೆಯನ್ನು ಕಟ್ಟಿದವನಿಗೂ ಬಿತ್ತುವಾಟವಾಟದಲ್ಲಿ ಕೆಲವು ಪಾಲನ್ನು ದಾನ ಮಾಡಿರುವುದನ್ನು ನೋಡುತ್ತೇವೆ. ಚೆಲ್ಲುಕ ಭಟಾರನೆಂಬುವವನು ಬಹುಶಃ ಅಲ್ಲಿಯ ಸ್ಥಾನಪತಿಯಾಗಿದ್ದು ಐದು ಕೆರೆಗಳನ್ನು ಕಟ್ಟಿಸಿ ಅವುಗಳ ನಿರ್ವಹಣೆಗೆ ತಕ್ಕ ಏರ್ಪಾಡು ಮಾಡಿರುವುದನ್ನು ನೋಡಿದರೆ ಜನೋಪಕಾರಿ ಕೆಲಸಗಳ ಬಗ್ಗೆ ಎಷ್ಟು ಮುತುವರ್ಜಿ ವಹಿಸುತ್ತಿದ್ದರೆಂದು ತಿಳಿಯುತ್ತದೆ. ಹುಲೇಗುಂದಿಯ ಇದೇ ಕಾಲದ ಶಾಸನದಲ್ಲಿ ಕೆರೆಯೂರ ಮಂಗಿ ಏಚಯ್ಯನು ಕೆರೆಯೊಂದನ್ನು ಕಟ್ಟಿಸಿ ಆ ಕೆರೆಯಲ್ಲಿ ಬರುವ ಆದಾಯದಲ್ಲಿ ಸೂಳ್ಗಲ್ಲಿನ ಭೀಮೇಶ್ವರ ದೇವರಿಗೆ ಭೂದಾನ ಮಾಡಿರುವುದನ್ನು ತಿಳಿಸುತ್ತದೆ.[24]

ತಳಕಲ್ಲುವಿನ ಕ್ರಿ.ಶ. ೧೦೫೨ ರ ಶಾಸನದಲ್ಲಿ ತ್ರೈಲೋಕ್ಯಮಲ್ಲ ನೊಳಂಬನು ಆಳುತ್ತಿರುವಾಗ ತೊಣಕಲಿಯೂರ ಚಾಮುಂಡಯ್ಯನು ಗುಂಡಿ[ಗೆರೆ]ಯ ಕೆರೆಯು ಅನೇಕ ವರ್ಷಗಳ ಕಾಲ ಭಂಗವಾದಾಗ ಆ ಕೆರೆಯನ್ನು ಕಟ್ಟಿಸಿದನೆಂದು ಹೇಳುತ್ತದೆ.[25] ಅಂದರೆ ಈ ಕೆರೆಯಲ್ಲಿ ಹೂಳು ತುಂಬಿಕೊಂಡು ಊರಿನ ಉಪಯೊಗಕ್ಕೆ ಬಾರದೆ ಇರುವಾಗ, ಈ ಚಾಮುಂಡಯ್ಯನು ಅದನ್ನು ಜೀರ್ಣೋದ್ಧಾರ ಮಾಡಿಸಿರುವುದನ್ನು ತಿಳಿಸುತ್ತದೆ. ಅಸಗೋಡುವಿನ ಕ್ರಿ.ಶ. ೧೦೫೪ ರ

ಶಾಸನದಲ್ಲಿ ಚರ್ವ್ವನಕೆರೆ, ಗನ್ನನಕೆರೆ, ಗದಿಗನಕೆರೆ, ಪಿರಿಯಕೆರೆ ಮತ್ತು ಕುಂಟೆಯ ಉಲ್ಲೇಖ ಬರುತ್ತದೆ. ಅಂದರೆ ಕೆರೆಗಳ ಜೊತೆ ಕುಂಟೆಗಳೂ ಜನರಿಗೆ ಉಪಯೋಗವಾಗುತ್ತಿದ್ದುದನ್ನು ಇದರಿಂದ ತಿಳಿಯಬಹುದು.[26] ಉಚ್ಚಂಗಿದುರ್ಗದ ಕ್ರಿ.ಶ. ೧೦೭೦ ರ ಶಾಸನದಲ್ಲಿ ನೊಳಂಬಪಲ್ಲವ ಪೆರ್ಮಾಡಿ ಜಯಸಿಂಘದೇವನು ಉಚ್ಚಂಗಿ ಕೋಟೆಯ ಮೇಗಣ ತ್ರೈಲೇಶ್ವರದೇವರ ಭೋಗಕ್ಕೆ ಗಂಟಿಗನ ಕೆರೆಯನ್ನು ದತ್ತಿಯಾಗಿ ಬಿಟ್ಟದ್ದನ್ನು ತಿಳಿಸುತ್ತದೆ. ಮತ್ತು ಈತನ ಸಾಮಂತ ದಾಮಪಯ್ಯ ಎಂಬುವವನು ಸಹ ದೇವರಿಗೆ ಭೂದಾನ ಮಾಡಿರುವುದನ್ನು ಈ ಶಾಸನ ತಿಳಿಸುತ್ತದೆ.[27]

ಮೊರಬದ ಕ್ರಿ.ಶ.೧೦೬೭ ರ ಶಾಸನದಲ್ಲಿ ಹೇರಿಲಾಳ ಕನ್ನಡಸನ್ಧಿವಿಗ್ರಹಿ ಸಂಖರಯ್ಯ ನಾಯಕ ಮತ್ತು ದಂಡನಾಯಕ ಮಧುವಪಯ್ಯನಾಯಕರ ಬಿನ್ನಪದಿಂದ ಬೆಳವಲನಾಡ ಬಳಿಯ ಮೊರಬದ ೧೨ ಜನ ಗಾವುಂಡಗಳು ಊರ ಪಡುವಣ ಪಿರಿಯ ಕೆರೆಗೆ ನೊಳಂಬಸಮುದ್ರಮೆಂಬ ಪೆಸರಂ ಕೊಟ್ಟು ಪರಮೇಶ್ವರ ದತ್ತಿಯಾಗಿ ಭೂದಾನ ಮಾಡಿರುವುದನ್ನು ತಿಳಿಸುತ್ತದೆ.[28] ಕಂದವರದ ಇದೇ ಕಾಲದ ಶಾಸನದಲ್ಲಿ 'ಕೆರೆಗೀಬಿಟ್ಟಗದ್ಯಣದ' ಎಂಬ ಉಲ್ಲೇಖವಿದೆ.[29]

ಬನ್ನಿಯೂರ ಕ್ರಿ.ಶ. ೧೦೮೦ ರ ಶಾಸನದಲ್ಲಿ ಆ ಅಗ್ರಹಾರದ ಕೆರೆಯು ಪದೇ ಪದೇ ಒಡೆದು ಹೋಗಿ ಅದನ್ನು ದುರಸ್ತಿ ಮಾಡಿಸುವುದು ಊರಿನ ಜನರಿಗೆ ಅಸಾಧ್ಯವಾಗಿ ಕಾಣಿಸಿರಬೇಕು. ಅಂತಹ ಸಮಯದಲ್ಲಿ ಆ ಊರಿನ ಮಹಾಜನರೆಲ್ಲಾ ಒಟ್ಟಾಗಿ ರಾಜನ ಬಳಿಗೆ ಹೋಗಿ ಈ ರೀತಿ ತಮ್ಮ ಬೇಡಿಕೆಯನ್ನು ಮುಂದಿಡುತ್ತಾರೆ. ಅರಸನೇ ಹಿಂದಿನ ಹಲವು ರಾಜರು ಎಷ್ಟೊ ಸಾರಿ ಕಟ್ಟಿಸಿದರೂ ಅದು ನಿಲ್ಲಲಿಲ್ಲ. ಆ ಕೆರೆ ನಿಲ್ಲಬೇಕಾದರೆ ಧರ್ಮರಾಜನಾದ ನಿನ್ನ ಹೆಸರಿನಲ್ಲಿ ಕಟ್ಟಿಸಬೇಕು. ಊರಿನ ಜನರು ಸುಖವಾಗಿದ್ದರೆ ಆ ಪುಣ್ಯ ನಿನಗೆ ಬರುತ್ತದೆ ಎಂದು ತಮ್ಮ ಅಹವಾಲನ್ನು ಮಂಡಿಸುತ್ತಾರೆ. ಆಗ . . ಅದೇನು ಮಹಾ ಎಂದು ಜಕ್ಕಗೋಸಿ ಎಂಬುವವನನ್ನು ಕರೆದು ಅವನ ಕೈಯಲ್ಲಿ ಹಣವನ್ನು ಕೊಟ್ಟು ಕೆರೆಯನ್ನು ಕಟ್ಟಿಸಿ ಅದಕ್ಕೆ `ತುಂಬ ಸಮುದ್ರ'ವೆಂದು ಹೆಸರಿಡುತ್ತಾನೆ.[30] ಈ ಶಾಸನದಿಂದ ಜನಗಳಿಗೂ ಮತ್ತು ರಾಜನಿಗೂ ನಡುವಿನ ನಿಕಟ ಸಂಬಂಧವನ್ನು ಸೂಚಿಸುತ್ತಿದ್ದು ತಮ್ಮ ಕಷ್ಟ-ಸುಖಗಳನ್ನು ರಾಜನ ಹತ್ತಿರ ಹೇಳಿಕೊಂಡು ತಮ್ಮ ಸಮಸ್ಯೆಯನ್ನು ಬಗೆಹರಿಸಿಕೊಳ್ಳುತ್ತಿದ್ದರೆಂದು ತಿಳಿಯಬಹುದಾಗಿದೆ. ಕುರ್ತುಕೋಟಿಯ ಕ್ರಿ.ಶ. ೧೦೮೨ ರ ಶಾಸನದಲ್ಲಿ ಬೀರನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಗದೇವನು ಆಳುತ್ತಿದ್ದಾಗ ಆ ಊರಿನ ಪ್ರಮುಖ ೨೦೦ ಮಹಾಜನರು ಮತ್ತು ಮನೆವೆರ್ಗ್ಗಡೆ ದಂಡನಾಯಕ ವಾಮದೇವಯ್ಯನು ಧಾರಾಪೂರ್ವಕವಾಗಿ 'ಕಡಲಗೆಱೆಗೆ ಪೂರ್ವದೊಳ್ನಡೆವ ದಣ್ಡದೋಷ . . ಕೊಳ ಜೋಳಮುಮಂ ಪುನರ್ದತ್ತಿಮಾಡಿ ಬಿಟ್ಟು ಇಱದೆಡೆ ಪನ್ನೆರಡು ಪಣಂ ಕಟ್ಟಿ ಬನ್ದು ಪೊಯ್ದುಡಾಱು ಪಣಮು ದಂಡಂ ನೆಱೆ ಬಯ್ದಡೆ ಮೂಱು ಪಣಂ ಕಱೆದನ್ದುಂ ದಣ್ಡಮಾಗಿ ನಡೆವುದು ನಿಯತ ಎನಿತೊನ್ದು ಕೊಳಧಾನ್ಯಮವನಿತುಂ ತಱೆಯಿ ... ವಾರಿಧಿಯಂ ದಿಕ್ಕರಿಸುವದೆನೆ ನೆಗೞ್ದೀ ಕಡಲೆಗೆಱೆಗೆ

ನಡೆವುದೆದೆನ್ದುಂ' ದಾನವಾಗಿ ನಾಲ್ಕು ಗೇಣಕೋಲೊಳ್ಬಿಟ್ಟ ಅಳತೆಕೋಲಿನಿಂದ ಅಳೆದು ಭೂದಾನ ಮಾಡಿ, ದ್ರವ್ಯವನ್ನು ಕೊಟ್ಟು 'ಪ್ರತಿಪಾಳಿಸುವರಾ ತಟಾಕಮಂ' ರಕ್ಷಿಸುವಂತೆ ಹೇಳಿದೆ. ಈ ಶಾಸನದಲ್ಲಿ ಕೆರೆಯನ್ನು ರಕ್ಷಿಸುವವರಿಗೆ ಮತ್ತು ಹಾಳು ಮಾಡಬಯಸಿದವರಿಗೆ ದಂಡ ಹಾಕಿ ಶಿಕ್ಷೆಗೆ ಅಂತಹವರು ಅರ್ಹರಾಗುತ್ತಾರೆಂದು ವಿಧಿ ಮತ್ತು ನಿಷೇಧ ಹೇರಿರುವುದನ್ನು ತಿಳಿಸುತ್ತದೆ. ಭೂದಾನವನ್ನು ದ್ರವ್ಯದಾನ ಮಾಡಿದವರನ್ನು ಆ ತಟಾಕವೇ ರಕ್ಷಿಸುವುದೆಂದು ಹೇಳಿದೆ. ಈ ಶಾಸನವನ್ನು ರಚಿಸಿದ ಕವಿ ಕಡಲಗೆರೆಯನ್ನು ಸುಂದರವಾಗಿ ಮತ್ತು ಕಾವ್ಯಮಯವನ್ನಾಗಿ ನಿರೂಪಿಸಿದ್ದಾನೆ.

ಅತಿಮಧುರಂ ಪ್ರಸನ್ನ ಕವಿ ನಿರ್ಮ್ಮಿಸಿದುನ್ನತ
ಕಾವ್ಯದನ್ತ ಸನ್ತಮತಿ ನಿರ್ಮ್ಮಳಂ ಪೆಱನೆ
ನ್ದುಮಪೇಕ್ಷಿಸುತಿರ್ಪ್ಪನನ್ತ ತಾನತಿ ಲಘುವೆನ್ನ
ದೀ ಚಣಕದುದ್ಗ ತಟಾಕಮನಾರೊ ಬಣ್ಣಿಸರ್ ॥

ಬಾಱಸಮೂರ್ತಿ ಸೋಮ ಕಳೆಯನ್ದದೆ ಸೋಭಿಸುತಿರ್ಪ್ಪುದೀ ಜಗ
ತ್ಪಾವನಮಂಬುಜೋದರ ಪಯೋನಿಧಿಯನ್ತೆ ತೀವಿಸೇ
ವ್ಯಾವಹಮಾಗಿ ರಂಜಿಪುದು ಜೀವನುಂ ನರಜೀವರಾಸಿಗಳ್ಗೀ
ವಪುವೆಂದತುನ್ನತಿಯ ನಾರ್ಪ್ಪುಗಳರ್ದ್ಧರಣೀತಳಾಗ್ರದೊಳ್ ॥

ಪೊಡವಿಪತಿ ಕಾವೇರಿಯ
ತಡಿಯೊಳ್ಬಿಟ್ಟಿರ್ದ್ದ ತನ್ನದೀ ಜಳಮುಮನೀ
ಕಡಲಗೆಱೆಯಮೃತ ಜಳಮುಮ
ನೋಡಮೊಯ್ಕನೆ ತೂಗಿ ನೋರ್ಪ್ಪನಭಿವರ್ಣ್ಣಿಸಿದ ॥

ರಂಗತ್ತರಂಗಮಾಳಾ
ಭಂಗರದಿನ್ದೆಸೆವ ಕಡಲಗೆಱೆನೋರ್ಪ ಜನ
ಕ್ಕಿಂಗಡಲಂ ದಿಕ್ಕರಿಪುದ
ದಂ ಗಡ ಪೊಗಳಲ್ಕೆ ಕಮಳ ಭವನಂ ನೆಱೆಯ ॥

ಕವಿಯ ಕಾವ್ಯ ಸೌಂದರ್ಯದ ಜೊತೆಗೆ ಅನೇಕ ಜನರಿಗೆ ಜೀವನಾಧಾರವಾಗಿರುವ ಕೆರೆಯ ಬಗೆಗಿರುವ ಕೃತಜ್ಞತೆಯನ್ನು ಕವಿ ಅಭಿವ್ಯಕ್ತಿಸಿದ್ದಾನೆ. ಈ ಶಾಸನದಲ್ಲಿ ಈ ಕೆರೆಯನ್ನು ರಕ್ಷಿಸಿದರೆ ಬರುವ ಪುಣ್ಯದ ವರ್ಣನೆಯನ್ನು ವಾರಣಾಸಿ, ಕುರುಕ್ಷೇತ್ರ, ಪ್ರಯಾಗ ತೀರ್ಥ, ಗಂಗೆ ಗಂಗಾಸಾಗರ ಶ್ರೀಪರ್ವ್ವತಮೆಂಬ ಪುಣ್ಯತೀರ್ಥಗಳಲ್ಲಿ ಸಾವಿರ ಕವಿಲೆಯ ಕೋಡು ಕೊಳಗ ಪಂಚರತ್ನಂಗಳಲ್ಲಿ ಕಟ್ಟಿಸಿ ಮಹಾರಿತ್ವಿಜರ್ಗ್ಗುಭಯಮುಖಿಗೊಟ್ಟ ಫಲ ಸಿಕ್ಕುವುದೆಂದು, ಇದನ್ನು ಹಾಳು ಮಾಡಿದವನಿಗೆ ನರಕವೆಂಬ ಪಂಚಮಹಾಪಾತಕ ಸಿಕ್ಕಲಿ ಎಂಬ ಶಾಪದ ಬಗ್ಗೆಯೂ ಹೇಳಿದೆ.[31]

## ಧರ್ಮದೇತಗಳು

ಮಾನವನ ಹಾಗು ಪಶು, ಪಕ್ಷಿಗಳ ಉಪಯೋಗಕ್ಕಾಗಿ ಸರ್ವ ಕಾಲದಲ್ಲಿಯೂ ನೀರು ಸಿಗುವಂತೆ ಬಾವಿಗಳನ್ನು ತೋಡಿ ಅಂತರ್ಜಲವನ್ನು ಮೇಲಕ್ಕೆತ್ತಿ ಅದನ್ನು ಬಳಸುತ್ತಿದ್ದರು. ಈ ಪದ್ಧತಿ ಅಶೋಕನ ಕಾಲದಿಂದಲೂ ಮುಂದುವರಿದಿರುವುದು ಶಾಸನಗಳಲ್ಲಿ ಉಕ್ತವಾಗಿದೆ. ಈ ಕಾರ್ಯವನ್ನು ಸಾರ್ವಜನಿಕರ ಉಪಯೋಗಕ್ಕಾಗಿ ಮಾಡಿದಾಗ ಅದು ಧರ್ಮದ ಕಾರ್ಯವಾಗುತ್ತಿತ್ತು. ಭೂಮಿಯಲ್ಲಿ ತೋಡಿದ ಬಾವಿಯಿಂದ ನೀರನ್ನು ಪಡೆಯಲು ಮೆಟ್ಟಿಲುಗಳನ್ನು ಇಡಬೇಕಾಗುತ್ತಿತ್ತು. ಮೆಟ್ಟಿಲುಗಳಿಲ್ಲದ ಕಡೆ ನೀಗನ್ನು ಮೇಲಕ್ಕೆ ಸೇದಿಕೊಳ್ಳಲು ಏತಗಳನ್ನು ಅಳವಡಿಸುತ್ತಿದ್ದರು. ಬಾವಿಯಿಂದ ನೀರನ್ನು ಮೇಲೆತ್ತಿ ಸಾರ್ವಜನಿಕರು ಉಪಂಯೋಗಿಸಿಕೊಳ್ಳಲು ಅನುಕೂಲ ಮಾಡಿಕೊಟ್ಟಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ನೊಳಂಬರ ಕಾಲದಲ್ಲಿಯೂ ಇಂತಹ ಧರ್ಮದೇತಗಳ ಬಳಕೆಯಾಗುತ್ತಿದ್ದುದು ಶಾಸನಗಳಿಂದ ತಿಳಿಯುತ್ತದೆ.

ಸಿಂದಿಗೆರೆಗ್ರಾಮದ ಕ್ರಿ.ಶ.ಸು. ೧೦೪೫ ರ ಶಾಸನದಲ್ಲಿ ತ್ರೈಳೊಕ್ಯಮಲ್ಲ ಇಱುವ ನೊಳಂಬ ನಾರಸಿಂಘದೇವನ ಕಾಲದಲ್ಲಿ ವೈದುಂಬ ವಂಶದ ಮಣಿಬೇತ ಮಹಾರಾಜನು ಬಲ್ಲಕುಂದೆ ಮೂನೂಱಱೊಳಗಣ ಪಟ್ಟಣದಲ್ಲಿ ಧರ್ಮದೇತಕ್ಕೆ ಬಿಟ್ಟ ಮತ್ತರು ಪನ್ನೆರಡು ಎಂದು ಹೇಳಿದೆ.[32] ಬದನೆಹಾಳುಗ್ರಾಮದ ಕ್ರಿ.ಶ.೧೦೫೫ ರ ಶಾಸನದಲ್ಲಿ ವೀರನೊಳಂಬ ಪಲ್ಲವಪೆರ್ಮಾನಡಿಗಳ ಕಾಲದಲ್ಲಿ ಪೆರ್ಗ್ಗಡೆ ವೀರರಾಕ್ಷಸ ಹಿರಾಯನ ಬಿನ್ನಪದಿಂದ ಕವತಾಳು ಪನ್ನೆರಡಱ ಬಳಿಯ ನೇಱಿಲ ಬದಲಪಾಳ 'ಧರ್ಮದೇತದ' ಬಾವಿವರದಕ್ಕಂ ಬಿಟ್ಟ ಭೂದಾನದ ಉಲ್ಲೇಖವಿದೆ.

## ಅಗ್ರಹಾರ

ಪ್ರಾಚೀನ ಕರ್ನಾಟಕದ ಶಾಸನಗಳಲ್ಲಿ ಗುರುಕುಲ ಪದ್ಧತಿಯ ಬಗ್ಗೆ ಉಲ್ಲೇಖ ಕಾಣಬರುವುದಿಲ್ಲ. ಆದರೆ ಗುರುಕುಲ ಪದ್ಧತಿ ಇರಲಿಲ್ಲವೆಂದು ಹೇಳಲಾಗುವುದಿಲ್ಲ. ರಾಜರು ಅಗ್ರಾಹಾರಗಳನ್ನು ದಾನ ಮಾಡುತ್ತಿದ್ದರು. ಆ ಅಗ್ರಹಾರದ ಉತ್ಪತ್ತಿ ಅಲ್ಲಿನ ಬಾಹ್ಮಣರಿಗೆ ಸಲ್ಲುತ್ತಿತ್ತು. ವಿದ್ಯಾಭ್ಯಾಸದ ಹೊಣೆಯನ್ನು ನೇರವಾಗಿ ಅಗ್ರಹಾರಗಳು ಹೊರುತ್ತಿರಲಿಲ್ಲವಾದರೂ ಅಲ್ಲಿನ ಬ್ರಾಹ್ಮಣರು ವಿದ್ಯಾದಾನಕ್ಕೆ ತಮ್ಮ ಗಮನ ಹರಿಸಲು ಸಾಧ್ಯವಾಗುತ್ತಿತ್ತು. ಅಲ್ಲದೆ ಅಗ್ರಹಾರಗಳಲ್ಲಿ ವಿದ್ಯಾಭ್ಯಾಸಕ್ಕಾಗಿ ಬಂದವರಿಗೆ ಆ ಊರಿನ ಜನತೆ ದಾನ-ದತ್ತಿಗಳನ್ನು ನೀಡಿ ವಿದ್ಯೆಗೆ ಪ್ರೋತ್ಸಾಹ ಕೊಡುತ್ತಿದ್ದರೆಂಬುದು ಶಾಸನಗಳಿಂದ ತಿಳಿದುಬರುತ್ತದೆ.

ವಿದ್ಯಾದಾನಕ್ಕೆಂದು ಪ್ರತ್ಯೇಕವಾದ ವಿದ್ಯಾಕೇಂದ್ರದ ಹೆಸರನ್ನು ಹೇಳುವುದಿಲ್ಲವಾದರೂ ಅಗ್ರಹಾರ, ಮಠ, ದೇವಸ್ಥಾನ, ಬ್ರಹ್ಮಪುರಿ, ಘಟಿಕಾಸ್ಥಾನಗಳ ಹೆಸರನ್ನು ಹೆಸರಿಸಿದ್ದು ಅಲ್ಲಿ ಕಲಿಯುವ ವಿದ್ಯಾರ್ಥಿಗಳಿಗೆ ಆಹಾರದಾನ ಮುಂತಾದವುಗಳಿಗೆ ದಾನ ನೀಡಿರುವುದನ್ನು ಶಾಸನಗಳು ಹೇಳುತ್ತವೆ.

ಕೆಲವು ಅಗ್ರಹಾರಗಳನ್ನು ಅನಾದಿ ಅಗ್ರಹಾರಗಳೆಂದು ಶಾಸನಗಳು ಉಲ್ಲೇಖಿಸಿವೆ. ಡಾ। ಎಂ. ಚಿದಾನಂದಮೂರ್ತಿಯವರು ಈ ಬಗ್ಗೆ ಒಂದು ಊರನ್ನು ಬಹು ಹಿಂದೆಯೆ ಒಬ್ಬ ರಾಜನು ಕೆಲವು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟಿರುವುದಾಗಿ ಭಾವಿಸೋಣ. ಬಹಳ ಕಾಲವಾದ ಮೇಲೆ ದಾನವನ್ನು ಕೊಟ್ಟ ರಾಜನ ಹೆಸರು ಮರೆತು ಹೋಗುವುದು ಸಹಜ. ಅಂತಹ ಸಮಯಗಳಲ್ಲಿ ಆ ಊರನ್ನು 'ಶ್ರೀಮದನಾದಿ ಅಗ್ರಹಾರವೆಂದು' ಕರೆಯುತ್ತಾರೆ ಎಂದಿದ್ದಾರೆ. ಆದರೆ ಇದು ಅನಾದಿ ಅಗ್ರಹಾರವೆಂಬ ಬಗ್ಗೆ ಈ ಅಭಿಪ್ರಾಯಕ್ಕಿಂತ ಭಿನ್ನವಾಗಿ ಯೋಚಿಸುದುವುದು ಸೂಕ್ತ. ಸಾಮಾನ್ಯವಾಗಿ ದಾನ ಪಡೆಯುವ ವ್ಯಕ್ತಿ ಶಾಸನವನ್ನು ರಚಿಸುವಾಗ ಅನಾದಿ ಅಗ್ರಹಾರವೆಂದು ಸೇರಿಸುತ್ತಿದ್ದರು. ಹೀಗಾಗಿ ಇದು ಪ್ರಾಚೀನ ಕಾಲದಿಂದಲೂ ಅಗ್ರಹಾರವೇ ಆಗಬೇಕೆಂದಿಲ್ಲ. ಅಂತಹ ಅಗ್ರಹಾರಗಳ ಉಲ್ಲೇಖಗಳು ನೊಳಂಬರ ಕಾಲದ ಶಾಸನಗಳಲ್ಲಿ ಸಿಕ್ಕುತ್ತವೆ. ಹಿರೇಹಡಗಲಿಯ ಕ್ರಿ.ಶ. ೮೯೪ ರ ಶಾಸನದಲ್ಲಿ 'ಶ್ರೀಮದನಾದಿಯಗ್ರಹಾರ'ದ ಉಲ್ಲೇಖವಿದೆ. ಈ ಪ್ರದೇಶವನ್ನು ನೊಳಂಬ ಮಹೇಂದ್ರನು ಆಳ್ವಿಕೆ ಮಾಡುತ್ತಿದ್ದ.[33] ಅನೇಕ ಗ್ರಾಮಗಳನ್ನು ತಮ್ಮ ಹೆಸರಿನಲ್ಲಿ ಅಥವಾ ತಮ್ಮ ಹಿರಿಯರ ಹೆಸರಿನಲ್ಲಿ ಅಗ್ರಹಾರವನ್ನಾಗಿ ಅಥವಾ ಪುರವಾಗಿ ಮಾರ್ಪಡಿಸಿ ಅದನ್ನು ಬ್ರಾಹ್ಮಣರಿಗೆ ದಾನ ನೀಡುತ್ತಿದ್ದರು. ಕೆಲವು ವೇಳೆ ನಕರರಿಗೂ (ವ್ಯಾಪಾರಿಗಳು) ಊರುಗಳನ್ನು ದಾನ ನೀಡಿರುವುದುಂಟು. ಈ ಬಗೆಯ ಗ್ರಾಮಗಳಿಗೆ ತೆರಿಗೆ ಇರುತ್ತಿರಲಿಲ್ಲ. ನೊಳಂಬರ ಕಾಲದಲ್ಲಿ ಊರುಗಳನ್ನು ಅಗ್ರಹಾರವಾಗಿ ಮಾರ್ಪಡಿಸುವಾಗ ಊರಿನ ಹೆಸರಿನ ಜೊತೆಗೆ 'ಮಂಗಲ' ಎಂಬ ವಿಶೇಷಣವನ್ನು ಸೇರಿಸುತ್ತಿದ್ದರು. ಮಂಗಲವೆಂದರೆ ಅಗ್ರಹಾರ ಎಂದರ್ಥ. ನೊಳಂಬರ ಶಾಸನದಲ್ಲಿ ಪೊಱರಮಂಗಲ, ಮೆಣ್ಡಿಮಂಗಲ, ನರಸಿಂಗಮಂಗಲ, ಪ್ರಭುರಾಮ-ಮಂಗಲ ಪುಲ್ಲಿಮಂಗಲ, ಐಯ್ಯಪಮಂಗಲ, ಎರೆಯಪಮಂಗಲ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು.

## ಮಠ

ಅಗ್ರಹಾರಗಳ ಮಾದರಿಯಲ್ಲಿಯೆ ಬೆಳೆದು ಬಂದ ಮಠಗಳಲ್ಲಿಯೂ ವಿದ್ಯಾದಾನ ನಡೆಯುತ್ತಿತ್ತು. ವಿದ್ಯಾಗಾನಕ್ಕೆಂದು ಆ ಸ್ಥಳದ ನೈಷ್ಠಿಕ ಬ್ರಹ್ಮಚಾರಿ ತಪೋಧನರಿಗೆ ದಾನ ನೀಡಿರುವುದು ಶಾಸನಗಳಲ್ಲಿ ಉಲ್ಲೇಖವಾಗಿದೆ. ಬರಗೂರಿನಲ್ಲಿಯೂ ಒಂದು ಶಿಕ್ಷಣ ಸಂಸ್ಥೆಯಿದ್ದು, ಇಲ್ಲಿ ಬ್ರಹ್ಮಚಾರಿಗಳಾದವರು ವಿದ್ಯೆ ಕಲಿಯಬಹುದಿತ್ತು. ಮತ್ತು ಅಲ್ಲಿನ ಆಚಾರ್ಯರು ಬ್ರಹ್ಮಚಾರಿಗಳಾಗಿಯೇ ಇರಬೇಕೆಂಬ ನಿಯಮವಿದ್ದಂತೆ ತಿಳಿಯುತ್ತದೆ. ಕ್ರಿ.ಶ.೮೭೮ ರ ಶಾಸನದಲ್ಲಿ 'ಬಹ್ಮಚಾರಿಯಪ್ಪುದು ಬ್ರಹ್ಮಚಾರಿಯಲ್ಲಿದಾಹ್ವಮಠಪತಿಯು ಮಾತನಾಳಿಸಿದರಸರುಂ ನಾಡು ಮೂರು ಕೊತ್ತಟಿಯು ಮಯ್ದುಂ ಪಾತಕಙ್ಗಳ ಫಲಮನೆಯ್ದುವರ್ ಮಾತಿಗೆ ತಪ್ಪಿ ನಡೆದವರು ಐದು ಮಹಾ ಪಾತಕಗಳನ್ನು ಅನುಭವಿಸುವರು ಎಂದಿದೆ.[34] ಸೋಮಭಟಾರ, ವಿಮಳಮತಿಭಟ್ಟಾರಕ, ಲಕುಲೀಶ, ವರುಣಶಿವಭಟಾರರು, ಅನನ್ತಶಿವದೇವ ಮುಂತಾದ ಆಚಾರ್ಯರ ಹೆಸರುಗಳು

ಪ್ರಸಿದ್ಧವಾಗಿವೆ. ಈ ಶಾಸನದಿಂದ ಮಠದ ಬಹ್ಮಚಾರಿಗಳಿಗೆ ಇದ್ದ ವಿಧಿ, ನಿಷೇಧಗಳ ಬಗ್ಗೆ ತಿಳಿಯುತ್ತದೆ.

ಕ್ರಿ.ಶ. ೯೧೯ ರ ಶಾಸನದಲ್ಲಿ ಪೆಂಜೇಱುವಿನಲ್ಲಿ ಪಂಚಮಠ ಸ್ಥಾನವಿದ್ದು 'ಮಹಾನಖರ - ಮಸಕಿಯಾಗಿ' ವ್ಯಾಪಾರಿಗಳ ಸಾಕ್ಷಿಯಾಗಿ ಬರಗೂರ ಮಹೇಸ್ವ್ರೇಶ್ವರದೊಳಗೆ ದಾನ ಕೊಟ್ಟಿದ್ದನ್ನು ಹೇಳುತ್ತದೆ. ಕ್ರಿ.ಶ. ೧೦೧೧ ರ ಆಲೂರಿನ ಶಾಸನ ' ಶ್ರೀಪುರದ ಗುಹೆಯ ಮಠದ ಅಮರಾಚಾರ್ಯ ಭಟ್ಟಾರಕರ್ಗ್ಗೆ ಪಾದ ಪ್ರಕ್ಷಾಳನಮುಂ ಪ್ರೂರ್ವಕಂ ನೂರು ಮತ್ತರ್ಕ್ಕೆಯುಮಂ ಮಠಾಪಿಮಂ ಊಡಿಸಿ ಮಠಕ್ಕೆ ವಿದ್ಯಾದಾನವಾಗೆ ಪನ್ನೀರವರ್ ಬ್ರಾಹ್ಮಣರಿಗೆ ಆರುವರ್ ತಪೋಧರ್ನರ್ಗೆ[35] ದಾನ ಕೊಟ್ಟಿರುವುದನ್ನು ತಿಳಿಸುತ್ತದೆ. ಕ್ರಿ.ಶ.ಸು. ೧೦೧೮ ರ ತುಂಬಿಗೆರೆಯ ಶಾಸನದಲ್ಲಿ ಅದೇ ಊರಿನ ಮಠದ ನೈಷ್ಠಿಕ ತಪೋಧನರಿಗೆ ಭೂದಾನ ನೀಡಿದ ಉಲ್ಲೇಖವಿದೆ.[36] ತಲವಾಗಿಲಿನ ಕ್ರಿ.ಶ. ೧೦೩೪ ರ ಶಾಸನದಲ್ಲಿ ಮತ್ತರೆಂಟು ಮಟಕ್ಕೆ ದಾನ ನೀಡಿರುವುದು[37] ತಿಳಿಯುತ್ತದೆ. ಕ್ರಿ.ಶ.೧೦೩೮ ರ ಸೋಗಿಯ ಶಾಸನದಲ್ಲಿ ವಿದ್ಯಾದಾನಕ್ಕೆಂದು ಮಠಕ್ಕೆ ಬಿಟ್ಟ ಭೂದಾನದ[38] ಉಲ್ಲೇಖವಿದೆ.

ಕ್ರಿ.ಶ. ೧೦೪೫ ರ ಶಾಸನದಲ್ಲಿ ನಕರ ಮಹಾಜನ ಗಾವುಣ್ಡಗಳ ಹೆಸರು ಮತ್ತು ಪಂಚಮಟ ಸ್ಥಾನವನ್ನು ಹೆಸರಿಸಿದೆ. ಇದೇ ಕಾಲದ ಮತ್ತೊಂದು ಶಾಸನದಲ್ಲಿ ವಿದ್ಯಾದಾನಕ್ಕೆಂದು ಅರಸನಿಂದ ಸವಂಟಿಯ ಪಾಳನ್ನು ಪಡೆದು ಅದಕ್ಕೆ ಶಿವಪುರವೆಂದು ಹೆಸರಿಟ್ಟ[39] ಉಲ್ಲೇಖವಿದೆ. ಕ್ರಿ.ಶ.೧೦೪೬ ರ ಶಾಸನದಲ್ಲಿ ಮಠದ ವಿದ್ಯಾದಾನಕ್ಕೆಂದು ಅರಸರಿಗೆ ಬಿನ್ನಪ ಮಾಡಿ ಸೋಮೇಶ್ವರ ಪಂಡಿತರಿಗೆ[40] ಕೊಟ್ಟದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೦೫೪ ರ ಅಸಗೋಡುವಿನ ಶಾಸನದಲ್ಲಿ 'ಇದು ಕಾಳಾಮುಖಸ್ಥಾನಂ ನೈಷ್ಠಿಕ ವೇದಿ ಕರ್ತ್ತರ ಮಟಂ[41] ಎಂಬುದನ್ನು ಉಲ್ಲೇಖಿಸಿದೆ.

ಹೀಗೆ ವಿದ್ಯಾರ್ಥಿಗಳಿಗೆ ಹಾಗೂ ಆಚಾರ್ಯರುಗಳಿಗೆ ದಾನ ಕೊಟ್ಟದ್ದನ್ನು ಶಾಸನಗಳಿಂದ ತಿಳಿದು ಬಂದಿರುತ್ತದೆ. ಆದರೆ ಈ ಅರಸರ ಕಾಲದಲ್ಲಿ ದೇವಸ್ಥಾನಗಳಲ್ಲಿ ಮತ್ತು ಬ್ರಹ್ಮಪುರಿಗಳಲ್ಲಿ ವಿದ್ಯಾದಾನ ನಡೆಯುತ್ತಿದ್ದ ಬಗ್ಗೆ ನೊಳಂಬರ ಶಾಸನಗಳು ಮೌನವಾಗಿವೆ.

## ವಿದ್ಯಾಕೇಂದ್ರ ( ಘಟಿಕಾಸ್ಥಾನ )

ಕ್ರಿಸ್ತಶಕದ ಆರಂಭದಲ್ಲಿ ಕಟ್ಟಿದ ದೇವಾಲಯಗಳು ಕರ್ನಾಟಕದಲ್ಲಿ ಉಳಿದಿಲ್ಲವಾದರು ಅವುಗಳಿಗೆ ರಾಜರು ದತ್ತಿ ಬಿಟ್ಟಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ಅಶೋಕನ ಕಾಲದಲ್ಲಿ ಬೌದ್ಧವಿಹಾರಗಳು ದೊಡ್ಡ ಸಂಸ್ಥೆಯಾಗಿ ಬೆಳೆದು ವಿದ್ಯಾಕೇಂದ್ರಗಳಾದವು. ಪ್ರಾರಂಭದಲ್ಲಿ ಇವು ಬಿಕ್ಷುಗಳ ಶಿಕ್ಷಣಕ್ಕೆ ಮೀಸಲಾಗಿದ್ದರೂ ಕ್ರಮೇಣ ಉಳಿದವರನ್ನು ಸಹ ಸೇರಿಸಿಕೊಳ್ಳುತ್ತಿದ್ದಿರಬೇಕು.

ಬೌದ್ಧವಿಹಾರಗಳು ವಿದ್ಯಾ ಸಂಸ್ಥೆಗಳಾಗಿ ಬದಲಾವಣೆಯಾದದ್ದನ್ನು ನೋಡಿ, ಹಿಂದುಗಳೂ ತಮ್ಮ ವಿದ್ಯಾ ಸಂಸ್ಥೆಗಳ ಸ್ಥಾಪನೆಗೆ ಪ್ರೇರಣೆಯಾಗಿರಬೇಕು ಎಂದು ಡಾ|| ಅಲ್ಟೇಕರ್ ಅವರು ಹೇಳಿದ್ದಾರೆ.

ದೇವಸ್ಥಾನಗಳು ಯತಿಗಳಿಗೆ, ಛಾತ್ರರಿಗೆ ವಾಸಸ್ಥಾನವಾಗಿ ಅಸ್ತಿತ್ವದಲ್ಲಿದ್ದರೂ ವಿದ್ಯಾಸಂಸ್ಥೆಗಳಾಗಿ ಅಸ್ತಿತ್ವಕ್ಕೆ ಬಂದದ್ದು ೯ ನೆಯ ಶತಮಾನದ ನಂತರ. ದೇವಾಲಯಗಳಿಗೆ ವ್ಯವಸ್ಥಿತ ವಿದ್ಯಾಕೇಂದ್ರಗಳ ಸ್ಥಾನ ಕೊಟ್ಟವರು ಕಾಳಾಮುಖ ಪಾಶುಪತಶೈವರು. ಇವರು ಕರ್ನಾಟಕದ ದೇವಾಲಯಗಳ ಸ್ಥಾನಪತಿಯಾಗಿದ್ದವರು. ನಾಡಿನ ತುಂಬಾ ಚಿಕ್ಕ ಪುಟ್ಟ ಹಾಗೂ ದೊಡ್ಡ ಮಠಗಳನ್ನು, ಶೈವ ದೇವಾಲಯಗಳನ್ನು ಸ್ಥಾಪಿಸಿದರು. ದೇವಾಲಯಗಳಲ್ಲಿ ನಡೆಯುತ್ತಿದ್ದ ಪೂಜೆ ಪುನಸ್ಕಾರಗಳ ಜೊತೆಗೆ ಸಾಂಸ್ಕೃತಿಕ ಚಟುವಟಿಕೆಗಳನ್ನು, ಶಿಕ್ಷಣವನ್ನು ತಮ್ಮ ಕಾರ್ಯವ್ಯಾಪ್ತಿಯಲ್ಲಿ ಅಳವಡಿಸಿಕೊಡರು.

ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳು ಶೈವಯತಿಗಳ ವಾಸಸ್ಥಾನವೂ ಆಗಿತ್ತು. ದೇವಾಲಯಗಳಲ್ಲಿ ನೆಲೆ ನಿಂತ ಈ ಯತಿಗಳು ಮಹಾವಿದ್ವಾಂಸರು ಮಾತ್ರವಲ್ಲದೆ ಜಪ-ತಪಗಳ ಜೊತೆಯಲ್ಲಿ ವಿದ್ಯಾ-ದಾನವನ್ನು ಮಾಡುತ್ತಿದ್ದರು. ರಾಜರು, ಮಂತ್ರಿಗಳು, ಮಾಂಡಲೀಕರು, ದಂಡನಾಯಕರು, ಭಕ್ತರು ದೇವಾಲಯಗಳಲ್ಲಿ ನಡೆಯುವ ಪೂಜೆ ಮತ್ತು ಅಲ್ಲಿಯ ಎಲ್ಲಾ ಕಾರ್ಯಕಲಾಪಗಳಿಗಾಗಿ ದಾನ-ದತ್ತಿ ಬಿಡುತ್ತಿದ್ದಂತೆ ವಿದ್ಯಾಭ್ಯಾಸಕ್ಕಾಗಿಯೂ ದತ್ತಿಗಳನ್ನು ಕೊಡಲು ಪ್ರಾರಂಭಿಸಿದರು. ಹೀಗೆ ದೇವಾಲಯಗಳು ವಿದ್ಯಾಕೇಂದ್ರಗಳಾಗಿ ಪರಿವರ್ತನೆಯಾದವು.

ಹೀಗೆ ಪ್ರಾರಂಭವಾದ ವಿದ್ಯಾಭ್ಯಾಸವನ್ನು ಅಗ್ರಹಾರ, ಮಠ, ದೇವಸ್ಥಾನ, ಬ್ರಹ್ಮಪುರಿ ಮತ್ತು ಘಟಿಕಾಸ್ಥಾನಗಳಲ್ಲಿ ಮುಂದುವರಿಸಲಾಯಿತು. ವಿದ್ಯಾಕೇಂದ್ರಗಳಿಗೆ ಘಟಿಕಾಸ್ಥಾನಗಳೆಂದು ಹೆಸರು ಬರಲು ಸರಿಯಾದ ಕಾರಣ ತಿಳಿಯದು. ಸಂಸ್ಕೃತದಲ್ಲಿ ಘಟಿಕಾ ಎಂದರೆ ಮಣ್ಣಿನ ಮಡಿಕೆ. ಕಾಲವನ್ನು ಎಣಿಸಲು ಇದನ್ನು ಬಳಸುತ್ತಿದ್ದರು. ವೈದಿಕ ಬ್ರಾಹ್ಮಣರಿಗೆ, ವಿದ್ಯಾಕೇಂದ್ರಗಳಾಗಿದ್ದ ದೇವಸ್ಥಾನಗಳಿಗೆ, ಜ್ಯೋತಿಷ್ಯರಿಗೆ ಈ ಘಟಿಕಾಯಂತ್ರಗಳು ಅವಶ್ಯವಾಗಿ ಬೇಕಾಗಿರುತ್ತಿತ್ತು. ಪ್ರೊ| ಎಸ್.ವಿ. ವೆಂಕಟೇಶ್ವರ ಅವರು ಉಪಾಧ್ಯಾಯರೂ ವಿದ್ಯಾರ್ಥಿಗಳೂ ಕೂಡಿ ಚರ್ಚೆ ನಡೆಸುತ್ತಿದ್ದ ಮತ್ತು ಮಹಾವಿದ್ವಾಂಸರ ಸಂಪರ್ಕದಿಂದ ಧಾರ್ಮಿಕ ಸಾಹಿತ್ಯದಲ್ಲಿ ಅತ್ಯುತ್ತಮ ಜ್ಞಾನವನ್ನು ಪಡೆಯಲು ಸಾಧ್ಯವಾಗಿದ್ದ ಶ್ರೇಷ್ಠವಾದ ಸಂಸ್ಥೆಯೇ ಘಟಿಕಾಸ್ಥಾನ ಎಂದು ಹೇಳಿದ್ದಾರೆ. ಇಂದಿನ ವಿದ್ಯಾರ್ಥಿಗಳು ಉನ್ನತ ವ್ಯಾಸಂಗ ಪಡೆಯಲು ವಿಶ್ವವಿದ್ಯಾಲಯಗಳಿಗೆ ಹೋಗುತ್ತಿರುವಂತೆ ಪಾಚೀನರಲ್ಲಿ ಇಂತಹ ಘಟಿಕಾಸ್ಥಾನಗಳಲ್ಲಿ ಅಧ್ಯಯನ ನಡೆಸುತ್ತಿದ್ದರು.

ಕದಂಬ ಮಯೂರಶರ್ಮನು ಹೆಚ್ಚಿನ ಅಧ್ಯಯನಕ್ಕಾಗಿ ಕಂಚಿಯ ಘಟಿಕಾಸ್ಥಾನಕ್ಕೆ ಹೋದ ಉಲ್ಲೇಖವಿದ್ದು, ದಕ್ಷಿಣದಲ್ಲಿ ಕಂಚಿಯು ಘಟಿಕಾಸ್ಥಾನದ ಕೇಂದ್ರವಾಗಿತ್ತು. ಆದರೆ ಕರ್ನಾಟಕದಲ್ಲಿ

ಬಳ್ಳಿಗಾವೆಯಲ್ಲಿದ್ದ ಕೇದಾರೇಶ್ವರ ಮಠ, ಬಿಜಾಪುರ ಜಿಲ್ಲೆಯ ಸಾಲೊಟಗಿಯಲ್ಲಿದ್ದ ವಿದ್ಯಾಶಾಲೆ ಮತ್ತು ಘಟಿಕಾಸ್ಥಾನಗಳಲ್ಲಿ ಪ್ರಮುಖವಾದದ್ದು ಗುಲ್ಬರ್ಗ ಜಿಲ್ಲೆಯ ನಾಗಾವಿಯಲ್ಲಿದ್ದವೆಂದು ಉಲ್ಲೇಖಿತವಾಗಿದ್ದರೂ,[42] ಅವು ಕೆಲವು ಕಾಲ ಮಾತ್ರ ಘಟಿಕಾಸ್ಥಾನಗಳಾಗಿದ್ದಂತೆ ತಿಳಿಯುತ್ತದೆ.

ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ಮಾಂಡಲೀಕರಲ್ಲಿ ನೊಳಂಬ ಪಲ್ಲವ ವಂಶದವರೂ ಪ್ರಮುಖ ಸ್ಥಾನ ಪಡೆದಿದ್ದವರು. ಅವರಲ್ಲಿ ದಿಲೀಪರಸನ ಕಾಲದಲ್ಲಿ ಉಕ್ತವಾಗಿರುವ ನೊಳಂಬ ವಂಶದ ಮೊದಲ ಅರಸ ಮಂಗಳನೊಂಬಾಧಿ ರಾಜನನ್ನು 'ಕರ್ನಾಟ್ಯೆರ್ನುನ್ನತ ಮಂಗಳಾಖ್ಯ ನೃಪತಿ ವಿದ್ವದ್ಭಿಶಾರಾದಿತ' ಎಂದು ಶಾಸನದಲ್ಲಿ ಉಲ್ಲೇಖಿಸಿದೆ.[43] ವಿದ್ಯೆಯನ್ನು ಪ್ರೋತ್ಸಾಹಿಸಿಕೊಂಡು ಬಂದಿರುವ ಈ ವಂಶದ ಅರಸರಲ್ಲಿ ಯಾರು ಯಾವಾಗ ಹೆಂಜೇರಿನಲ್ಲಿ ಘಟಿಕಾಸ್ಥಾನವನ್ನು ಸ್ಥಾಪಿಸಿದರೆಂಬುದು ತಿಳಿದು ಬರುವುದಿಲ್ಲ. ಆದರೂ ನೊಳಂಬ ರಾಜರು ವಿದ್ಯಾಪ್ರೇಮಿಗಳಾಗಿದ್ದರು ಎಂಬುದರಲ್ಲಿ ಸಂಶಯವಿಲ್ಲ. ಇವರ ಕಾಲದಲ್ಲಿ ಹೇಮಾವತಿಯಲ್ಲಿ ವಿದ್ಯಾಕೇಂದ್ರವಿದ್ದು ಅದನ್ನು ಘಟಿಕಾಸ್ಥಾನವೆಂದು ಶಾಸನಗಳು ಕರೆದಿವೆ. ಹೆಂಜೇರುಪಟ್ಟಣದ ನೊಳಂಬೇಶ್ವರ ದೇವಾಲಯದಲ್ಲಿರುವ ಚಿತ್ರಗಳಿಂದ ಈ ಘಟಿಕಾಸ್ಥಾನದಲ್ಲಿ ಖಗೋಳ ಶಾಸ್ತ್ರಕ್ಕೆ ಹೆಚ್ಚಿನ ಪ್ರಾಧಾನ್ಯವಿತ್ತೆಂದು ತಿಳಿಯಬಹುದು.[44] ಶಕ ೧೯೯೦/ಕ್ರಿ.ಶ.೧೧೬೮ ರ ಹೇಮಾವತಿಯ ಶಾಸನದಲ್ಲಿ ಹೆಂಜೇರು ಪಟ್ಟಣದ ಮಹಾಘಟಿಕಾಸ್ಥಾನ ಶ್ರೀನೊಣಂಬೇಶ್ವರ ದೇವರ ಸನ್ನಿಧಾನದಲ್ಲಿ ಆಚಾರ್ಯ ರಾಜಗುರುಗಳಾಗಿದ್ದ ಅನನ್ತ ಶಿವದೇವರಿಗೆ ಮತ್ತು ಶ್ರೀನೊಣಂಬೇಶ್ವರಸ್ಥಾನದಲ್ಲಿ ಸತ್ರವನ್ನು ನಡೆಸುವಂತೆ ಹೇಳಿದ ಉಲ್ಲೇಖವಿದೆ.[45] ಇದು ನೊಳಂಬರ ಪ್ರಾರಂಭದ ರಾಜಧಾನಿಯಾದ ಹೆಂಜೇರುಪಟ್ಟಣದ ದೊಡ್ಡಪ್ಪ ದೇವಸ್ಥಾನದ ಮೂರನೆಯ ಕಂಬದಲ್ಲಿದೆ. ಇದರಿಂದ ಹೆಂಜೇರು ಪಟ್ಟಣ ಒಂದು ಘಟಿಕಾಸ್ಥಾನವಾಗಿತ್ತೆಂದು ತಿಳಿದು ಬರುತ್ತದೆ. ಅದೇ ಕಂಬದಲ್ಲಿ ಮುಂದುವರಿದಂತೆ 'ದಣ್ಣಾಯಕರು ಸೀರೆ ನಾಡೊಳಗಣ ಹೆಂಜೇರು ಪಟ್ಟಣದ ಮಹಾಘಟಿಕಾಸ್ಥಾನ ಶ್ರೀನೊಣಂಬೇಶ್ವರ ದೇವರ ಅಂಗಭೋಗಕ್ಕೆ, ನಂದಾದೀವಿಗೆಗೆ, ತ್ರಿಕಾಲ ನೈವೇದ್ಯಕ್ಕೆ, ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಸದಾಕಾಲ ಹನ್ನೆರಡು ಮನುಷ್ಯ ಬ್ರಾಹ್ಮಣರಿಗೂ ಬ್ರಹ್ಮನೆರಡು ಮನುಷ್ಯ ತಪೋಧನರು । ನಾಲ್ವರು ಘಳಿಯಾರದವರು, ಇಬ್ಬರು ಪೂಜಾರಿಗಳು ಅನ್ತು ನಿತ್ಯ ಮೂವತ್ತು ಮನುಷ್ಯರ ಆಹಾರದಾನವನ್ನು ನಡೆಸುವಂತೆ ಶಕ ನ್ರಿಪ ಕಾಲದ ೧೧೨೭ ನೆಯ ಕ್ರೋಧನ ಸಂವತ್ಸರದ ಪಾಲ್ಗುಣ ಅಮಾವಾಸೆ ಆದಿತ್ಯವಾರ ಸೂರ್ಯಗ್ರಹಣದಂದು ಶ್ರೀ ನೊಣಂಬೇಶ್ವರದೇವರ ಆ ಸ್ಥಾನದ ಆಚಾರ್ಯ್ಯರಪ್ಪ ಚಿಲುಕಜೀಯರ ಮಗ ಸೋಮಜೀಯರ ಮಗ ಪೋತಜೀಯರಿಗೂ ಜ್ಞಾನಭೂಷಣ ನಾಗರಾಸಿಪಂಡಿತರ ತಮ್ಮ ನೊಣಂಬ ಜೀಯಂ । ಆ ನಾಗರಾಸಿ ಪಂಡಿತರ ಮಗ ಅನಂತ ಶಿವರಿಗಂ । ಎರಡು ಮೊದಲಾಗಿ ಕಾಲಂ ಕಚ್ಚಿ ಕೊರೆಹೆಯ ಚತುಸ್ಸೀಮೆ ಸಹಿತ ಸರ್ವಬಾಧಾ ಪರಿಹಾರಂ ಸರ್ವ್ವನಮಶ್ಯವಾಗಿ ಧಾರಾಪೂರ್ವ್ವಕಂ ಮಾಡಿ ಶ್ರೀನೊಣಂಬೇಶ್ವರದೇವರಿಗೆ

ಕೊಟ್ಟರು। ಬೀದಿವೆಡೆಂಗದೇವರಿಗೆ, ನೊಣಂಬೇಶ್ವರದೇವರಿಗೆ ಮತ್ತು ನಾಗೇಶ್ವರ ದೇವರಿಗೆ ಭೂದಾನ ನೀಡಿದ ಉಲ್ಲೇಖವಿದೆ.[46]

ಮುಂದೆ ಹೆಂಜೇರಿನ ಘಟಿಕಾಸ್ಥಾನದ ಬಗ್ಗೆ ಉಲ್ಲೇಖಗಳು ದೊರೆಯುವುದಿಲ್ಲ. ಆಡಳಿತ ಬದಲಾವಣೆಯಿಂದ ಈ ಘಟಿಕಾಸ್ಥಾನವು ಅವಸಾನ ಹೊಂದಿರಬಹುದು. ಅಲ್ಲದೆ ದಕ್ಷಿಣಕ್ಕೆ ಮುಸಲ್ಮಾನರ ಪ್ರವೇಶದ ಕಾರಣದಿಂದಲೂ ಮತ್ತು ಇಲ್ಲಿನ ಸ್ಥಳೀಯರ ಪ್ರೋತ್ಸಾಹವಿಲ್ಲದೆ ಇಂತಹ ಅನೇಕ ವಿದ್ಯಾಕೇಂದ್ರಗಳು ಅವಸಾನವನ್ನು ಹೊಂದಿರುತ್ತವೆ. ಹೀಗೆ ಅವಸಾನಗೊಂಡ ಘಟಿಕಾಸ್ಥಾನಗಳಲ್ಲಿ ಹೆಂಜೇಗಿನದೂ ಒಂದಾಗಿರಬೇಕು ಎಂದು ಊಹಿಸಿದಲ್ಲಿ ತಪ್ಪಾಗಲಾರದು.

## ದಾನ ದತ್ತಿಗಳು

ಭಾರತೀಯ ಧಾರ್ಮಿಕ ಪರಂಪರೆ ರಾಜನಿಂದ ಮೊದಲ್ಗೊಂಡು ಜನಸಾಮಾನ್ಯನವರೆಗೆ ಹರಿದುಬಂದಿರುವುದು ಚಾರಿತ್ರಿಕವಾಗಿ ತಿಳಿದುಬರುತ್ತದೆ. ಈ ಚೌಕಟ್ಟಿನಲ್ಲಿಯೇ ಬೆಳೆದು ಬಂದ ರಾಜನೂ ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ನಡೆದು ಆ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾನೆ. ರಾಜ ತಾನು ಅಳವಡಿಸಿಕೊಂಡ ಧರ್ಮ ಅವನ ಪ್ರಜೆಗಳೂ ಸತ್ಪ್ರಜೆಯಾಗುವಂತೆ ರೂಪಿಸುವುದರ ಜೊತೆಗೆ ಸತ್ಕಾರ್ಯಗಳನ್ನು ಕೈಗೊಳ್ಳಲೂ, ಅಂತಹ ಧಾರ್ಮಿಕಕಾರ್ಯಗಳನ್ನು ಕೈಗೊಂಡವರನ್ನೂ ಸತ್ಕರಿಸಿ ಗೌರವಿಸುವಂತೆ ಪ್ರೇರೇಪಿಸುತ್ತಿತ್ತು. ಇಂತಹ ಪ್ರೇರಣೆಗೆ ತಮ್ಮ ಹಿಂದಿನವರ ಅಥವಾ ತಮ್ಮ ಹಿರಿಯರು ಮಾಡಿದಂತಹ ಪುಣ್ಯಕೆಲಸಗಳು ಮಾದರಿಯಾಗಿರುತ್ತಿದ್ದವು. ಕ್ರಿ.ಶ. ೧೫ ನೆಯ ಶತಮಾನದ ಲಕ್ಷ್ಮೀಧರನ ಶಾಸನದಲ್ಲಿ 'ಕೆರೆಯಂ ಕಟ್ಟಿಸು ಭಾವಿಯಂ ಸವೆಸು ದೇವಾಗಾರಾಮಂ ಮಾಡಿ ಸಜ್ಜರೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯಿ ನಂಬಿದರ್ಗ್ಗೇಱಿವೆಟ್ಟಾಗಿರು ಶಿಷ್ಟರಂ ಪೊರೆಯನು ತ್ರಿಂತೆಲ್ಲವಂ ... ಕೆರೆಯನ್ನು ಕಟ್ಟಿಸುವುದು, ಬಾವಿಯನ್ನು ತೋಡಿಸುವುದು, ದೇವಾಲಯ ನಿರ್ಮಾಣ ಮಾಡಿಸುವುದು, ಸೆರೆಯಲ್ಲಿ ಸಿಕ್ಕಿರುವ ಅನಾಥರನ್ನು ಬಿಡಿಸುವುದು, ಮಿತ್ರರಿಗೆ ಒಳ್ಳೆಯದನ್ನು ಮಾಡುವುದು, ನಂಬಿದವರಿಗೆ ದ್ರೋಹ ಬಗೆಯದಿರುವುದು ಮುಂತಾದವು ಸತ್ಕಾರ್ಯಗಳು. ಇವು ಭಾರತೀಯ ಧರ್ಮತತ್ವಗಳೂ ಹೌದು. ಈ ತತ್ವಾಚರಣೆಗಳಿಗೆ ನಿರ್ದಿಷ್ಟ ಕಾಲವಿಲ್ಲ. ಎಲ್ಲಾ ಶತಮಾನಗಳಲ್ಲಿಯೂ ಇವೇ ತತ್ವಗಳು ಅಲ್ಪ ಸ್ವಲ್ಪ ಬದಲಾವಣೆಯಲ್ಲಿ ನಡೆಯುತ್ತಿದ್ದವು. ಹೀಗಾಗಿ ಮನುಷ್ಯ ತಾನು ಗಳಿಸಿದ ಸಂಪತ್ತನ್ನು ದೇವಾಲಯಗಳನ್ನು ಕಟ್ಟಿಸಲು, ಕೆರೆ ಕಟ್ಟೆಗಳ ನಿರ್ಮಾಣಕಾರ್ಯಕ್ಕಾಗಿ ಬಳಸಿಕೊಂಡು ಸದ್ವಿನಿಯೋಗ ಮಾಡುತ್ತಿದ್ದ. ದೇವಾಲಯಗಳು ಜನಜೀವನದ ಒಂದು ಸಾಮಾಜಿಕ ಸಂಸ್ಥೆ. ಇವು ಹಾಳಾಗದಂತೆ ಜೀರ್ಣೋದ್ಧಾರ ಮತ್ತು ಅಲ್ಲಿ ದಿನ ನಿತ್ಯದ ಪೂಜೆಗಾಗಿ, ಅಲ್ಲಿನ ಪೂಜಾರಿಗಳಿಗೆ ದಾನ ದತ್ತಿ ನೀಡುತ್ತಾ ಬಂದ. ಇದು ತನ್ನ ಮತ್ತು ತನ್ನ ಕುಟುಂಬದ ಮುಂದಿನ ಭವಿಷ್ಯಕ್ಕಾಗಿ ಆತ ದಾನ ನೀಡುತ್ತಿದ್ದ. ಇದೇ ದಾನಕ್ಕೆ ಮುಖ್ಯ ಪ್ರೇರಣೆ.

ಹೀಗೆ ದಾನ ನೀಡುವಾಗ ತನ್ನ ವೃತ್ತಿಗನುಗುಣವಾಗಿ ನೀಡುತ್ತಿದ್ದ. ರೈತನಾದಲ್ಲಿ ತಾನು ಬೆಳೆದ ಬೆಳೆಯಲ್ಲಿ ಪಾಲು, ತೋಟಗಾರ ತನ್ನ ತೋಟದಲ್ಲಿ ಬೆಳೆಯುವ ಹೂವು, ಎಲೆ, ಅಡಿಕೆ ಮುಂತಾದವುಗಳನ್ನು, ವಣಿಕನಾದವನು ತಾನು ವ್ಯಾಪಾರ ಮಾಡುವ ಜೀನಸುಗಳಲ್ಲಿ ಮುಖ್ಯವಾದವುಗಳನ್ನು, ತೆಲ್ಲಿಗರು ದೇವರ ದೀಪಕ್ಕೆ ಎಣ್ಣೆ ಮುಂತಾದವನ್ನು ತಮ್ಮ ಶಕ್ತ್ಯಾನುಸಾರವಾಗಿ ನೀಡುತ್ತಿದ್ದರು. ರಾಜನಾದವನು ಭೂದಾನ ನೀಡಿ, ಆ ಭೂಮಿಗೆ ತೆರಿಗೆಯಿಂದ ವಿನಾಯಿತಿ ನೀಡುತ್ತಿದ್ದ. ರಾಜರು ತಮ್ಮ ಹೆಸರಿನಲ್ಲಿ ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದರು. ಹೀಗೆ ನೀಡಿದ ದಾನವನ್ನು ಸರಿಯಾಗಿ ನಿರ್ವಹಿಸುವಂತೆ ಸ್ಥಳೀಯರಿಗೆ ವಹಿಸುತ್ತಿದ್ದರು. ಅವರು ದಾನ ನೀಡಿದವರ ಉದ್ದೇಶಗಳು ನೆರವೇರುವಂತೆ ಗಮನಿಸುವುದು ಹಾಗೂ ದುರುಪಯೋಗ ಮಾಡಿದಂತಹವರನ್ನು ಶಿಕ್ಷಿಸುವುದು ಅಥವಾ ಆ ಸ್ಥಳದಿಂದ ಓಡಿಸುವುದಾಗಿತ್ತು. ಅಥವಾ ದೊರೆಗೆ ದೂರು ಕೊಡುವ ಕೆಲಸವನ್ನು ಸ್ಥಳೀಯರು ನಿರ್ವಹಿಸುತ್ತಿದ್ದರು.

ನೊಳಂಬರ ಆಳ್ವಿಕೆಯ ಆರಂಭದ ಕಾಲದಿಂದ ಅಂತ್ಯದವರೆಗೆ ಅವರು ಮತ್ತು ಅವರ ಕೈಕೆಳಗಿನ ಅಧಿಕಾರಿಗಳು ಮತ್ತು ಜನಸಾಮಾನ್ಯರು ನೀಡಿದ ದಾನ-ದತ್ತಿಗಳ ಉಲ್ಲೇಖವನ್ನು ಈ ಕೆಳಗೆ ಪಟ್ಟಿಮಾಡಿದೆ.

## ನೊಳಂಬರ ಕಾಲದ ದಾನ ದತ್ತಿಗಳು

| ಕ್ರ.ಸಂ. | ಕಾಲ | ಅರಸ | ದಾನದ ವಿವರ | ಆಕರ |
|---|---|---|---|---|
| ೧. | ಕ್ರಿ.ಶ.ಸು.೮೦೦ | ಸಿಂಗಮುತ್ತರಸ | ಮನೆಮಗ (ವಿಸಮೆರಸರ)ನಿಗೆ ದೇವಾಲಯಕ್ಕೆ, ಶಿವಾಲಯಕ್ಕೆ | EC.XI.Si.33 |
| ೨. | -"- | ಕಲಿನೊಳಂಬ | ಪಡಿಯೂರ ಕೊತ್ತಣ್ಣನಿಗೆ ಕೊಟ್ಟಗದ್ದೆ | ಕನ್ನಡನುಡಿ 41.Jan/1978 |
| ೩. | ಕ್ರಿ.ಶ.ಸು.೮೨೦ ಮಧುಗಿರಿ | ಪೊನ್ನೇರ | ಪ್ರಭುಮಣಿ ಪರಮ ಸುಭಗನ ಪಗೆವರ ಗನ್ನಾದ್ಸಿತ್ತ ಪಾರ್ವ್ವರ ಇಚ್ಛೆನತಪೂರ್ವಾ ಚಾರದಾತೆಱಯ ಪೈಈಯೆ ಮೊಸ್ಸೊಡೆ ಪೊನ್ನೈಱನುಂ, ಚೋಳಮಹಾರಾಜನುಂ ಮೂವದಿಮ್ಬ(೩೨) ಪ್ರಾರ್ವ್ವರಾನ್ಕೊದ್ದಾ | EC.XVI.Sppl.118. |
| ೪. | ಕ್ರಿ.ಶ. ೮೭೮ ಬರಗೂರು | ಮಹೇಂದ್ರ | ಮಹೇಂದ್ರ ತನ್ನ ಅರಮನೆಯುನ್ನು ಮಹಾದೇವನಿಗೆ ನಿವೇದಿಸಿ ಮಾಹೇನ್ದ್ರೇಶ್ವರನನ್ನು ಮಾಡಿಸಿ ಭೂದಾನ ನೀಡಿದೆ. | EC.XII.Si.38 |
| ೫. | ಕ್ರಿ.ಶ. ೮೮೩ ಕಂಬದೂರು | -"- | ಕೆರೆಯ ಕೆಳಗಿನ ಗದ್ದೆ ದೇವರಿಗೆ | ಕವಿಶಾಸಂ.೫. ಭಾಗ.೧೧೭೦ |
| ೬. | ಕ್ರಿ.ಶ.ಸು ೮೯೦ ಹೇಮಾವತಿ | -"- | ಮಹೇಂದ್ರನ ರಾಣಿಯರು ದಾನ ಕೊಟ್ಟರು | SII.VI.No.556 |

| | | | | |
|---|---|---|---|---|
| ೭. | ಕ್ರಿ.ಶ.ಸು ೮೯೦<br>ಕಾಮಗೊಂಡನ<br>ಹಳ್ಳಿ | –"– | –"– | EC.XII.Si.24 |
| ೮. | –"–<br>ಚಿಕ್ಕಮಧುರೆ | –"– | ಗೋಸಾಸಕ್ಕೆ | MAR.1947.No.10 |
| ೯. | ಕ್ರಿ.ಶ. ೮೯೨<br>ಧರ್ಮಪುರಿ | –"– | ಬಸದಿಗೆ ದಾನ | ಕವಿಶಾಸಂ.೪.ನಂ.೯೩ |
| ೧೦. | ಕ್ರಿ.ಶ.ಸು ೮೯೫<br>–"– | –"– | ಕಲ್ಲದೇಗೂವನ್ನು ಕಟ್ಟಿಸಿ ವರ್ಷ<br>ಕ್ಕೊಮ್ಮೆಸುಣ್ಣ ಬಳಿಯಲು ದಾನ | EC.VII.(R).285 |
| ೧೧. | ಕ್ರಿ.ಶ.ಸು ೯೦೦<br>ಮೊದಕೇರಿ | ಅಯ್ಯಪದೇವ | ನಾಲ್ಕು ಕಲ್ಲನ್ನಿರಿಸಿ ಭೂದಾನ | ಇತಿಹಾಸ ದರ್ಶನ<br>ಸಂ.XI.ಪು.೧೧೧ |
| ೧೨. | ಕ್ರಿ.ಶ.ಸು ೯೧೦<br>ಧರ್ಮಪುರಿ | –"– | ಬಸದಿಗೆ | ಕವಿಶಾಸಂ.೪.ನಂ.೯೧ |
| ೧೩. | ಕ್ರಿ.ಶ.ಸು ೯೨೦<br>ಹಿರೇಮದರಿ | ಅಣ್ಣಿಗ | ಭೂದಾನ | EC.XI.Cl.31 |
| ೧೪ | ಕ್ರಿ.ಶ. ೯೨೫<br>ಕ್ಯಾಲನೂರು | ವೀರನೊಳಂಬ | ೫೨ ಜನರಿಗೆ ದಾನ ನೀಡಿದ | EC.X.Cn.43 |
| ೧೫. | ಕ್ರಿ.ಶ.ಸು .೯೩೦<br>ಅಡಕನಹಳ್ಳಿ | ನೊಳಂಬರಸ | ಪೊನ್ನುಕೊಟ್ಟು ಮಣ್ಣು ಪಡೆದ ದಾನ | EC.IX.Ht.48 |
| ೧೬. | ಕ್ರಿ.ಶ. ೯೩೧<br>ಕುರುಬೂರು | ವೀರನೊಳಂಬ | ೧೦೮ ಮಹಾಜನರಿಗೆ ೧೫ ಗದ್ಯಾಣ<br>ಪೋನ್ನುದಾನ | EC.X.Cn.43,44. |
| ೧೭. | ಕ್ರಿ.ಶ ೯೩೧<br>ಮಾದಿಗೆರೆ | ನೊಳಂಬಾಧಿರಾಜ | ಕಾಮೇಶ್ವರ ದೇವರಿಗೆ ನಾಗಮಯ್ಯ<br>ಖಂಡುಗ ಗದ್ದೆ ದಾನವಾಗಿ ಬಿಟ್ಟ | MAR.1924.No.48. |
| ೧೮. | ಕ್ರಿ.ಶ.ಸು. ೯೩೫<br>ಶಿವಾರಪಟ್ಟಣ | ವೀರನೊಳಂಬ | ಮೆಂಡಿಮಂಗಲದ ಮಹಾಜನರಿಗೆ<br>ಗದ್ಯಾಣ ದಾನವಾಗಿ ಬಿಟ್ಟ | EC.X.Kl.9. |
| ೧೯. | ಕ್ರಿ.ಶ. ೯೪೨<br>–"– | ದಿಲೀಪರಸ | ನನ್ನೇಶ್ವರದೇವರಿಗೆ ಪಿರಿಯ<br>ಬಾಣಗೆರೆಯನ್ನು ದಾನವಾಗಿ ನೀಡಿದ<br>ಉಲ್ಲೇಖವಿದೆ. | SII.IX.Ht.37 |
| ೨೦. | ಕ್ರಿ.ಶ.ಸು ೯೪೫<br>ಕೊಂಡ್ರಳ್ಳಿ | ಇರಿವನೊಳಂಬ | ನಂದಿಗೊಳಿಯ ಗೌಡನಿಗೆ ದೇವಭೋಗ<br>ನೀಡಿದ ಊಲ್ಲೇಖ | EC.IX.Ht.50 |
| ೨೧. | ಕ್ರಿ.ಶ.ಸು ೯೫೦<br>ಕುರುಬೂರು | –"– | ಐಗೊಳ ಪನ್ನಸು ಬಿಟ್ಟ | EC.X.Cn.50 |

| | | | |
|---|---|---|---|
| ೨೨. –"–<br>ಆವನಿ | ದಿಲೀಪ | ಆವನ್ಯ ಸ್ಥಾನದ ಹನ್ನೆರಡು ಕಿರುದೆರೆ (ತೆರಿಗೆ) ಮಹಾದೇವರಿಗೆ ಬಿಟ್ಟಿದ್ದು | EC.X.Mb.51 |
| ೨೩. –"–<br>ಕೊಳಗತ್ತೂರು | ಅಣ್ಣಿಗ | ಭೂದಾನ | ಕವಿಶಾಸಂ.೪.ನಂ.೮೩ |
| ೨೪. –"–<br>ಅಗಳಿ | ನೊಳಂಬಾಧಿರಾಜ | ವಿಷ್ಣುಭಟಾರರಿಗೆ ಭೂದಾನ | SII.IX.Pt.1.No.33 |
| ೨೫. ಕ್ರಿ.ಶ. ೯೫೧<br>ಕುರುಬೂರು | ಇರಿವನೊಳಂಬ | ಭೀಮೇಶ್ವರ ದೇವಾಲಯಕೆ ದೇವ ಭೋಗ ನೀಡಿದೆ. | EC.X.Cn.49 |
| ೨೬. ಕ್ರಿ.ಶ. ೯೫೯<br>ಮಧೂಡಿ | ದಿಲೀಪ | ವಿಷ್ಣುಗೃಹಕ್ಕೆ ದಾನ | SII.IX.Pt.1.No.28 |
| ೨೭. ಕ್ರಿ.ಶ. ೯೬೫<br>ಧಲಪಳ್ಳಂ | ಅಣ್ಣಿಗ | ಬಿಯಳಚೋರನಿಗೆ ಬಿಳಿಯನೂರನ್ನು ಕಲ್ನಾಟು ಕೊಟ್ಟಿದ್ದು | ಕವಿಶಾ.ಸಂ.೪.ನಂ.೧೦೪ |
| ೨೮. ಕ್ರಿ.ಶ.ಸು ೯೬೮<br>ಉತ್ತನೂರು | ನನ್ನಿನೊಳಂಬ | ನನ್ನಿನೊಳಂಬನ ಪಟ್ಟಗಟ್ಟಿದಾಗ ನೊಳಂಬರು ಉತ್ತನೂರಿನ ೧೨ ಮಹಾಜನರಿಗೆ ೧೦೦ ಗದ್ಯಾಣ ಹೊನ್ನ ನೀಡಿ ನಿತ್ಯವೂ ೫ ಜನ ಬ್ರಾಹ್ಮಣರು ಊಟ ಮಾಡುವ ವ್ಯವಸ್ಥೆ ಮಾಡಿದ. | EC.X.Mb.122 |
| ೨೯. ಕ್ರಿ.ಶ.ಸು ೯೮೦<br>ಕರ್ಷನಪಲ್ಲೆ | ಇಮ್ಮಡಿ<br>ಮಹೇಂದ್ರ | ಪುಲಿನಾಡಿನ ಕೆರೆಯ ಬೆಳೆಗಟ್ಟೂರನ್ನು ನೊಳಂಬ ಗಾವುಂಡನಿಗೆ ಕೊಡುಗೆಯಾಗಿ ನೀಡಿದೆ. | SII.IX.Pt.1.No. 39 |
| ೩೦. ಕ್ರಿ.ಶ. ೯೮೧<br>ಕಂಚುಗಾರ<br>ಬೆಳಗಲ್ಲು | –"– | ವಿಷ್ಣುದೇವ ಮತ್ತು ಪ್ರಿಯದೇವರ ದೇವಾಲಯಗಳ ಜೊತೆಗೆ ಹಿಂದಿನ ೩ ದೇವಾಲಯಗಳಿಗೆ ಭೂದಾನ | ಕವಿಶಾಸಂ.೧.ಸಿರಗು.೩೮ |
| ೩೧. ಕ್ರಿ.ಶ. ೯೯೪<br>ನೇರಳಗುಂದಿ | ತ್ರೈ.ಮ.ನೊ.ಪ<br>ಪೆರ್ಮಾನಾಡಿದೇವ | ಆಯನೇರಲು ಗುಂಡಿಯ ಹಿಟ್ಟಮಯ್ಯ ಎಂಬುವವನು ಮಲ್ಲಿಕಾರ್ಜುನ ದೇವರಿಗೆ ನೀಡಿದ ಗದ್ದೆದಾನ. | EC.VII.Hn.119 |
| ೩೨. ಕ್ರಿ.ಶ. ೯೯೯<br>ಎಲ್ಲೂರು | ಗೋಬಿನ್ದರದೇವನ<br>ಪತ್ನಿನೊಳಂಬಕುಲದ<br>ಪ್ರಿಥುವಬ್ಬರಸಿ | ಪೆರ್ಮಾನಡಿ ಎಲವಕ್ಕಲೂರ ೧೨ ಮಂದಿಗೆ ದಾನ | EC.IV.No.82 |
| ೩೩. ಕ್ರಿ.ಶ. ೧೦೦೧<br>ಕಮ್ಮಸಂದ್ರ | ಗನ್ನರಸ | ದಂಡನಾಯಕ ಶ್ರೀಧರಯ್ಯ ನಾಡಿನ ನಾಲ್ಕು ಜನ ಗಾವುಂಡ, ಸಿಂದಗಾವುಂಡನು ಸೇರಿ ಸತ್ತಿವಂಗಲದ ಭೂಮಿಯನ್ನು ಲೋಪಾದಿಗೆ ಚಾವುಂಡಯ್ಯನಿಗೆ ಸಾಸನ ಗೊಟ್ಟರ್ | EC.IX.Ht.3 |
| ೩೪. ಕ್ರಿ.ಶ. ೧೦೦೮<br>ಬಲ್ಲಕುಂದೆ | ಘಟೆಯಂಕಕಾರ | ಬಲ್ಲಕುಂದೆನಗರದ ಕೆಲವು ಶ್ರೇಷ್ಠಿಗಳು ೫ ನಿವರ್ತನ ಭೂಮಿಯನ್ನು ಜಿನಾಲಯಕ್ಕೆ ಬಿಟ್ಟರು | ಕವಿಶಾಸಂ.೧.ಸಿರಗು.೨೬ |

| | | | | |
|---|---|---|---|---|
| ೩೫. | ಕ್ರಿ.ಶ.ಸು ೧೦೧೦<br>ಸಿಂದಿಗೆರೆ | ಇರಿವನೊಳಂಬ<br>ನಾರಸಿಂಘದೇವ | ಮಣಿಬೇತ ಮಹಾರಾಜ ಬಲ್ಲಕುಂದೆ ೩೦೦ ರೊಳಗಣ ಪಟ್ಟಣದ ಧಮ್ಮೇತಕ್ಕೆ ೧೨ ಮತ್ತರು ಭೂದಾನ | -"- ಬಳ್ಳಾ.೬೦ |
| ೩೬. | ಕ್ರಿ.ಶ. ೧೦೧೪<br>ಗೊನೆಹಾಳು | ಇಱುವ<br>ನೊಳಂಬಾಧಿರಾಜ | ಪಂಪಾ(ತೀರ್ಥ)ದಲ್ಲಿ ಮಹಾಕಾಳ ದೇವರಿಗೆ ಪನ್ನಸು ದಾನ ಕೊಟ್ಟದ್ದು | -"- ಹೊಸಪೇಟೆ.೪೦ |
| ೩೭. | ಕ್ರಿ.ಶ.ಸು ೧೦೧೫<br>ನೆಲಪಲ್ಲಿ | ಘಟೆಯಂಕಕಾರ | ಪೇಱುವಿನಾಡವೆನ್ದುಱುಪೊಂನೆಯಲ್ಲಿಳಿದು ಕೊಯತೂರ ಬಳೆಗಾರ, ರಾಮೇಶ್ವರದ ಹರ ಪಲ್ಲಯ್ಯ, ಗವರೆಸೆಟ್ಟಿಯ ಮಗ ಕರವಯ್ಯ . ನಿಗೆ ಮುಮ್ಮಡಿ ಪಲ್ಲವಾದಿತ್ಯನೊಱಮ್ಬ ಸೆಟ್ಟಿಯೆಂದು ಪಟ್ಟಕಟ್ಟಿ, ಪುಲಿನಾಡ ಕೊಳತೂರನ್ನು ಪಲ್ಲವಾದಿತ್ಯಪುರವೆಂದು ದಾನ ನೀಡಿದ. ಪಲ್ಲವಾದಿತ್ಯ ನೊಳಂಬಸೆಟ್ಟಿ ಕದಂಬರ ವಿಕ್ರಮಾದಿತ್ಯನ ಮಗನೂ ತನ್ನ ಅಳಿಯನೂ ಆದ ಬೆಂಗಡಯ್ಯನಿಗೆ ಗದ್ದೆ ದಾನ ಮಾಡಿದ. | SII.IX.Pt.1.41. |
| ೩೮. | ಕ್ರಿ.ಶ.ಸು ೧೦೧೫<br>ಮಗನ್‌ದಪಳ್ಳಿ | -"-<br>ಪಲ್ಲವಾದಿತ್ಯ | ವೆಂದುರ ಪೊನ್ನೆಯಲ್ಲಿ ಇದ್ದ ಪುಲಿನಾಡ ಪರಮ್ಮಾದಿಯ ಮಾಗರ ಬೀರಾನೆ ಗಾವುಂಡರ ಮಗ ಬಸವಯ್ಯಮ್ಮಗೆ ಪಲ್ಲವಾದಿತ್ಯ ನೊಳಂಬಗಾವುಂಡನೆಂದು ಹೆಸರು ಕೊಟ್ಟು ಪಟ್ಟಾಭಿಷೇಕ ಮಾಡಿ ಪುಲಿನಾಡ ನಾಗೆಕುಂಟೆಯನ್ನು ಕೊಡುತ್ತಾನೆ. | ARIE.1930-34.No.208 |
| ೩೯. | ಕ್ರಿ.ಶ. ೧೦೧೭<br>ಮಲ್ಲಯ್ಯನಗುಡ್ಡ | -"-<br>ನೊಳಂಬಾಧಿರಾಜ | ಮೈಲಾರದೇವರಿಗೆ ಬಲ್ಲಕುಂದೆ ಸಮೀಪದ ಸಿರಿಯನೂರನ್ನು ಸರ್ವಾಭ್ಯಂತರ ಸಿದ್ಧಿದಾನ | ಕವಿಶಾಸಂ.೧.ಸಿರಗು.೫೯ |
| ೪೦. | ಕ್ರಿ.ಶ. ೧೦೧೮<br>ಬಾಗುಳಿ | ನೊಳಂಬ<br>ಉದಯಾದಿತ್ಯ | ಕಲಿದೇವೇಶ್ವರ ದೇವಾಲಯಕ್ಕೆ ಅಂಗ ರಂಗಭೋಗ ಮತ್ತು ಆಹಾರಧಾನ್ಯಕ್ಕೆ ಭೂದಾನ | -"- ಹರಪ.೯೭ |
| ೪೧. | ಕ್ರಿ.ಶ.ಸು ೧೦೨೦<br>ತುಂಬಿಗೆರೆ | ಜಗದೇಕಮಲ್ಲ<br>ಇರ್ಮಡಿ ನೊಳಂಬ | ಮೂಲಸ್ಥಾನದೇವರ ನೈವೇದ್ಯಕ್ಕೆ ಮಠಕ್ಕೆ ಬಿಟ್ಟ ಭೂದಾನ | SII.IX.Pt.1.No.96 |
| ೪೨. | ಕ್ರಿ.ಶ ೧೦೨೪<br>ಮರೋಳ | ಘಟೆಯಂಕಕಾರ | ಸತ್ಯಾಶ್ರಯನ ಮಗಳು ಘಟೆಯಂಕಕಾರನ ಪತ್ನಿ ಮಹಾದೇವಿ ಮರುವೊಳನ್ನು ಆಳುತ್ತಿದ್ದಾಗ ಅಲ್ಲಿಯ ಬಸದಿಗೆ ದಾನ | SII.IX.Pt.1.No.61 |
| ೪೩. | ಕ್ರಿ.ಶ. ೧೦೨೮<br>ಕಲ್ಯಂಭ | ಜಗದೇಕಮಲ್ಲ<br>ನೊಳಂಬ ಪಲ್ಲವ<br>ಪೆರ್ಮಾನಡಿ | ಚಿಹನಪಟ್ಟಿಯ ಮೂಲ ಸ್ಥಾನದ ಮಹಾ ದೇವರಿಗೆ ಸಹಲೆ ಗೌಡ ಎಂಬುವವನು ದಾನ ನೀಡಿದ. | SII.IX.Pt.1.<br>ಕವಿಶಾಸಂ.೧.<br>ಬಳ್ಳಾ.೪೮,೪೯ |
| ೪೪. | ಕ್ರಿ.ಶ. ೧೦೩೦<br>ತೆಲಗಿ | -"- | ತೆಲಗಿಯ ಉರೊಡೆಯನಾದ ಕಣ್ಣಿಮಯ್ಯನು ಬಿಕ್ಕಿನ ಕೆರೆಯ ಕರಿಗೌಡನಿಗೆ ಕೂಡಲೂರ ಶಂಕರನಾರಾಯಣದೇವರ ಸಮ್ಮುಖದಲ್ಲಿ ಗದ್ದೆ ದಾನ | ಕವಿಶಾಸಂ.೧.ಹರಪ.೪೦ |

| | | | |
|---|---|---|---|
| ೪೫. ಕ್ರಿ.ಶ ೧೦೩೪<br>ಹಿರೇಮ್ಯಾಗಳಗೇರಿ | -"- | ದಂಡನಾಯಕ ಪೊಬಿಲಮಯ್ಯ<br>ಮೇಗಣಗೆರೆಯ ವಖ್ಖಾಣಜೀಯರ<br>ಶಿಷ್ಯ ಬ್ರಹ್ಮರಾಶಿಜೀಯರ್ಗ್ಗೆನೆಲ್ಲಿಥಿಗೆರೆಯ<br>ಚಂದ್ರಾಭರಣ ಜೀಯರ್ಗೆ ಆದಿತ್ಯದೇವರಿಗೆ<br>ಭೂದಾನ ಕೊಟ್ಟ ಉಲ್ಲೇಖ | -"-.ಹರಪ.೩೦ |
| ೪೬. ಕ್ರಿ.ಶ ೧೦೩೪<br>ಚಿಮ್ಮಹಳ್ಳಿ | -"- | ಮನೆವೆರ್ಗಡೆ ಕೇತೆಯ ನಾಯಕನು<br>ದುಗ್ಗರಾಜ ಪಂಡಿತರ ಕಾಲು ತೊಳೆದು<br>ನೆಲ್ಲುದರೆಯ ಕಲಿದೇವರಿಗೆ ನಂದಾ<br>ದೀವಿಗೆಗೆ, ಮೂಲಸ್ತಾನದ ದೇವರಿಗೆ<br>ಭೂದಾನ ಮತ್ತು ಹೂದೋಟ ಕೊಟ್ಟದ್ದನ್ನು<br>ತಿಳಿಸುತ್ತದೆ. | -"- ಹಗರಿ.೨೮ |
| ೪೭. ಕ್ರಿ.ಶ. ೧೦೩೪<br>ನಿಟ್ಟೂರು | ಉದಯಾದಿತ್ಯ | ಗಾವುಂಡ ಬಿಲ್ಲಯ್ಯ ಅಳುತ್ತಿರುವಾಗ<br>ಬಲ್ಲೇಶ್ವರ ದೇವರಿಗೆ, ಮಠಕ್ಕೆ<br>ಸೆವರಾಶಿ ಭಳನೊಡೆಯ ಬ್ರಹ್ಮಪುರಿ<br>ನಾರಾಯಣನಿಗೆ ಕಾಲನ್ನು ತೊಳೆದು<br>ಊರಗಾವುಂಡ ನೆರೆ ಚಟ್ಟಯ್ಯಬಿಟ್ಟಧರ್ಮ | EC.IX.Dg. 71 |
| ೪೮. ಕ್ರಿ.ಶ. ೧೦೩೪<br>ತಲೆವಾಗಲು | ಉದಯಾದಿತ್ಯ | ತಲವಗೆಯ ಭೋಗೇಶ್ವರ ದೇವರ<br>ಅಂಗರಂಗ ಭೋಗಕ್ಕೆ ಭೂದಾನ ನೀಡಿದೆ | ಕವಿಶಾಸಂ.೧.<br>ಹರಪ.೨೦೬ |
| ೪೯. ಕ್ರಿ.ಶ. ೧೦೩೬<br>ಓರುವಾಯಿ | -"- | ನೊಳಂಬ ಪುತ್ರಿ ಹಾಗೂ ಜಗದೇಕ ಮಲ್ಲ<br>ದೇವ (ಇಮ್ಮಡಿ ಜಯಸಿಂಹ)ನ ಪತ್ನಿಯೂ<br>ಆದ ದೇವಳದೇವಿ ಕಾಲವಶವಾದಾಗ<br>ಅಕೆಯ (ಅಂಗ) ಭಸ್ಮವನ್ನು ಗಂಗೆಯಲ್ಲಿ<br>ಬಿಟ್ಟು ಬಂದ ಮಾಧವ ಷಡಂಗಿ ಮತ್ತು<br>ಕೃಷ್ಣಯ್ಯನಿಗೆ ಭೂದಾನ ಕೊಟ್ಟ ಮತ್ತು<br>ತುಪ್ಪದ ದೇವಯ್ಯಂಗೆ, ಪಂಡಿತರ<br>ಸಿದ್ದಯ್ಯಂಗೆ (ದೇವರಿಗೆ) ನಂದಾದೀವಿಗೆಗೆ,<br>ನೈವೇದ್ಯಕ್ಕೆ ತ್ರಿಕಾಲ ಪೂಜೆಗೆ ಭೂದಾನ<br>ನೀಡಿದ ಉಲ್ಲೇಖವಿದೆ. | -"- ಬಳ್ಳಾರಿ ೪೩,೪೪ |
| ೫೦. ಕ್ರಿ.ಶ. ೧೦೩೬<br>ಮುದಿಹಡದಿ | ಜಗದೇಕಮಲ್ಲ<br>ನೊಳಂಬ ಪಲ್ಲವ<br>ಪೆರ್ಮಾನಡಿ | ಬ್ರಹ್ಮಾಧಿರಾಜನು ಮದಿಹಡದಿಯಲ್ಲಿ<br>ಬ್ರಹ್ಮೇಶ್ವರ ದೇವಾಲಯವನ್ನು ಮಾಡಿಸಿ<br>ಗದ್ದೆ ದಾನ ಮಾಡಿದ | EC.IX.Dg.126 |
| ೫೧. ಮಾನ್ಯರ ಮಸಲ<br>ವಾಡ | -"- | ಮೂಲಸ್ಥಾನದ ಕಲಿದೇವರಿಗೆ ಕೆಲವರು<br>ಭೂದಾನ ನೀಡಿದ ಉಲ್ಲೇಖ | ಕವಿಶಾಸಂ.೧.ಹಡಗ.೬೦ |
| ೫೨. ಕ್ರಿ.ಶ. ೧೦೩೮<br>ಸೋಗಿ | ಇಮ್ಮಡಿ<br>ನೊಳಂಬ | ದೇವರಿಗೆ ದಾನ | -"- ಹಡಗ.೯೬ |
| ೫೩. ಕ್ರಿ.ಶ. ೧೦೩೯<br>ಕಂಚಿಕೇರಿ | ಜಗದೇಕ ಮಲ್ಲ<br>ನೊಳಂಬ | ಗಂಚಿಕೆರೆಯಲ್ಲಿ ಸಂಧಿವಿಗ್ರಹಿ<br>ಹರಿದಾಸಯ್ಯ ಲಿಂಗ ಪ್ರತಿಷ್ಠೆ ಮಾಡಿ<br>ಊರ ಕೆರೆಯ ಕೆಳಗೆ ಖಂಡುಗ<br>ಗದ್ದೆಯನ್ನು ಸರ್ವಾಬ್ಯಂತರ ಸಿದ್ದಿಯಾಗಿ<br>ನೀಡಿದೆ. | -"-ಹರಪ.೨೮ |

| | | | |
|---|---|---|---|
| ೫೪. ಕ್ರಿ.ಶ. ೧೦೪೦ ತುಂಬಿಗೆರೆ | ಇರ್ಮಡಿ ನೊಳಂಬ | ಚಂದಿಮಯ್ಯನು ಮೂಲಸ್ಥಾನ ದೇವರಿಗೆ ಅಲ್ಲಿನ ದೊಡ್ಡ ಕೆರೆಯ ಕೆಳಗೆ ದೇವರ ನಿವೇದ್ಯಕ್ಕೆ ಮತ್ತು ಮಠಕ್ಕಾಗಿ ಭೂದಾನ | –"– ಹಡಗ.೫೮ |
| ೫೫. ಕ್ರಿ.ಶ. ೧೦೪೨ ಆವರಗೆರೆ | –"– | ಬರ್ಮಿಸೆಟ್ಟಿಗೆ ನಿಟ್ಟಾರವೆ, ಕುಳವನೂರುಗಳನ್ನು ದತ್ತಿನೀಡಿದ ಉಲ್ಲೇಖವಿದೆ. | EC.IX.Dg. 19 |
| ೫೬. –"– ಸಿರೂರು | –"– | ಸಿರಿವಾಗಿಲನ್ನು ಮಾಡಿಸಿದ್ದಕ್ಕೆ ದಾಸಯ್ಯನಿಗೆ ಕೆಲವು ತೆರಿಗೆಗಳನ್ನು ಬಿಡುತ್ತಾನೆ. | SII.IX.Pt.1,75 |
| ೫೭. ಕ್ರಿ.ಶ. ೧೦೪೪ ವಡ್ಡನಹಳ್ಳಿ | ನನ್ನಿನೊಳಂಬ | ಮಾರಯ್ಯ ಮತ್ತು ನಾಗಯ್ಯನು ಸೇರಿ ಮೂಲಸ್ಥಾನದೇವರಿಗೆ ಭೂದಾನ ಮಾಡಿದೆ. | EC.IX.Dg.20 |
| ೫೮. –"– ಸಿರಿವಾರ | –"– | ಜೇಷ್ಠರಾಶಿಬಳಾರರಿಗೆ ಮತ್ತುಮಹಾದೇವರಿಗೆ ಭೂದಾನ, ಗಾಣದ ದಾನ ಮಾಡಿದೆ | ಕವಿಶಾಸಂ. ೧.ಬಳ್ಳಾ.೬೩ |
| ೫೯. –"– ಸತ್ತೂರು | –"– | ಕುಪ್ಪರಸನು ಸತ್ತಿಯೂರು ಮಹಾದೇವರಿಗೆ ಭೂದಾನ ನೀಡಿದೆ. | –"– ಹರಪ.೨೯ |
| ೬೦. ಕ್ರಿ.ಶ. ೧೦೪೫ ಮೊರಿಗೇರಿ | –"– | ತಿಕಣ್ಣನು ದೇವಾಲಯಕ್ಕೆ ಮತ್ತು ಮಠದ ವಿದ್ಯಾದಾನಕ್ಕೆಂದು ಶಿವಪುರವೆಂಬ ಗ್ರಾಮವನ್ನು ಅರಸರಿಂದ ಪಡೆದು ದತ್ತಿ ಬಿಡುತ್ತಾನೆ. | –"– ಹಗರಿ ೨೪ |
| ೬೧. –"– ಕೋಗಳಿ | –"– | ನೊಳಂಬಶೆಟ್ಟಿ ತನ್ನ ತಾಯಿ ಪದ್ಮಾವತಿ ಅಬ್ಬೆಯ ಪರೋಕ್ಷವಿನಯಕ್ಕೆ ಛತ್ರ ಮಾಡಿಸಿದ. | –"– ಹಗರಿ ೧೬ |
| ೬೨. ಕ್ರಿ.ಶ. ೧೦೪೫ ಹಾವಿನಹಾಳು ವೀರಾಪುರ | ಪಲ್ಲವ ಪೆರ್ಮಾನಡಿ | ಉದಯಾದಿತ್ಯ ಸಿಂದರಸನು ದೊಂಡವಟ್ಟಿಯೂರಿನ ಮನ್ನೆಯ ಸಾಮ್ಯದ ತೆರಿಗೆಯನ್ನು ಬಿಟ್ಟ ಉಲ್ಲೇಖ. | ಕವಿಶಾಸಂ.೧.ಬಳ್ಳಾ.೪೫ |
| ೬೩. ಕ್ರಿ.ಶ. ೧೦೪೬ ಮೊರಿಗೇರಿ | ನನ್ನಿನೊಳಂಬ | ಮೊರಿಗೇರಿಯ ಊರೊಡೆಯರು ಮತ್ತು ತಿಕ್ಕಣ್ಣ ಪ್ರಮುಖ ಲೆಂಕಸಾಸಿರ್ವರು ಊರಿನ ಮಹಾ ಜನರ ಕೈಯಲ್ಲಿ ದೇವರ ಉಪ ಭೋಗಕ್ಕೆಂದು ಭೂದಾನ ಮಾಡಿದೆ | –"– ಹಗರಿ.೨೭ |
| ೬೪. ಕ್ರಿ.ಶ. ೧೦೪೭ ಅರಕೆರೆ | –"– | ನಾಗೇಶ್ವರ ದೇವರಿಗೆ ಭೂದಾನ ಮಾಡಿದೆ | EC.VIII.Hn.107 |
| ೬೫. ಕ್ರಿ.ಶ. ೧೦೫೦ ಶಿರಸ್ತಹಳ್ಳಿ | ನಾರಸಿಂಘದೇವ | ವಿದ್ಯಾನಿಧಿ ಪಂಡಿತರ ಕಾಲನ್ನು ತೊಳೆದು ಭೂದಾನ ಮಾಡಿದ ಉಲ್ಲೇಖವಿದೆ. ಅಲ್ಲದೆ ಮನೆ, ತೋಟ, ಗಾಣ, ಕೈಗಾಣ ಅಡಕೆ ಮರ ಮುಂತಾದ, ದಾನಗಳನ್ನು ನೀಡಿದೆ. | SII.IX.Pt.1,107 |
| ೬೬. ಕ್ರಿ.ಶ. ೧೦೫೨ ಪುನಬುಘಟ್ಟ | –"– | ನಾರಸಿಂಘನ ಪತ್ನಿ ನೊಳಂಬ ಮಹಾದೇವಿ ಹೊಸಗೆರೆಯ ಮಹಾದೇವರ ಪೂಜೆ ಮುಂತಾದವುಗಳಿಗೆ ಭೂದಾನ ನೀಡಿದೆ. | SII.IX.Pt.1,110 |

| | | | | |
|---|---|---|---|---|
| ೬೭. | -"- ಚಿನ್ನತಂಬುಲ | ವೀರನೊಳಂಬ ಘಟ್ಟಿದೇವ | ನೊಳಂಬರ ಘಟ್ಟಿದೇವನು ಭೋಗೇಶ್ವರ ದೇವಭೋಗಕ್ಕೆ ಕೆಲವು ತೆರಿಗೆಗಳನ್ನು ಬಿಡುತ್ತಾನೆ. | SII.IX.Pt.III |
| ೬೮. | -"- ತಳಕಲ್ಲು | -"- | ತೊಣಕಲಿ ಊರೊಡೆಯ ಚಾವುಂಡಯ್ಯ ಕೆರೆಯನ್ನು ಕಟ್ಟಿಸಿದಕ್ಕೆ ಭೂದಾನ ನೀಡಿದ. | ಕವಿಶಾಸಂ.೧.ಹಗರಿ.೪೧ |
| ೬೯. | ಕ್ರಿ.ಶ. ೧೦೫೪ ನಂದೀಬೇವೂರು | ನೊಳಂಬ ಪಲ್ಲವ ಪೆರ್ಮಾನಡಿ | ಬೇಹೂರ ವಿಪ್ರಮುಖ್ಯರು ಜಿನಪೂಜೆಗೆ ಉಪಾಸದ ಮುನಿಗೆ ಭೂದಾನ ಮಾಡಿದೆ. | -"- ಹರಪ.೧೯೦ |
| ೭೦. | -"- ಅಸಗೋಡು | ನಾರಸಿಂಗದೇವ | ಕುಮಾರ ಚೋರಯ್ಯದೇವ ಮತ್ತು ನಾಗತಿಯರಸರು ಸೇರಿ ತ್ರೈಲೋಕ್ಯ ಕರ್ತರ ಭಟ್ಟರ ಕರಪಾದಗಳನ್ನು ತೊಳೆದು ಸರ್ವ ನಮಶ್ಯವಾಗಿ ತ್ರಿಭೋಗ ಖಣ್ಣಸ್ಪುಟಿತ ನವಕರ್ಮ್ಮ ನಿವೇದ್ಯಾರ್ತ್ಥಕ್ಕೆ ತಪೋಧನ ವಿದ್ಯಾರ್ಥಿಗಳಾಹಾರದಾನಕ್ಕೆ ಭೂದಾನ | EC.9.Ji.10 |
| ೭೧. | -"- ಹಿರೇಮ್ಯಾಗಳ ಗೇರಿ | ಜಗದೇಕಮಲ್ಲ ನೊಳಂಬ ಬ್ರಹ್ಮಾಧಿರಾಜ | ಸ್ವಯಂಭು ದೇವರ ಸೇವೆಗೆ, ಕಂಬದ ನಾಲ್ವರು ಸೂಳೆಯರಿಗೆ, ಮನೆವಣ ಮತ್ತು ಕನ್ನಡಿವಣ ಭೂದಾನ ಕೊಟ್ಟ ಉಲ್ಲೇಖ. | ಕವಿಶಾಸಂ.೧,ಹರಪ.೩೧. |
| ೭೨. | ಕ್ರಿ.ಶ ೧೦೬೮ ಬಾಗುಳಿ | ಜಯಸಿಂಗದೇವ | ಮಹಾದೇವಯ್ಯನು ಬಾಗುಳಿಯ ಮಹಾಜನರಿಗೆ ಸಾಮ್ಯದ ಮನ್ನೆಯನ್ನು ಬಿಟ್ಟ ಉಲ್ಲೇಖ. | ಕವಿಶಾಸಂ.೧. ಹರಪ.೧೩೨ |
| ೭೩. | -"- ಚಿನ್ನತಂಬುಲಂ | -"- | ಚಂದ್ರಭೂಷಣ ಪಂಡಿತರಿಗೆ ನಾರಾಯಣ ದೇವರ್ಗ್ಗೆ ವಿದ್ಯಾದಾನಕ್ಕೆ ಸರ್ವನಮಸ್ಯ ಮಾಡಿ ಭೂದಾನ ನೀಡಿದೆ. ಮನೆ, ತೋಟ, ಗಾಣ, ದೇವರ ಅಂಗಭೋಗಕ್ಕೆ, ಚೈತ್ರಕ್ಕೆ, ಪವಿತ್ರಕ್ಕೆ, ಪೂಜಾರಿಗೆ, ಫಳಿಗೆಯ ಮಾಣಿಯರ್ಗ್ಗೆ, ಪಾಳವಿಗಂಗೆ, ಪಾತ್ರಕ್ಕೆ ಪಾಡುವರ್ಗ್ಗೆ, ವಂಸಕಾರಂಗೆ, ಪಡಿಯರಿಗೆ, ಮಾಲೆಕಾರರಿಗೆ ಪ್ರತ್ಯೇಕ ಭೂದಾನ ಮಾಡಿದ ಉಲ್ಲೇಖವಿದೆ. | SII.IX.Pt.1,133 |
| ೭೪. | ಕ್ರಿ.ಶ.೧೦೭೦ ಪಟ್ಟದಕಲ್ಲು | ಸಿಂಗಣದೇವ | ದೇಶದ ಪಟ್ಟಣಗಳಿಗೆ ಅಧಿಪತಿಯಂತೆ ಇದ್ದ ಕಿಸುವೊಳಲ ಮೂಲಸ್ಥಾನದ ಮಹಾದೇವರ ಉಪಭೋಗಕ್ಕೆ ಸರ್ವಭಾದ ಪರಿಹಾರವಾಗಿ ದಾನ ಮಾಡಿದೆ. | SII.IX.Pt.1,110 |
| ೭೫. | ಕ್ರಿ.ಶ. ೧೦೭೩ ದೊಡ್ಡಬಾಣಗೆರೆ | ಉದಯಾದಿತ್ಯ ದೇವ | ಚೆಲ್ಲುಕೇಶ್ವರ ದೇವರಿಗೆ, ಭೂಧಾನ ಅಣ್ಣಯ್ಯ ಭಟ್ಟರಿಗೆ ಜೋಯಿಸ ಭಾಸ್ಕರಯ್ಯನಿಗೆ ಭೂಧಾನ. | EC.XII.Si.9 |
| ೭೬. | ಕ್ರಿ.ಶ. ೧೦೭೪ ಗುತ್ತಿ | ಜಯಸಿಂಘ ದೇವ | ದಂಡನಾಯಕ ಚಾವುಂಡಯ್ಯನು ಮೂರು ದೇವಾಲಯಗಳನ್ನು ಕಟ್ಟಿಸಿ ವಿಷ್ಣುಗ್ರಿಹ, ಖಂಡಸ್ಪುಟಿತ, ಸ್ನಾನ, ಗಂಧ-ಧೂಪ, ದೀಪ, ನೈವೇದ್ಯ, ಅಷ್ಟಾರ್ಚನೆಗಾಗಿ ಭೂದಾನ ನೀಡಿದ ಉಲ್ಲೇಖವಿದೆ. | SII.VIII.No.369 |

| | | | | |
|---|---|---|---|---|
| ೭೭. | ಕ್ರಿ.ಶ. ೧೦೭೬<br>ಕಲ್ ಕೇರಿ | ವೀರನೊಳಂಬ<br>ಉದಯಾದಿತ್ಯ | ಕಲ್ಕೇರಿಯ ಸೋಮೇಶ್ವರ ದೇವಾಲಯಕ್ಕೆ ಅಲ್ಲಿಯ ತಪೋದನರಿಗೆ, ಶಿಷ್ಯರಿಗೆ, ಪಾವುಳಕ್ಕೆ ಖಂಡಸ್ಫುಟಿತಕ್ಕೆ, ಗಂಧ ದೂಪ ನೈವೇದ್ಯಕ್ಕೆಂದು ಭೂದಾನ ನೀಡುತ್ತಾರೆ. | SII.IX.No.49 |
| ೭೮. | ಕ್ರಿ.ಶ. ೧೦೭೭<br>ಮೊರಬ | ವೀರನೊಳಂಬ<br>ಜಯಸಿಂಗದೇವ | ಘಟಾಂತಕಿಯ ಬಸದಿಯ ದಾನ ಶಾಲೆಗೆ ಕೆರೆಯ ಕೆಳಗಿನ ಭೂಮಿಯ ದಾನ ಮಾಡಿದ ಉಲ್ಲೇಖವಿದೆ. | SII.Pt.2.124 |
| ೭೯. | ಕ್ರಿ.ಶ. ೧೦೮೧<br>ಹಳೆಬನ್ನೂರು | ವೀರನೊಳಂಬ<br>ಜಯಸಿಂಗದೇವ | ಕಪ್ಪಯ್ಯಭಟ್ಟೋಪಾದ್ಯಾಯನು ಬನ್ನಿ ಊರಲ್ಲಿ ದೇವರ ನೈವೇದ್ಯಕ್ಕೆ ಭೂದಾನವನ್ನು ಮಾಡಿದೆ. | MAR.No.54 |
| ೮೦. | ಕ್ರಿ.ಶ. ೧೦೮೨<br>ಕುರ್ತುಕೋಟಿ | –"– | ಕುರಿತ ಕುಂಟೆಯ ಶ್ವಾಮಿಕುಮಾರ ಸೋಮಯಾಜಿ ಭಟ್ಟೋಪಾಧ್ಯಾಯ ಮತ್ತು ಪ್ರಮುಖ ೨೦೦ ಮಹಾಜನರು ಸೇರಿ ದೇವರಿಗೆ ದಾನ ಕೊಟ್ಟಿದೆ. | SII.XI.Pt.2,127 |
| ೮೧. | ಕ್ರಿ.ಶ. ೧೦೮೩<br>ಹಳೆಬನ್ನೂರು | –"– | ಬನ್ನೂರ ಮಹಾಜನರು ಸೋಮೇಶ್ವರ ದೇವರ ನೈವೇದ್ಯಕ್ಕೆ ಭೂದಾನ ನೀಡಿದೆ. | MAR.1929.No.54 |

## ಟಿಪ್ಪಣಿಗಳು

1. SII.IX.Pt.No.17.
2. EC.XI.Dg.56; Cl.33, 34; EC.XII.Si.24. 38.
3. ಕ.ವಿ.ಶಾ.ಸಂ.೧.ಹಗರಿ.೨೪.
4. EC.XI.Hr.33.
5. SII.IX.Pt.1. No.21.
6. EC.X.Bp.4.
7. SII.IX.Pt.1.No.24.
8. EC.IX.Ht.37.
9. SII.IX.Pt.1.No.26.
10. SII.IX.Pt.1.No.34.
11. EC.X.Mb.198.
12. SII.IX.Pt.1.No.27.
13. EC.X.Pt.2.Kl.198.
14. EC.X.Sp.25.
15. EC.IV.No.352.
16. EC.X.Mb.126.
17. SII.IX.Pt.1.No.99.
18. EC.X.Mb.38.
19. EC.X.Mb.208.
20. ಕ.ವಿ.ಶಾ.ಸಂ.೧.ಸಿರಗು.೩೦.
21. ಕ.ವಿ.ಶಾ.ಸಂ.೧.ಹರಪ.೯೭; ೧೩೬.
22. ಕ.ವಿ.ಶಾ.ಸಂ.೧.ಹಗರಿ.೨೭.
23. EC.XII.Si.No.9.
24. EC.XI.Cd.82.
25. ಕ.ವಿ.ಶಾ.ಸಂ.೧.ಹಗರಿ.೪೧.
26. EC.XI.Jl.10.
27. ಕ.ವಿ.ಶಾ.ಸಂ.೧.ಹರಪ.೪.
28. SII.XI.Pt.2.No.124.
29. EC.X.Cb.45.
30. MAR.1930.P.235.
31. SII.XI.Pt.2.No.127.
32. ಕ.ವಿ.ಶಾ.ಸಂ.೧.ಬಳ್ಳಾ.೬೦.
33. ಕ.ವಿ.ಶಾ.ಸಂ.೧.ಹಡಗ.೫೬.
34. EC.XII.Si.38.
35. E.I.XVI.No.7.
36. SII.IX.Pt.1.No.96; ಕ.ವಿ.ಶಾ.ಸಂ.೧.ಹಡಗ.೫೪.

37. ಕ.ವಿ.ಶಾ.ಸಂ.೧.ಹರಪ.೨೧೬.

38. ಕ.ವಿ.ಶಾ.ಸಂ.೧.ಹಡಗ.೯೬.

39. ಕ.ವಿ.ಶಾ.ಸಂ.೧.ಹಗರಿ.೨೪.

40. ಕ.ವಿ.ಶಾ.ಸಂ.೧.ಹಗರಿ.೨೬.

41. EC.XI.JI.10.

42. ಹೆಣ್ಣಿನ ಸ್ಥಾನ ಮಾನ ಒಂದು ಪುನರವಲೋಕನ.

43. ನೊಳಂಬ ಇತಿಹಾಸ ದರ್ಶನ.ಪು.೬೬

44. ಅದೇ ಪು.೬೭.

45. SII.VI.No.557.

46. SII.VI.No.558.P.197.

# ಅಧ್ಯಾಯ – IX

# ಶಾಸನೋಕ್ತ ದೇವಾಲಯಗಳು

ಗಂಗರ ದೇವಾಲಯಗಳನ್ನು ಕುರಿತು ದೇವರಕೊಂಡಾರೆಡ್ಡಿಯವರು ಗಂಗರ ದೇವಾಲಯಗಳ ಬಗ್ಗೆ ಬರೆಯುವಾಗ 'ಮಾನವ ಸಂಘಜೀವಿಯಾದ ಮೇಲೆ ತನ್ನೆಲ್ಲಾ ಪರಿಶ್ರಮವನ್ನು ಒಂದು ಸದುದ್ದೇಶಕ್ಕೆ ವಿನಿಯೋಗಿಸುವ ಪ್ರಯತ್ನ ಮಾಡಿದನು. ತಾನು ಗಳಿಸಿದ ಹೆಚ್ಚಿನ ಸಂಪತ್ತನ್ನು ಒಂದು ಸದುದ್ದೇಶಕ್ಕೆ ಬಳಸಬೇಕೆಂಬ ಗುರಿಯನ್ನು ಅವನು ಹೊಂದಿದ್ದು, ಆ ಸಂಪತ್ತನ್ನು ತನಗೆ ಪ್ರಿಯವಾದ ಕಾರ್ಯಗಳಿಗೆ ವ್ಯಯ ಮಾಡಿದ್ದಾನೆ. ಹೀಗೆ ವ್ಯಯ ಮಾಡುವಾಗ ಅವನ ಉದ್ದೇಶವು ಸಹ ಅವನ ಇಹಪರವನ್ನು ಸಾಧಿಸುವುದಾಗಿತ್ತು. ತನ್ನಲ್ಲಿ ಸಂಪತ್ತು ಇಲ್ಲದಿದ್ದಾಗ ಸಂಪತ್ತಿರುವ ವ್ಯಕ್ತಿಯನ್ನು ಸತ್ಕಾರ್ಯದಲ್ಲಿ ತೊಡಗುವಂತೆ ಪ್ರೇರೇಪಿಸಿರಬಹುದು. ಈ ಅಭಿಪ್ರಾಯ ಎಲ್ಲಾ ಕಾಲಕ್ಕೂ ಸಲ್ಲುವಂತಹದಾಗಿದ್ದು ನೊಳಂಬರ ಕಾಲದಲ್ಲಿ ಇದಕ್ಕಿಂತ ಭಿನ್ನವಾದ ಯೋಚನೆ ಇದ್ದಿರಲಾರದು. ನೊಳಂಬರ ಶಾಸನಗಳನ್ನು ಅವಲೋಕಿಸಿದಾಗ ಅವರು ತಮ್ಮ ಹಿರಿಯರ ಹೆಸರಿನಲ್ಲಿ ಮತ್ತು ತಮ್ಮ ವೈಯುಕ್ತಿಕ ಹೆಸರಿನಲ್ಲಿ 'ತಮಗೆ ಶ್ರೇಯೋಭಿವೃದ್ಧಿ'ಯಾಗಬೇಕೆಂಬ ಉದ್ದೇಶದಿಂದ ದೇವಾಲಯಗಳನ್ನು ಕೆರೆ–ಕಟ್ಟೆಗಳನ್ನು ಕಟ್ಟಿಸಿರುವುದನ್ನು ತಿಳಿಯಬಹುದಾಗಿದೆ.

ನೊಳಂಬ ಪಲ್ಲವರು ಗಂಗರ ಸಾಮಂತರಾಗಿ ಆಳ್ವಿಕೆ ಆರಂಭಿಸಿದರು. ಮುಂದೆ ರಾಷ್ಟ್ರಕೂಟರ, ಕಲ್ಯಾಣದ ಚಾಲುಕ್ಯರ ನಿಷ್ಠಾವಂತ ಮಾಂಡಲೀಕರಾಗಿ ಅವರು ತಮ್ಮ ಅಧಿರಾಜರ ಅನೇಕ ಸಾಂಸ್ಕೃತಿಕ ಹಾಗು ಧಾರ್ಮಿಕ ಚಟುವಟಿಕೆಗಳನ್ನು ಅನುಸರಿಸಿರುತ್ತಾರೆ. ಹೀಗಾಗಿ ನೊಳಂಬರು ತಾವು ನಿರ್ಮಿಸಿದ ದೇವಾಲಯಗಳನ್ನು ರಚಿಸಲು ವಾಸ್ತುಶೈಲಿಯನ್ನು ಅನುಕರಿಸಿದ್ದರೂ ತಮ್ಮದೇ ಆದ ನೊಳಂಬ ಶೈಲಿಯನ್ನು ಕಂಡುಕೊಂಡಿದ್ದಾರೆ. ಬಹಳಷ್ಟು ನೊಳಂಬರ ಶಾಸನಗಳು ದೊರೆತಿದ್ದರೂ ಅವುಗಳಲ್ಲಿ ಶೇಕಡ ೩೫ ರಿಂದ ೪೦ ರಷ್ಟು ಶಾಸನಗಳು ವೀರಗಲ್ಲು, ತುರುಗಾಳೆಗ, ಪೆಂಡಿರುಡೆಯುಚ್ಚು, ಊರಳಿವುಗಳಿಗೆ ಸಂಬಂಧಿಸಿದವಾಗಿವೆ. ಇನ್ನುಳಿದವುಗಳಲ್ಲಿ ಸುಮಾರು ಹತ್ತರಷ್ಟು ಭಾಗ ಯತಿಗಳಿಗೆ, ಕೆರೆಗಳಿಗೆ ಸಂಬಂಧಿಸಿದ ಶಾಸನಗಳಾಗಿವೆ. ಕೆಲವು ಶಾಸನಗಳು ಶಿಥಿಲವಾಗಿ ಅಪೂರ್ಣವಾಗಿವೆ. ಉಳಿದವು ದಾನಶಾಸನಗಳಾಗಿದ್ದು ಅವುಗಳ ಸಂಖ್ಯೆ

ಗಣನೀಯವಾಗಿವೆ. ಈ ದಾನಶಾಸನಗಳಲ್ಲಿ ದೇವಾಲಯದ ರಚನೆಗಳನ್ನು ಉಲ್ಲೇಖಿಸುವ ಶಾಸನಗಳಾದರೂ ಅವುಗಳನ್ನು ಸ್ಪಷ್ಟವಾಗಿ ಇಂತಹದೇ ಗುಂಪಿಗೆ ಸೇರುತ್ತವೆಂದು ವಿಂಗಡಿಸುವುದು ಕಷ್ಟಸಾಧ್ಯ. ಒಂದೇ ಶಾಸನದಲ್ಲಿ ದೇವಾಲಯದ ನಿರ್ಮಾಣವನ್ನು, ಕೆರೆ ಕಟ್ಟಿಸಿದುದನ್ನು ಮತ್ತು ಸ್ಥಾನಿಕರಾಗಿದ್ದ ಯತಿಗಳ, ಭಟಾರರ ಇತ್ಯಾದಿ ವಿಷಯಗಳು ಉಲ್ಲೇಖವಾಗಿರುವುದುಂಟು, ಈ ಕಾರಣದಿಂದ ಒಂದು ಶಾಸನ ಇಂತಹದೇ ಗುಂಪಿಗೆ ಸೇರಿದ್ದೆಂದು ನಿರೂಪಿಸುವುದು ಕಷ್ಟಸಾಧ್ಯವಾಗುತ್ತದೆ.

ನೊಳಂಬರ ಶಾಸನಗಳನ್ನು ಪರಿಶೀಲಿಸಿದಾಗ ದೇವಾಲಯದ ರಚನೆಗೆ ಮತ್ತು ಮೂರ್ತಿ ಶಿಲ್ಪಕ್ಕೆ ಸಂಬಂಧಿಸಿದಂತೆ ಅನೇಕ ವಿವರಗಳು ಉಲ್ಲೇಖಿತವಾಗಿವೆ. ಈ ಶಾಸನಗಳಲ್ಲಿ ದೇವಾಲಯವನ್ನು ಮಾಡಿಸಿದ ವ್ಯಕ್ತಿಯ ಮತ್ತು ಆತನು ನೀಡಿದ ದಾನ ಮುಂತಾದವುಗಳ ಉಲ್ಲೇಖವಿರುತ್ತದೆ. ಕೆಲವು ವೇಳೆ ದೇವಾಲಯ ರಚನೆಯ ವಿವರ ತಿಳಿಯದಿದ್ದರೂ ದೇವಾಲಯಕ್ಕೆ ನೀಡಿದ ದಾನದ ಆಧಾರದ ಮೇಲೆ ಆ ದೇವಾಲಯದ ರಚನಾ ಕಾಲವನ್ನು ಸರಿಸುಮಾರಾಗಿ ಅರಿಯಬಹುದಾಗಿದೆ. ನೊಳಂಬರ ಶಾಸನೋಕ್ತ ಆರಂಭದ ರಾಜರಲ್ಲಿ ಒಬ್ಬನಾದ ಸಿಂಹಪೋತನಿಂದ ನಮಗೆ ದೇವಾಲಯದ ರಚನೆಯ ಉಲ್ಲೇಖಗಳು ದೊರೆಯುತ್ತವೆ. ಮುಂದೆ ಜಗದೇಕಮಲ್ಲ ನೊಳಂಬ ಪಲ್ಲವಪೆರ್ಮಾನಡಿ ಜಯಸಿಂಹನ ಕಾಲದವರೆಗೂ ದೇವಾಲಯದ ರಚನೆಗಳು ಅವ್ಯಾಹತವಾಗಿ ರಚನೆಗೊಂಡಿವೆ.

ದೊಡ್ಡ ಉಳ್ವರ್ತೆಯ ಕ್ರಿ.ಶ.ಸು. ೮೦೦ ರ ಶಾಸನದಲ್ಲಿ ರೂಪುಗಳನ್ನು (ಪ್ರತಿಮೆಗಳನ್ನು) ಹಾಗೂ ಅಮರಾಲಯ ( ದೇವಾಲಯ ) ಮಾಡಿಸಿದಂತೆ ಉಲ್ಲೇಖವಿದೆ.[1] ಚಿಕ್ಕಮಧುರೆಯ ಇದೇ ಕಾಲದ ಸಿಂಗಮುತ್ತರಸನ ಕಾಲದಲ್ಲಿ, ಅವನ ಮಗನ ಆಳ್ವಿಕೆಯ ಕಾಲದಲ್ಲಿ 'ಮಾರಬ್ಬೆ' ಎಂಬುವವಳು ಶಿವಾಲಯವನ್ನು ಕಟ್ಟಿಸಿದಂತೆ ಹೇಳಿದೆ.[2] ಈ ಶಾಸನದಲ್ಲಿ ಜನಸಾಮಾನ್ಯರು ಅದರಲ್ಲೂ ಸಾಮಾನ್ಯಳಾದ ಮಾರಬ್ಬೆ ಎಂಬುವವಳು ಶಿವಾಲಯ ಕಟ್ಟಿಸಿದ್ದನ್ನು ಜನಸಾಮಾನ್ಯರಲ್ಲಿದ್ದ ಧಾರ್ಮಿಕ ಶ್ರದ್ಧೆಯನ್ನು ಇದರಿಂದ ತಿಳಿಯಬಹುದಾಗಿದೆ. ಕ್ರಿ.ಶ.ಸು. ೮೨೦ ರ ಚಿಕ್ಕಮಧುರೆಯ ಶಾಸನದಲ್ಲಿ ಚಾರುಪೊನ್ನೇರನ ಪತ್ನಿ ಗವಣಬ್ಬೆ ಮದರಿಕಲ್ಲಿನಲ್ಲಿ ಗವಣೇಶ್ವರವೆಂಬ ಶಿವಾಲಯವನ್ನು ಮಾಡಿಸಿದಂತೆ ಉಲ್ಲೇಖವಿದೆ.[3] ಬರಗೂರಿನ ಕ್ರಿ.ಶ.೮೭೮ ರ ಶಾಸನದಲ್ಲಿ ಮಹೇಂದ್ರನು ತನಗೆ 'ಬಾಹ್ಯಾಭ್ಯಂತರ ಪ್ರಕೃತಿ ಮಂಡಳಾದೀನ ತಂತ್ರಾವಾಪ ಕಾರ್ಯಸಂಪನ್ನವಪ್ಪ ... ಮಹೇಂದ್ರೇಶ್ವರ ದೇವಾಲಯ'ವನ್ನು ಮಾಡಿಸಿ ಜೀರ್ಣೋದ್ಧಾರಕ್ಕೆ ಭೂದಾನ ಮಾಡಿದ ಉಲ್ಲೇಖವಿದೆ.[4] ಕ್ರಿ.ಶ. ೮೯೨ ರ ಮಹೇಂದ್ರನ ಕಾಲದಲ್ಲಿ ತಗಡೂರಿನಲ್ಲಿ [ಧರ್ಮಪುರಿ] ಚಂದಿಯಣ್ಣ, ನಿಧಿಯಣ್ಣ ಎಂಬುವವರು ಬಸದಿಯನ್ನು ಮಾಡಿಸಿದ ಉಲ್ಲೇಖವಿದೆ.[5] ತಾಯಲೂರಿನ ಕ್ರಿ.ಶ. ೮೯೫ ರ ಶಾಸನದಲ್ಲಿ ನೊಳಂಬಾಧಿರಾಜ ( ಮಹೇಂದ್ರ ) ರಾಜ್ಯಭಾರ ಮಾಡುತ್ತಿದ್ದಾಗ ತೈಲೂರಿನಲ್ಲಿ ಕಲ್ಲದೇಗುಲ

ಮಾಡಿಸಿದಂತೆ ಹೇಳಿದೆ.[6] ಮುಷ್ಪೂರಿನ ಕ್ರಿ.ಶ. ೯೩೩ ರ ಶಾಸನದಲ್ಲಿ ಅಯ್ಯಪದೇವನು ಮುಷ್ಪುಪುರದಲ್ಲಿ ದೇವಾಲಯವನ್ನು 'ಕಂಡ ಪೀಠಪಾಣಿವಟ್ಟ ಸಹಿತವಾಗಿ' ಕಲ್ಲಿನಲ್ಲಿ ಮಾಡಿಸಿದಂತೆ ಹೇಳಿದೆ.[7] ಅಗಳಿಯ ಕ್ರಿ.ಶ.ಸು. ೯೫೦ ರ ಶಾಸನದಲ್ಲಿ ನೊಳಂಬಾಧಿರಾಜನ ಶಾಸನದಲ್ಲಿ ಬಲ್ಲಹನ ದಂಡನಾಯಕ ಕೋಟಯ್ಯನು ವಿಷ್ಣುದೇವಾಲಯವನ್ನು ಕಟ್ಟಿಸಿದಂತೆಯೂ ಅದರ ನಿರ್ವಹಣೆಗೆ ಹನ್ನೆರಡು ಖಂಡುಗ ಭೂಮಿಯನ್ನು ಬಿಟ್ಟಂತೆ ಉಲ್ಲೇಖವಿದೆ.[8] ಆವನಿಯ ಇದೇ ಕಾಲಕ್ಕೆ ಸೇರಿದ ಶಾಸನದಲ್ಲಿ ಏಕವಾಕ್ಯ ಇರಿವನೊಳಂಬನ ಆಳ್ವಿಕೆಯಲ್ಲಿ ಬಸವಯನಂಕ ಭಟ್ಟನು ಮಾನಸ್ತಂಭವನ್ನು ಮಾಡಿಸಿದಂತೆ ಹೇಳಿದೆ.[9] ಕುರುಬೂರಿನ ಕ್ರಿ.ಶ. ೯೫೧ ರ ಶಾಸನದಲ್ಲಿ ಇದೇ ಅರಸನ ಆಳ್ವಿಕೆಯಲ್ಲಿ ಭೀಮಯ್ಯ ಎಂಬುವವನು ( ತಾನು ಕಟ್ಟಿಸಿದ ) ಭೀಮೇಶ್ವರದೇವಾಲಯಕ್ಕೆ ದೇವಭೋಗವಾಗಿ ಖಂಡುಗ ಗದ್ದೆಯನ್ನು ಕೊಟ್ಟ ಉಲ್ಲೇಖವಿದೆ.[10] ಮಧೂಡಿಯ ಕ್ರಿ.ಶ. ೯೫೯ ರ ಶಾಸನದಲ್ಲಿ ದಿಲೀಪರಸನ ಆಳ್ವಿಕೆಯಲ್ಲಿ ಬಿಟ್ಟಯ್ಯ ಮತ್ತು ಚಾವಯ್ಯ ಎಂಬುವವರು ಸತ್ರಾಗ ವಿಷ್ಣುಗೃಹಕ್ಕೆ ಕೆಲವು ದಾನ ಬಿಟ್ಟ ಉಲ್ಲೇಖವಿದೆ.[11] ಭಾರತೀಯರು ಹಿಂದಿನಿಂದಲೂ ಧಾರ್ಮಿಕ ಕರ್ತವ್ಯಗಳನ್ನು ಲೋಪವಾಗದಂತೆ ನಡೆದು ತಮ್ಮ ಶ್ರದ್ಧೆ, ಭಕ್ತಿಗಳನ್ನು ನಿವೇದಿಸಿಕೊಳ್ಳುವಲ್ಲಿ ಬದುಕಿನ ನೆಮ್ಮದಿ ಕಂಡುಕೊಳ್ಳುತ್ತಿದ್ದುದನ್ನು ತಿಳಿಯಬಹುದಾಗಿದೆ.

ಕಂಚುಗಾರ ಬೆಳಗಲ್ಲು ಕ್ರಿ.ಶ. ೯೮೧ ರ ಶಾಸನದಲ್ಲಿ ಇಮ್ಮಡಿ ಮಹೇಂದ್ರನ ಆಳ್ವಿಕೆಯಲ್ಲಿ ಇದಕ್ಕೆ ಮೊದಲೇ ಮೂರು ದೇವಾಲಯಗಳು ಇದ್ದಂತೆಯೂ ಅವುಗಳ ಜೊತೆಗೆ ನೊಳಂಬ ದೊರೆ ವಿಷ್ಣುದೇವರ ಮತ್ತು ಪ್ರಿಯದೇವರ ದೇವಾಲಯಗಳಿಗೆ ಭೂದಾನ ನೀಡಿದ ಉಲ್ಲೇಖವಿದೆ.[12] ಆವನಿಯ ಕ್ರಿ.ಶ. ೯೮೨ ರ ಶಾಸನದಲ್ಲಿ ಇಮ್ಮಡಿ ಪೊಳಲ್ಚೋರನ ಪತ್ನಿ ದೀವಬ್ಬರಸಿಯು ಗತಿಸಿದ ತನ್ನ ಪತಿಯ ಹೆಸರಿನಲ್ಲಿ ಒಂದು ಕೊಳವನ್ನು, ತನ್ನ ಹೆಸರಿನಲ್ಲಿ ಒಂದು ಕೆರೆಯನ್ನು, ಶಿವ ಮತ್ತು ವಿಷ್ಣುದೇವಾಲಯಗಳನ್ನು ಮಾಡಿಸಿದಂತೆ ಉಲ್ಲೇಖಿಸಿದೆ. ಈಕೆ ಮಾಡಿಸಿದ ಕೆರೆಯು ಪೊಱರಮಂಗಲದಲ್ಲಿ ಇದ್ದಂತೆಯೂ, ಆವನಿಯಲ್ಲಿ ಕಟ್ಟಿಸಿದ ವಿಷ್ಣುಗೃಹವನ್ನು ನೊಳಂಬನಾರಾಯಣೇಶ್ವರನೆಂದು ಕರೆದಂತೆ ಶಾಸನದಿಂದ ತಿಳಿಯುತ್ತದೆ.[13] ಅದೇ ಊರಿನ ಇನ್ನೊಂದು ಶಾಸನದಲ್ಲಿಯೂ ದೀವಬ್ಬರಸಿಯು ಮೇಲೆ ಉಲ್ಲೇಖಿಸಿರುವ ದೇವಾಲಯಗಳನ್ನು ಮಾಡಿಸಿದಂತೆ ಸ್ಪಷ್ಟವಾಗಿ ತಿಳಿಸುತ್ತದೆ.[14] ನೇರಲಗುಂಡಿಯ ಕ್ರಿ.ಶ. ೯೯೪ ರ ತ್ರೈಳೋಕ್ಯಮಲ್ಲ ನೊಳಂಬಪಲ್ಲವ ಪೆರ್ಮಾನಡಿದೇವನ ಆಳ್ವಿಕೆಯನ್ನು ಉಲ್ಲೇಖಿಸಿರುವ ಈ ಶಾಸನದಲ್ಲಿ ಹಯನೇರಲಗುಂಡಿಯ ಹಿಟ್ಟಮಯ್ಯನು ಮಲ್ಲಿಕಾರ್ಜುನ ದೇವಾಲಯ ಮಾಡಿಸಿದಂತೆ ಹೇಳಿದೆ.[15] ಬಲ್ಲಕುಂದೆಗ್ರಾಮದ ಕ್ರಿ.ಶ.೧೦೦೮ ರ ಘಟೆಯಂಕಕಾರ (ಚಿತ್ರವೆಡಂಗ)ನ ಆಳ್ವಿಕೆಯ ಶಾಸನದಲ್ಲಿ ಅವನ ನಿಯೋಗಿ ಕೌಶಿಕಗೋತ್ರದ ಮಾಚಿಣಾರ್ಯನ ಮಗ 'ಶ್ರೀಧರಾರ್ಯ್ಯ ಬಲ್ಲಕುಂದೆ ತೀರ್ಥವಸತಿಗೆ ಜೈನಬಿಂಬ'ವನ್ನು ಮಾಡಿಸಿದ ಉಲ್ಲೇಖವಿದೆ.[16]

ಬಾಗಳಿ ಗ್ರಾಮದ ಶಾಸನದಲ್ಲಿ ನೊಳಂಬನ ಭಿನ್ನಹದಂತೆ ಏಚಮ್ಮ ಮಾಡಿದ ಪ್ರತಿಮೆಯ ಉಲ್ಲೇಖವಿದೆ.[17] ಮಲ್ಲಯ್ಯನಗುಡ್ಡದ ಕ್ರಿ.ಶ. ೧೦೧೭ ರ ಶಾಸನದಲ್ಲಿ ಜಗದೇಕಮಲ್ಲ ನೊಳಂಬ ಪಲ್ಲವಪೆರ್ಮಾನಡಿಯು ಮೈಲಾರದೇವರಿಗೆ ಬಲ್ಲಕುಂದೆ-೩೦೦ ರೊಳಗಣ ಪಗರೆತಡಿಯ ಸಿರಿಯೂರನ್ನು ದಾನವಾಗಿ ನೀಡಿದ ಉಲ್ಲೇಖವಿದೆ.[18] ಬಾಗುಳಿ ಗ್ರಾಮದ ಕ್ರಿ.ಶ. ೧೦೧೮ ರ ಶಾಸನದಲ್ಲಿ ಜಗದೇಕಮಲ್ಲ ನೊಳಂಬ ಪಲ್ಲವಪೆರ್ಮಾನಡಿ ಉದಯಾದಿತ್ಯದೇವನು ಪಂಪಾಪುರದ ತೀರ್ಥಕ್ಕೆ ಬಂದು ಬಾಳ್ಗುಳಿಯ ಕಲಿದೇವಸ್ವಾಮಿಗೆ, ಬಿಕ್ಕಿಗನೆಳ್ಪತ್ತರೊಳಗಣ ನಾರಣೋರ್ಝು, ಶಂಕರೋರ್ಝುರ ನಾಚಿಮಯ್ಯನ ಕೆರೆಯೊಳಗೆ ಲೋಗೇಶ್ವರ ಪೊಲದ ಚತುರಾಘಾಟ ಶೀಮೆಯಿಂದೊಳಗುಳ್ಳ ಭೂಮಿಯನ್ನು ದೇವರ ನೈವೇದ್ಯಕ್ಕೆ ನಂದಾದೀವಿಗೆಗೆ, ತಪೋಧನರ ಸತ್ರಕ್ಕೆ, ಪನ್ನಿರ್ವಸ್ಸೂಳೆಯರಿಗೆ, ಸೂಳೆವಾಳಂಗ, ವಂಚಿಗರಿಗೆ, ಪರೆಕಾರರಿಗೆ, ಪಾತ್ರಕ್ಕೆ, ದೇಸಿಗಚ್ಛಾತ್ರರ ಭೋಜನಕ್ಕೆಂದು ತ್ರಿಕಾಲಭೋಗಂ ನಡೆಯುವಂತೆ ಸೋಮಸಿಂಘಭಳಾರರ ಕಾಲು ತೊಳೆದು ದಾನ ನೀಡಿದ ಮತ್ತು ಇದೇ ಶಾಸನದಲ್ಲಿ ಪೆರ್ಗ್ಗಡೆ ನರಸಿಂಘಯ್ಯನು ಸಹ ಕಲಿದೇವಸ್ವಾಮಿಗೆ ದಾನ ನೀಡಿದ ಉಲ್ಲೇಖವಿದೆ.[19] ಬಾಗುಳಿಯ ಇದೇ ಕಾಲದ ಇನ್ನೊಂದು ಶಾಸನದಲ್ಲಿಯೂ ಮೇಲಿನ ಅದೇ ದೇವಸ್ಥಾನಕ್ಕೆ ದಾನ ಕೊಟ್ಟಂತೆ ಹೇಳಿದೆ.[20]

ತುಂಬಿಗೆರೆಯ ಕ್ರಿ.ಶ.ಸು. ೧೦೨೦ ರ ಶಾಸನದಲ್ಲಿ ಜಗದೇಕಮಲ್ಲ ನಿರ್ಮಡಿ ನೊಳಂಬ .. ಪೆರ್ಮಾನಡಿದೇವನು ಆಳುತ್ತಿರುವಾಗ ಪೆರ್ಗ್ಗಡೆ ಚನ್ದಿಮಯ್ಯನಾಯಕನು ದೊರೆಗೆ ಬಿನ್ನಹ ಮಾಡಿ ಬಿಕ್ಕಿಗನೆರ್ಪ್ಪತ್ತರ ಬಳಿಯ ತುಂಬಿಗೆರೆಯ ಮೂಲಸ್ಥಾನ ದೇವರಿಗೆ ದಾನಮಾಡಿದ್ದನ್ನು ತಿಳಿಸುತ್ತದೆ.[21] ಮರೋಳಗ್ರಾಮದ ಕ್ರಿ.ಶ.೧೦೨೪ ರ ಘಟೆಯಂಕಕಾರನ ಪತ್ನಿ ಮಹಾದೇವಿ ಮರೋಳದ ಬಸದಿಗೆ ದಾನಕೊಟ್ಟಂತೆ ಉಲ್ಲೇಖವಿದೆ.[22] ಕಲ್ಕಂಭದ ಕ್ರಿ.ಶ. ೧೦೨೮ ರ ಶಾಸನದಲ್ಲಿ ಜಗದೇಕಮಲ್ಲ ನೊಳಂಬನ ಕಾಲದಲ್ಲಿ ಚಿಹನಪಟ್ಟಿಯ ಮೂಲಸ್ಥಾನ ಮಹಾದೇವರ ಉಲ್ಲೇಖವಿದೆ.[23] ಚಿಮ್ಮಹಳ್ಳಿಯ ಕ್ರಿ.ಶ. ೧೦೩೪ ರ ಇದೇ ಅರಸನ ಕಾಲದ ಶಾಸನದಲ್ಲಿ ಕಲಿದೇವರ ದೇವಾಲಯದ[24] ಮತ್ತು ನಿಟ್ಟೂರಿನ ಇದೇ ಕಾಲದ ಮತ್ತು ಇದೇ ಅರಸನ ಶಾಸನದಲ್ಲಿ ಬಲ್ಲೇಶ್ವರದೇವರ ಉಲ್ಲೇಖವಿದೆ.[25] ತಲವಾಗಿಲುವಿನ ಕ್ರಿ.ಶ. ೧೦೩೪ ರ ಶಾಸನದಲ್ಲಿ ಉದಯಾದಿತ್ಯದೇವ ನೊಳಂಬಪಲ್ಲವ ಪೆರ್ಮಾನಡಿ ಆಳುತ್ತಿರುವಾಗ ಬಿಕ್ಕಿಗನೆರ್ಪತ್ತರೊಳಗಣ ತಲವಗೆಯ ಭೋಗೇಶ್ವರ ದೇವರ ಉಲ್ಲೇಖವಿದೆ.[26] ಹಿರೇಮ್ಯಾಗಳಗೇರಿ ಕ್ರಿ.ಶ. ೧೦೩೪ ರ ಶಾಸನದಲ್ಲಿ ವೆರ್ಗ್ಗಡೆ ಪಲ್ಲವ . . ಬ್ರಹ್ಮಾಧಿರಾಜನು . . . ವಗಾಣಿಜೀಯರ ಶಿಷ್ಯ, ಪ್ರಶಿಷ್ಯಗೆ ಚಂದ್ರಾಭರಣಜೀಯ [ಮೇಗ]ಣಗೆರೆಯಲ್ಲಿ ಸ್ವಯಂಭೂದೇವರ ದೇಗುಲವನ್ನು ಮಾಡಿಸಿದ್ದನ್ನು ಹೇಳಿದೆ.[27]

ಕಂಚಿಕೇರಿ ಶಾಸನದಲ್ಲಿ ಕ್ರಿ.ಶ. ೧೦೩೯ ರ ಜಗದೇಕಮಲ್ಲನ ಕಾಲದಲ್ಲಿ ಸಂಧಿವಿಗ್ರಹಿ ಹರಿದಾಸಯ್ಯನು ಲಿಂಗ ಪ್ರತಿಷ್ಠೆ ಮಾಡಿಸಿದುದನ್ನು ತಿಳಿಸುತ್ತದೆ.[28] ತುಂಬಿಗೆರೆಯ ಕ್ರಿ.ಶ.೧೦೪೦ರ

ಶಾಸನದಲ್ಲಿ ಬಿಕ್ಕಿಗನೆರ್ಪ್ಪತ್ತರ ಬಳಿಂಯ ತುಂಬಿಗೆರೆಯಲ್ಲಿ ಮೂಲಸ್ಥಾನದೇವರಿದ್ದುದು ತಿಳಿಯುತ್ತದೆ.[29] ಸಿರೂರಿನ ಕ್ರಿ.ಶ. ೧೦೪೨ ರ ಶಾಸನದಲ್ಲಿ ಕುಂಚವಡಗದ ದಾಸಯ್ಯನು ಸಿರಿವ್ಪೂರಿನ ಸಿರಿಬಾಗಿಲನ್ನು ಮಾಡಿಸಿದನೆಂದು ಹೇಳುತ್ತದೆ.[30] ಚಿರಸ್ತಹಳ್ಳಿಯ ಕ್ರಿ.ಶ. ೧೦೪೩ ರ ಇಮ್ಮಡಿ ನೊಳಂಬನ ಕಾಲದಲ್ಲಿ ಮಲ್ಲಿಕಯ್ಯನು ಆದಿತ್ಯ, ಮಾತೃಕ, ವಿನಾಯಿಕ ದೇವರುಗಳನ್ನು ಪ್ರತಿಷ್ಠಾಪಿಸಿದ್ದನ್ನು ತಿಳಿಸುತ್ತದೆ.[31] ವಡ್ಡನಹಳ್ಳಿಯ ಕ್ರಿ.ಶ.೧೦೪೪ ರ ಶಾಸನದಲ್ಲಿ ಮೂಲಸ್ಥಾನದ ಕಲಿದೇವಸ್ವಾಮಿಯ ಉಲ್ಲೇಖ ಬಂದಿದೆ.[32] ಇದೇ ಕಾಲದ ಸಿರಿವಾರದ ಶಾಸನದಲ್ಲಿ ನನ್ನಿನೊಳಂಬನ ಕಾಲಕ್ಕೆ ಕಪ್ಪೆಕಲ್ಲ ಊರಿನಲ್ಲಿ ಮಹಾದೇವರ ದೇವಾಲಯವಿದ್ದ ಉಲ್ಲೇಖವಿದೆ.[33] ಇದೇ ಕಾಲದ ಸತ್ತೂರಿನ ಶಾಸನದಲ್ಲಿ ಬನದ ಬಳ್ಳಾರಿಯ ಮತ್ತು ಮಹಾದೇವರ ಉಲ್ಲೇಖವಿದೆ.[34] ಮೊರಿಗೇರಿಯ ಕ್ರಿ.ಶ. ೧೦೪೫ ರ ಶಾಸನದಲ್ಲಿ ತಿಕಣ್ಣ ಮತ್ತು ಲೆಂಕಸಾಸಿರ್ವರು ಸೇರಿ ಮೋರಿಂಗೆರೆಯಲ್ಲಿ ಉದಯಾದಿತ್ಯದೇವನಿಗೆ ಪರೋಕ್ಷವಿನಯವಾಗಿ ೨೪ ಜನರು ಊಟ ಮಾಡುವಂತೆ ಛತ್ರವನ್ನು ಕಟ್ಟಿಸಿ, ನೊಳಂಬೇಶ್ವರ ದೇವಸ್ಥಾನ ಮಾಡಿಸಿ ತಮ್ಮ ಹೆಸರಿನಲ್ಲಿ ಲೆಂಕೇಶ್ವರ ದೇವಾಲಯವನ್ನು ಕಟ್ಟಿಸಿದರೆಂಬುದನ್ನು ತಿಳಿಸುತ್ತದೆ.[35] ಇದೇ ಊರಿನ ಕ್ರಿ.ಶ. ೧೦೪೬ ರ ಶಾಸನದಲ್ಲಿ ತಿಕಣ್ಣ ಮತ್ತು ಲೆಂಕಸಾಸಿರ್ವ್ವರು ವಿರೂಪಾಕ್ಷದೇವರನ್ನು ಮಾಡಿಸಿದಂತೆಯೂ ಬಾವಿಯನ್ನು ತೋಡಿಸಿ, ಅದಕ್ಕೆ ಸೋಮತೀರ್ಥವೆಂದೂ, ಹೂದೋಟವನ್ನು ಮಾಡಿಸಿ ನಂದನವನವೆಂದೂ ಹೆಸರಿಟ್ಟಂತೆ ಹೇಳಿದೆ.[36]

ಅರಕೆರೆಯ ಕ್ರಿ.ಶ. ೧೦೪೭ ರ ಶಾಸನದಲ್ಲಿ ನನ್ನಿನೊಳಂಬನ ಕಾಲದಲ್ಲಿ ಅರಕೆರೆಯಲ್ಲಿ ನಾಗೇಶ್ವರ ದೇವಾಲಯವಿದ್ದುದನ್ನು ತಿಳಿಸುತ್ತದೆ.[37] ಕಲ್ಯಂಭದ ಕ್ರಿ.ಶ. ೧೦೪೯ ಶಾಸನದಲ್ಲಿ ಚಿಯನಪಟ್ಟಿಯಲ್ಲಿ ವಿಷ್ಣುದೇವಾಲಯವಿದ್ದದನ್ನು ತಿಳಿಸುತ್ತದೆ.[38] ಪುನಬುಘಟ್ಟದ ಕ್ರಿ.ಶ. ೧೦೫೨ರ ಶಾಸನದಲ್ಲಿ ಹೊಸಗೆರೆಯಲ್ಲಿ ಮಹಾದೇವರ ದೇವಾಲಯವ್ಪೂ,[39] ಚಿನ್ನತಂಬುಲಂನ ಇದೇ ಕಾಲದ ಶಾಸನದಲ್ಲಿ ಭೋಗೇಶ್ವರದೇವರ ಉಲ್ಲೇಖವನ್ನು ತಿಳಿಸುತ್ತದೆ.[40] ನಂದಿಬೇವ್ಪೂರಿನ ಕ್ರಿ.ಶ. ೧೦೫೪ರ ಶಾಸನದಲ್ಲಿ ಘಟ್ಟಿಯರಸನ ಕಾಲದಲ್ಲಿ ಬಸದಿಯನ್ನು ಮಾಡಿಸಿದ ಉಲ್ಲೇಖವಿದೆ. ಅಸಗೋಡಿನ ಇದೇ ಕಾಲದ ಶಾಸನದಲ್ಲಿ ಕುಮಾರ ಚೋರಯ್ಯದೇವ ಮತ್ತು ನಾಗತಿಯರಸರು ಸೇರಿ ಅಸಗೋಡಿನ ಸ್ವಯಂಭೂದೇವರ ಮತ್ತು ಶಾಸನವನ್ನು ಲಿಂಗದ ಕಲ್ಲಿನಿಂದ ಮಾಡಿಸಿದಂತೆ ತಿಳಿಯುತ್ತದೆ.[41]

ಮೇರುವಿನಿಟ್ಟಿ ಉಮಾಪತಿಯೆ ದಕ್ಷಿಣಭಾಗದ ಭೂಮಿಯಲ್ಲ
ಸಾರಂ ಇದೆಂದಿಯಸಗೋಡಿನೊಳ್ ಇಂತು ಸ್ವಯಂಭೂ ಆಗಿಹರ್
ಹಾರಾಜಿತೇಂದ್ರಿಯರಿಗೆ ಕನಸೊಂದಮೆ ತೋಱೆ ವಿಶೇಷದಿಂದೆ ವಿ
ಸ್ತಾರದೆ ಈಶ್ವರಾಲಯಮನೆತ್ತಿಸಿದರ್ಥರೆಗೇನ್ ಅಪೂರ್ವಮೋ ॥

ವಾರಿಧಿ ಸಮಸ್ತ ವಸುಧಾ
ಧಾರಿಣಿಯೊಳು ನೆಗಳ್ದ ದಿವ್ಯಕರ್ತಾರ ತಪೋ
ಭರಮ್ ಪಿರಿದೆಂದು ಅಹಿ
ಚರಣಾರಾಧನೆಗೆಯ್ದೆ ಪೆಡೆಗಳಂ ಪಸರಿಸುವಂ ॥

ಏವೇಳ್ಪುದಣ್ಣಾ ತಪದ ಈ
ಭಾವನೆಯಂ ಕರ್ಮಬಂಧನಮಂ ಕೆಡಿಸಿಯೆ ಸದ್
ಭಾವದೆ ಶಿವನಂ ಚಿತ್ತದೊಳ್
ಆವಗಮ್ ಅವಯುವದೆ ತಾಳ್ದಿದರ್ ಕರ್ತಾರರ್ ॥

ನಂದಿಬೇವೂರ ಇದೇ ಕಾಲದ ಶಾಸನದಲ್ಲಿ ನೊಳಂಬ ಪಲ್ಲವಪೆರ್ಮ್ಮಾನಡಿ ಮತ್ತು ಜಗದೇಕಮಲ್ಲ ನೊಳಂಬ ಬ್ರಹ್ಮಾಧಿರಾಜ, ಪಂಚಪ್ರಧಾನರು ಊರಿನ ಮಹಾಜನರು ಸೇರಿ ಬಸದಿಯನ್ನು ಮಾಡಿಸಿದ ಉಲ್ಲೇಖವಿದೆ.[42]

ಕುಣ್ಕೋಜಿ ಗ್ರಾಮದ ಕ್ರಿ.ಶ. ೧೦೬೮ ರ ಶಾಸನದಲ್ಲಿ ಚಾಳುಕ್ಯ ನೊಳಂಬಪಲ್ಲವನು ಆಳುತ್ತಿರಲು ನಾಗಿರಬಾವಿಯ ಬಲ್ಲೇಶ್ವರದೇವರನ್ನು ಉಲ್ಲೇಖಿಸಿದೆ.[43] ಚಿನ್ನತಂಬುಲಂ ಗ್ರಾಮದ ಕ್ರಿ.ಶ. ೧೦೬೮ ರ ಶಾಸನದಲ್ಲಿ ಜಯಸಿಂಘದೇವನು ಆಳುತ್ತಿರುವಾಗ ತುಂಬುಳ ಶ್ರೀಸ್ವಯಂಭು ದಕ್ಷಿಣ ಸೋಮೇಶ್ವರದ್ಮೇವರನ್ನು ಹೇಳಿದೆ.[44] ಸೂಡಿ ಗ್ರಾಮದ ಕ್ರಿ.ಶ. ೧೦೬೯ ರ ಶಾಸನದಲ್ಲಿ ನೊಳಂಬಾಧಿರಾಜ ಪೆರ್ಮಾನಡಿ ಸಿಂಗನದೇವನ ಕಾಲದಲ್ಲಿ ಅಚಲೇಶ್ವರ ದೇವಾಲಯುದ ಉಲ್ಲೇಖವಿದೆ.[45] ಕ್ರಿ.ಶ. ೧೦೭೦ ರ ಕಿಸುವೊಳಲ ಶಾಸನದಲ್ಲಿ ಮೂಲಸ್ಥಾನದ ಮಹಾದೇವನ ಉಲ್ಲೇಖ ಬರುತ್ತದೆ.[46] ಉಚ್ಚಂಗಿಂಯ ಇದೇ ಕಾಲದ ಶಾಸನದಲ್ಲಿ ನನ್ನೇಶ್ವರ ಮತ್ತು ತ್ರೈಲೇಶ್ವರದೇವರ ಉಲ್ಲೇಖವಿದೆ.[47]

ಬಾಡಗ್ರಾಮದ ಕ್ರಿ.ಶ. ೧೦೭೩ ರ ಶಾಸನದಲ್ಲಿ ನೊಣಂಬ ಚಕ್ರವರ್ತಿಯು ಮತ್ತು ಗ್ರಾಮದ ಇತರರು ನೊಣಬೇಶ್ವರದೇವರಿಗೆ ದಾನ ನೀಡಿರುವಂತೆ ಹೇಳಿದೆ. ಇಲ್ಲಿ ನೊಣಬೇಶ್ವರ ದೇವಾಲಯವಿದ್ದಿತ್ತೆಂದು ತಿಳಿಯುತ್ತದೆ.[48] ಅನಂತಪುರ ಜಿಲ್ಲೆಯ ಗುತ್ತಿ ತಾಲೂಕಿನ ಕ್ರಿ.ಶ. ೧೦೭೪ರ ಶಾಸನದಲ್ಲಿ ಪೆರ್ಮಾಡಿ ಜಯಸಿಂಗದೇವನ ಕಾಲದಲ್ಲಿ ದಂಡನಾಯಕ ಚಾವುಂಡಯ್ಯನ ತಮ್ಮ ವಿಷ್ಣುಗೃಹ, ರಾಮದೇವರ ಮತ್ತು ಭಗವತೀ ದೇವರುಗಳ ದೇವಾಲಯ ಮಾಡಿಸಿದ.[49] ವಿಷಯವನ್ನು ತಿಳಿಸುತ್ತದೆ. ಕಲ್ಕೇರಿಯ ಕ್ರಿ.ಶ. ೧೦೭೬ ರ ಶಾಸನದಲ್ಲಿ ವೀರನೊಳಂಬ ಮತ್ತು ಅವನ ಪತ್ನಿ ಮಾಳಲದೇವಿಯರು ಕಲ್ಕೆರೆಗೆ ಬಂದು ಶಿವಾಲಯ, ಆದಿತ್ಯಾಲಯ, ಸಾಲೆ, ವಿಷ್ಣುಗೃಹ, ಬುದ್ಧವಿಹಾರ, ಮಹಾಭವನ, ನಾಗಾಲಯ, ಬಾವಿ, ಕೆರೆಯನ್ನು, ದಿಗ್ಗಿಗೆ, ಛತ್ರ, ದೀಪಮಾಲೆಯನ್ನು ಮಾಡಿಸಿದಂತೆ ಉಲ್ಲೇಖಿಸಿದೆ. ಅದೇ ಶಾಸನದಲ್ಲಿ ಸ್ವಯಂಭೂ ಮಳಲ ದಿವ್ಯಲಿಂಗವನ್ನು ರಾಜನ ಪೆರ್ಗ್ಗಡೆ ದಿವಾಕರನು ಮಾಡಿಸಿದಂತೆ ತಿಳಿಸಿದೆ. ಆ ಕಾಲಕ್ಕೆ ಸೋಮೇಶ್ವರ ದೇವಾಲಯವೂ ಕಲ್ಕೆರೆಯಲ್ಲಿದ್ದಂತೆ ಈ ದೇವಾಲಯಗಳನ್ನು ಮಾಡಿಸಿದವರಿಗೆ ರಾಜ 'ನೊಳಂಬ ಪಟ್ಟ' ನೀಡಿದಂತೆ ಉಲ್ಲೇಖವಿದೆ.[50]

ಮೊರಬ ಗ್ರಾಮದ ಕ್ರಿ.ಶ. ೧೦೬೭ ರ ಶಾಸನದಲ್ಲಿ ವೀರನೊಳಂಬ ಜಯಸಿಂಘದೇವನ ಕಾಲದಲ್ಲಿ ಘಟಾನ್ತಕಿಯ ಬಸದಿಯನ್ನು ಉಲ್ಲೇಖಿಸಿದೆ.[51] ಸೋಮಪುರದ ಕ್ರಿ.ಶ. ೧೦೮೦ ರ ಶಾಸನದಲ್ಲಿ ಇದೇ ಅರಸನ ಕಾಲದಲ್ಲಿ ಛತ್ರ, ಅರವಂಟಿಗೆ, ದಿಗ್ಘಿಗೆ, ಸಾಲೆ ನನ್ದನಂ, ಬಾವಿ, ತಟಾಕ, ಅಗ್ಗಿಟಗೆ, ಆರವೆ, ವಿಷ್ಣುಗೃಹ, ಶಿವಾಲಯ ಮುಂತಾದವುಗಳನ್ನು ನೊಳಂಬನ ರಾಯಭಾರಿ ಮಣ್ಣೆಯರ ಈಸಪಯ್ಯ [ಈಶ್ವರಪ್ಪಯ್ಯ] ದಂಡನಾಯಕನು ಮಾಡಿಸಿದ್ದನ್ನು ತಿಳಿಸುತ್ತದೆ. ನರಗುಂದದ ಮೆಕ್ಕೆಗೇರಿಯಲ್ಲಿ 'ಬಾವಿ, ಶಿವಾಲಯ, ಸಭಾಸದನ, ಸಿರಿಬಾಗಿಲು, ದೇವಗೃಹ, ಬಾದೂಬೆ, ಶತ್ರಶಾಲೆ, ದೇವಳಗಳನ್ನು' ನಿರ್ಮಿಸಿದಂತೆ ಉಲ್ಲೇಖವಿದೆ.[52]

ಹಳೆಬನ್ನೂರು ಗ್ರಾಮದ ಕ್ರಿ.ಶ. ೧೦೮೧ ರ ಶಾಸನದಲ್ಲಿ ವೀರನೊಳಂಬ ಜಯಸಿಂಗದೇವನ ಕಾಲದಲ್ಲಿ ಬನ್ನಿವೂರಲಿ ಸೋಮೇಶ್ವರದೇವರ ಪ್ರತಿಷ್ಠೆ ಮಾಡಿಸಿದ ಉಲ್ಲೇಖವಿದೆ.[53] ಕುರ್ತುಕೋಟಿಯ ಕ್ರಿ.ಶ. ೧೦೮೨ ರ ಶಾಸನದಲ್ಲಿ ಇದೇ ಅರಸನ ಕಾಲದಲ್ಲಿ 'ಶೀಮದಣುವೇಶ್ವರ' ದೇವರ ಉಲ್ಲೇಖವಿದೆ.[54]

ಮೇಲಿನ ಎಲ್ಲಾ ಶಾಸನಗಳಿಂದ ಆ ಕಾಲದ ಜನಜೀವನದಲ್ಲಿ ದೈವ, ದೇವರು, ಧರ್ಮ, ದಾನ, ದತ್ತಿ ಮುಂತಾದ ಧಾರ್ಮಿಕ ಕಾರ್ಯಗಳು ಹಾಸು ಹೊಕ್ಕಾಗಿದ್ದವೆಂದು ತಿಳಿಯಬಹುದು.

## ವಾಸ್ತು

ಭಾರತದಲ್ಲಿ ರಚಿತವಾಗಿರುವ ವಾಸ್ತುರಚನೆಗಳನ್ನು ಅವುಗಳ ರಚನಾ ರೀತಿಯಿಂದ ವಿದ್ವಾಂಸರು ಸ್ಥೂಲವಾಗಿ ನಾಗರ, ವೇಸರ ಮತ್ತು ದ್ರಾವಿಡವೆಂದು ವಿಂಗಡಿಸಿರುತ್ತಾರೆ. ಇವುಗಳಲ್ಲಿ ನಾಗರ ರೀತಿಯ ಶೈಲಿಯು ಉತ್ತರ ಭಾರತದಲ್ಲಿಯೂ, ದ್ರಾವಿಡ ಶೈಲಿಯು ದಕ್ಷಿಣ ಭಾರತದಲ್ಲಿಯೂ ಹೆಚ್ಚು ಪ್ರಚಾರದಲ್ಲಿವೆ. ವೇಸರ ಶೈಲಿಯು ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ನಾಗರ ಮತ್ತು ದ್ರಾವಿಡ ಶೈಲಿಗಳ ಮಿಶ್ರಣದಂತಿದೆ. ಈ ವಿಭಾಗಗಳಲ್ಲದೆ ರಾಜಕೀಯ ವಂಶಗಳ ಹೆಸರಿನಲ್ಲಿಯೂ ಗುರುತಿಸಲಾಗುತ್ತಿದೆ. ಬಾದಾಮಿ ಚಲುಕ್ಯ, ಕಲ್ಯಾಣ ಚಾಳುಕ್ಯ, ಪಲ್ಲವ, ಚೋಳ, ರಾಷ್ಟ್ರಕೂಟ, ವಿಜಯನಗರ ಎಂದೂ ವಿಂಗಡಿಸಲಾಗಿದೆ. ಈ ಬಗೆಯ ವಿಂಗಡಣೆಗಳು ಆಯಾ ರಾಜವಂಶಗಳು ಬಳಸಿರುವ ಶಿಲೆ, ಕಲೆಯ ಲಕ್ಷಣಗಳು ಇವುಗಳ ಅಧಾರದ ಮೇಲೆ ಮಾಡಲಾಗುತ್ತದೆ. ಈ ಲಕ್ಷಣಗಳನ್ನು ಹೇಳುವಾಗ ವ್ಯತ್ಯಾಸದ ಅಂತರ ತೀರಾ ಕಡಿಮೆಯಿರುತ್ತದೆ. ಇಂತಹ ಕಡೆ ಸೂಕ್ಷ್ಮವಾದ ಅವಲೋಕನದಿಂದ ವಿಂಗಡಣೆಯನ್ನು ಗಮನಿಸಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ನೊಳಂಬರ ವಾಸ್ತುಕಲೆಯನ್ನು ಅಭ್ಯಾಸ ಮಾಡುವಾಗ ನೊಳಂಬರ ನೆರೆಯ ರಾಜ್ಯಗಳಾದ ಗಂಗವಾಡಿ ಮತ್ತು ಅಧಿರಾಜರಾದ ರಾಷ್ಟ್ರಕೂಟ ಹಾಗೂ ಇನ್ನೊಂದು

ನೆರೆಯ ರಾಜ್ಯವಾದ ಪಲ್ಲವರ ಶಿಲ್ಪವನ್ನು ಅಭ್ಯಸಿಸಬೇಕಾಗುತ್ತದೆ. ಆದರೆ ನೊಳಂಬರು ರಾಷ್ಟ್ರಕೂಟರ ಸಾಮಂತರಾದ್ದರಿಂದ ಅವರ ವಿರೋಧಿಗಳಾಗಿದ್ದ ಪಲ್ಲವರಿಂದ ಪ್ರಭಾವಿತರಾಗಿರುವುದಿಲ್ಲ.

ನೊಳಂಬರು ಗಂಗರ ಸಾಮಂತರಾಗಿ, ಸಂಬಂಧಿಕರಾಗಿ ರಾಜ್ಯಭಾರ ಆರಂಭಿಸಿದ ಆರಂಭದಲ್ಲಿ ಗಂಗರ ರಾಜ್ಯದ ಭಾಗಗಳಿಗೆ ಅಧಿಪತಿಗಳಾಗಿದ್ದವರು. ಹಾಗೂ ಗಂಗರ ಪ್ರಭಾವಕ್ಕೆ ಒಳಗಾಗಿದ್ದವರು. ದೇವರಕೊಂಡಾರೆಡ್ಡಿಯವರು ತಮ್ಮ ಕೃತಿ 'ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ'ದಲ್ಲಿ ನೊಳಂಬರ ಕಾಲದಲ್ಲಿ, ನೊಳಂಬ ಅರಸರ ಹಾಗೂ ಅವರ ಅಧಿಕಾರಿಗಳಿಂದ ರಚಿತವಾದ ಅರಳಗುಪ್ಪೆ, ಆವನಿ, ನಂದಿ, ನೊಣವಿನಕೆರೆ, ಬರಗೂರು, ಹೆಬ್ಬಟ, ಬೇತಮಂಗಲ ಮುಂತಾದ ಕಡೆಯ ದೇವಾಲಯಗಳ ವಾಸ್ತುರಚನೆಗಳನ್ನು ಗಂಗರ ದೇವಾಲಯಗಳೆಂದೇ ಗುರುತಿಸಿರುತ್ತಾರೆ. ಹೀಗೆ ಗುರುತಿಸಲು ಕಾರಣ ಹಿಂದೆ ಹೇಳಿದಂತೆ ನೊಳಂಬರು ಗಂಗರ ಸಾಮಂತರಾಗಿದ್ದುದು. ಅಲ್ಲದೆ ನೊಳಂಬರಿಗಿಂತ ಮೊದಲು ಈ ಪ್ರದೇಶವು ಗಂಗರ ಆಳ್ವಿಕೆಗೆ ಸೇರಿತ್ತು. ಆದರೆ ದೇವಾಲಯ ರಚನೆಗಳನ್ನು, ಶಿಲ್ಪಗಳನ್ನು ಸ್ವಲ್ಪ ಸೂಕ್ಷ್ಮವಾಗಿ ಅವಲೋಕಿಸಿದಾಗ ಗಂಗರ ರಚನೆಗಳಿಗಿಂತ, ಶಿಲ್ಪಗಳಿಗಿಂತ ಭಿನ್ನವಾಗಿರುವುದನ್ನು ಇವರ ರಚನೆಗಳಲ್ಲಿ ಗಮನಿಸಬಹುದಾಗಿದೆ.

೧೯೨೯ರ ಎಂ.ಎ.ಆರ್. ಸಂಪುಟದಲ್ಲಿ ಅದರ ಸಂಪಾದಕರು ಚಿತ್ರದುರ್ಗದ ಸಿದ್ಧೇಶ್ವರ ದೇವಾಲಯದ ಬಗ್ಗೆ ಬರೆಯುತ್ತಾ ಅಲ್ಲಿನ ನಂದಿಶಿಲ್ಪ, ಉಬ್ಬುಕಂಬಗಳು, ಬೋದಿಗೆಗಳು, ಅಲಂಕರಣ, ಸಿಂಹಲಲಾಟಗಳು ಮುಂತಾದವುಗಳನ್ನು ಗಮನಿಸಿ ಇವು ಹೊಯ್ಸಳರಿಗಿಂತ ಪೂರ್ವದ್ದೆಂದೂ ಅಥವಾ ನೊಳಂಬರ ಕಾಲದೆಂದು ಅಭಿಪ್ರಾಯಪಟ್ಟಿರುತ್ತಾರೆ. (ಪು.೧೯-೨೦) ಇದೇ ವರ್ಷದ ವರದಿಯಲ್ಲಿ ಐಮಂಗಲದ ಬಗ್ಗೆ ಬರೆಯುತ್ತಾ, ಅಲ್ಲಿ ದೊರೆತಿರುವ ನೊಳಂಬರ ಶಾಸನದಿಂದ ನೊಳಂಬರ ಅವಶೇಷಗಳು ಆ ಊರಿನಲ್ಲಿರಬೇಕೆಂದು ತೀರ್ಮಾನಿಸಿರುತ್ತಾರೆ. (ಪು.೧೩.೧೪). ೧೯೩೦ರ ವರದಿಯಲ್ಲಿ ಆವನಿಯ ರಾಮೇಶ್ವರ ದೇವಾಲಯವನ್ನು ಬಹುಶಃ ದೀವಬ್ಬರಸಿ ಕಟ್ಟಿಸಿರಬೇಕೆಂಬ ಅಭಿಪ್ರಾಯಪಟ್ಟಿರುತ್ತಾರೆ. ಹಾಗೆಯೇ ಬೆಟ್ಟದ ಮೇಲೆ ಇರುವ ಸೀತಾದೇವಾಲಯದ ವಾಸ್ತು ವಿವರಗಳನ್ನು ನೀಡಿ ದೇವಾಲಯದ ಬಾಗಿಲವಾಡ ನೊಳಂಬರ ಕಾಲದೆಂದು ಹೇಳಿರುತ್ತಾರೆ. ಜಂಟಿಗ ರಾಮೇಶ್ವರದ ಬೆಟ್ಟದ ಮೇಲಿನ ಗಣೇಶ ದೇವಾಲಯ, ಮಹಾಬಲೇಶ್ವರ, ಅರ್ಕೇಶ್ವರವಲ್ಲದೆ ಜಂಟಿಗ ರಾಮೇಶ್ವರ ದೇವಾಲಯವನ್ನು ಇದೇ ಕಾಲದೆಂದು ಹೇಳಿರುತ್ತಾರೆ. ಜಂಟಿಗ ರಾಮೇಶ್ವರದ ಸುಕನಾಸಿ, ಮತ್ತು ಆದರ ಬಾಗಿಲವಾಡದ ಅಲಂಕರಣ, ದೇವಾಲಯದ ಹೊರಗಿನ ಅಲಂಕರಣ, ಉಬ್ಬುಕಂಬಗಳು ಇವು ನೊಳಂಬರ ಕಾಲದವೆಂದು ಹೇಳಬಹುದೆಂದು ಸೂಚಿಸಿರುತ್ತಾರೆ. ೧೯೩೨ ರ ವರದಿಯಲ್ಲಿ ನಂದಿಯ ಭೋಗನಂದೀಶ್ವರ ದೇವಾಲಯದ ಆವರಣದಲ್ಲಿರುವ ಅರುಣಾಚಲೇಶ್ವರ

ದೇವಾಲಯವನ್ನು ನೊಳಂಬರು ಭೋಗನಂದಿ ದೇವಾಲಯದ ಅನುಕರಣ ರೀತಿಯಲ್ಲಿ ಕಟ್ಟಿದ್ದಾರೆಂಬ ಅಭಿಪ್ರಾಯವನ್ನು ಅಲ್ಲಿ ದೊರೆತ ನೊಳಂಬರ ಶಾಸನದ ಆಧಾರದ ಮೇಲೆ ಸೂಚಿಸಿರುತ್ತಾರೆ. (ಪು.೬೭) ೧೯೩೫ ರ ವರದಿಯಲ್ಲಿ ಆವನಿಯ ಶತ್ರುಘ್ನೇಶ್ವರ, ಲಕ್ಷ್ಮಣೇಶ್ವರ, ಮಾನಸ್ತಂಭ ಇವು ನೊಳಂಬರ ರಚನೆಗಳೆಂದು ಅಲ್ಲಿ ದೊರೆತಿರುವ ಶಾಸನಗಳ ಆಧಾರದ ಮೇಲೆ ತಿಳಿಸಿರುತ್ತಾರೆ. ಹಾಗೆಯೇ ೧೯೩೦ ರ ವರದಿಯಲ್ಲಿ ರಾಮೇಶ್ವರ ದೇವಾಲಯವು ನೊಳಂಬ ರಚನೆಯೆಂಬ ಹೇಳಿಕೆಯ ಬಗ್ಗೆ ಅನುಮಾನವನ್ನು ವ್ಯಕ್ತಪಡಿಸಿರುತ್ತಾರೆ. ೧೯೩೭ ರ ವರದಿಯಲ್ಲಿ ಹೆಗ್ಗಡದೇವನಕೋಟೆ ತಾಲ್ಲೂಕು ಕಿತ್ತೂರಿನ ರಾಮೇಶ್ವರ ದೇವಾಲಯದ ಚಾಮುಂಡಾ ಶಿಲ್ಪವನ್ನು ನೊಳಂಬ ಶಿಲ್ಪಕ್ಕೆ ಹೋಲಿಸಿರುತ್ತಾರೆ. (ಪು.೭)

೧೯೩೯ರ ಮೈಸೂರು ಅರ್ಕ್ಯಾಲಾಜಿಕಲ್ ವರದಿಯಲ್ಲಿ ಅದರ ಸಂಪಾದಕರು ನೊಣವಿನಕೆರೆ ಮತ್ತು ಕಂಬದಹಳ್ಳಿಯ ದೇವಾಲಯಗಳ ಬಗ್ಗೆ ಬರೆಯುವಾಗ ಈ ವಾಸ್ತುರಚನೆಗಳು ಪ್ರಾಚೀನವಾಗಿದ್ದು ಗಮನಾರ್ಹವಾಗಿವೆಯೆಂದು ಅಭಿಪ್ರಾಯಪಟ್ಟಿದ್ದರು. ಇವು ಈ ಪ್ರದೇಶದಲ್ಲಿ ವಿಶಿಷ್ಟವಾಗಿದ್ದು ನೊಳಂಬರಿಂದ ರಚಿತವಾಗಿವೆಯೆಂಬ ಅಭಿಪ್ರಾಯವನ್ನು ಹೊಂದಿದ್ದರು. ಆದರೆ ಉಳಿದವುಗಳಿಗಿಂತ ಅವು ಹೇಗೆ ಭಿನ್ನವೆಂಬುದನ್ನು ತೋರಿಸಿರಲಿಲ್ಲ. ೧೯೪೦ ರ ಎಂ.ಎ.ಆರ್. ಸಂಪುಟದಲ್ಲಿ ಯೋಗಾನರಸಿಂಹ ದೇವಾಲಯದ ಕಂಬಗಳನ್ನು ನೊಣವಿನಕೆರೆಯ ನೊಣಬೇಶ್ವರ ದೇವಾಲಯದ ಕಂಬಗಳಿಗೆ ಹೋಲಿಸಿದ್ದಾರೆ. ೧೯೪೭-೫೬ ರ ವರದಿಯಲ್ಲಿ ತುರವನೂರಿನ ರಾಮಲಿಂಗ ದೇವಾಲಯವನ್ನು ವಿವರವಾಗಿ ಅಧ್ಯಯನ ಮಾಡಿ ಅಲ್ಲಿನ ನಂದಿ ಮತ್ತು ಲಿಂಗದ ಆಧಾರದ ಮೇಲೆ ಅದನ್ನು ನೊಳಂಬ ಕಾಲದ್ದೆಂದು ಗುರುತಿಸಿರುತ್ತಾರೆ. (ಪು.೩೫)

ಈ ಮೇಲಿನ ವಿವರಗಳು ಆರಂಭದ ಪ್ರಯತ್ನಗಳು ಇಲ್ಲಿನ ಯಾವುದೇ ವಂಶದ ದೇವಾಲಯಗಳನ್ನು ವಿವರವಾಗಿ ಅಧ್ಯಯನ ಮಾಡುವ ಉದ್ದೇಶವಿರಲಿಲ್ಲ. ತಾವು ಗಮನಿಸಿದ ಅಂಶಗಳನ್ನು ಓದುಗರ ಮುಂದಿಡುವುದಾಗಿತ್ತು ೧೯೫೮ ರಲ್ಲಿ Barrett Douglas ಎಂಬುವವರು ಹೇಮಾವತಿ ಎಂಬ ಕಿರುಹೊತ್ತಿಗೆಯನ್ನು ಪ್ರಕಟಿಸಿ ಅಲ್ಲಿನ ದೇವಾಲಯಗಳ ಪರಿಚಯ ಮಾಡಿಕೊಟ್ಟಿದ್ದರು. ಕ್ರಿ.ಶ. ೧೯೬೪ ರಲ್ಲಿ ಸಿ. ಶಿವರಾಮಮೂರ್ತಿಯವರು ಮದರಾಸು ಮ್ಯೂಸಿಯಂ ಮೂಲಕ ಪ್ರಕಟಿಸಿದ 'Nolamba Sculptures in the Madras Govt Museum' ಎಂಬ ಪುಸ್ತಕವು ಪ್ರಮುಖವಾದದ್ದು. ಇದಲ್ಲದೆ ಈ ಹಿಂದೆ ಬರೆದಿದ್ದ Indian Sculpture ಎಂಬ ಪುಸ್ತಕದಲ್ಲಿ ನೊಳಂಬ ಶಿಲ್ಪದ ಬಗ್ಗೆ ಸ್ವಲ್ಪ ಬರೆದು ವಿದ್ವಾಂಸರ ಗಮನ ಸೆಳೆದಿದ್ದರು. ೧೯೭೬ರಲ್ಲಿ ನೊಳಂಬ ಇತಿಹಾಸ ದರ್ಶನ ಎಂಬ ಪುಸ್ತಕವನ್ನು ನೊಳಂಬ ಇತಿಹಾಸ ಪರಿಷತ್ತಿನವರು ಪ್ರಕಟಿಸಿ, ಅದರಲ್ಲಿ ಒಂದಿಷ್ಟು ಭಾಗವನ್ನು ನೊಳಂಬರ ವಾಸ್ತುಶಿಲ್ಪಕ್ಕೆ ಮೀಸಲಿಟ್ಟು ಆ ಮೂಲಕ ನೊಳಂಬರ ವಾಸ್ತು ಮತ್ತು ಶಿಲ್ಪದ ವಿವರಗಳನ್ನು ಸ್ವಲ್ಪಮಟ್ಟಿಗೆ ವಿಶ್ಲೇಷಣೆ ಮಾಡಿರುವುದನ್ನು ಗಮನಿಸಬಹುದು, ಬಹಳಷ್ಟು ವಿವರಗಳು ಎಂ.ಎ.ಅರ್. ವರದಿಗಳನ್ನು ಆಧರಿಸಿದಂತಹವು.

೧೯೮೦ ರಲ್ಲಿ ಎಂ.ಎಸ್. ಕೃಷ್ಣಮೂರ್ತಿಯವರ 'The Nolambas' ಎಂಬ ಪುಸ್ತಕವು ಮೊದಲ ಬಾರಿಗೆ ನೊಳಂಬರ ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ಒಳಗೊಂಡ ಗ್ರಂಥ. ಇದರಲ್ಲಿ ವಾಸ್ತು ಮತ್ತು ಶಿಲ್ಪಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಅಧ್ಯಾಯವೇ ಇದ್ದು, ಅನೇಕ ಸ್ಥಳಗಳಲ್ಲಿನ ನೊಳಂಬರ ದೇವಾಲಯಗಳ ಪರಿಚಯವನ್ನು ನೀಡಿರುವುದೇ ಅಲ್ಲದೆ ನೊಳಂಬ ದೇವಾಲಯದ ವೈಶಿಷ್ಟ್ಯಗಳನ್ನು ಪರಿಚಯಿಸಿದ್ದಾರೆ.

ಎಂ.ಎಸ್. ಕೃಷ್ಣಮೂರ್ತಿಯವರು ನೊಳಂಬ ದೇವಾಲಯಗಳ ಒಳರಚನೆಯನ್ನು ಹೀಗೆ ಗುರುತಿಸುತ್ತಾರೆ.

೧) ಗರ್ಭಗೃಹವು ಚೌಕಾಕಾರವಾಗಿದ್ದು ಒಳಗೆ ಲಿಂಗವಿರುತ್ತದೆ.

೨) ಗರ್ಭಗೃಹದ ಮುಂದಿನ ಅರ್ಧ ಮಂಟಪವು ಎರಡು ಅಥವಾ ನಾಲ್ಕು ಕಂಬಗಳನ್ನು ಹೊಂದಿರುತ್ತದೆ. ಅಥವಾ ಕೆಲವೊಮ್ಮೆ ಕಂಬಗಳಿರುವುದಿಲ್ಲ.

೩) ಅರ್ಧಮಂಟಪದ ಮುಂದಿನ ನವರಂಗ ಮಂಟಪವು ಸಾಮಾನ್ಯವಾಗಿ ನಾಲ್ಕು ಕಂಬಗಳನ್ನು ಹೊಂದಿರುತ್ತದೆ.

೪) ಮುಖ ಮಂಟಪವು ನಾಲ್ಕು ಕಂಬಗಳನ್ನು ಒಳಗೊಂಡಿರುತ್ತದೆ. ಹಾಗೂ

೫) ದೇವಾಲಯದ ಮುಂದೆ ನಂದಿಗಾಗಿ ಪ್ರತ್ಯೇಕ ಮಂಟಪವನ್ನು ರಚಿಸಿರುತ್ತಾರೆ.

ಈ ಮೇಲಿನ ಅಂಶಗಳಲ್ಲಿ ದೇವಾಲಯವು ಶಿವನಿಗಾಗಿ ಅಥವಾ ನಿಂತ ವಿಷ್ಣುವಿಗಾಗಿ ರಚಿತವಾಗಿದ್ದರೆ ಅದರ ಗರ್ಭಗೃಹ ಚೌಕಾಕಾರವಾಗಿರುತ್ತದೆ. ಇದು ಬಹುತೇಕ ರಾಜವಂಶಗಳ ದೇವಾಲಯಗಳಲ್ಲಿಯೂ ಇದೇ ರೀತಿ ಇರುತ್ತದೆ. ಅದರೆ ಇದು ಆ ದೇವಾಲಯದ ಮೇಲು ರಚನೆಗೆ ಅನುಗುಣವಾಗಿ ಚಿಕ್ಕದು ಅಥವಾ ದೊಡ್ಡದಾಗಿರುತ್ತದೆ. ಹೇಮಾವತಿಯ ದೊಡ್ಡಪ್ಪನ ದೇವಾಲಯದ ಗರ್ಭಗೃಹ ಬಹು ಚಿಕ್ಕದಾಗಿದೆ. ಆವನಿಯ ಲಕ್ಷ್ಮಣೇಶ್ವರದಲ್ಲಿ ವಿಶಾಲವಾಗಿದೆ. ಹೇಮಾವತಿಯ ದೊಡ್ಡೇಶ್ವರ ದೇವಾಲಯದ ಗರ್ಭಗೃಹದ ಗೋಡೆ ಬಹು ಮಂದವಾಗಿರುವುದರಿಂದ ಚಿಕ್ಕದಾಗಿದೆ. ಗರ್ಭಗೃಹದ ಒಳಗೆ ಉಬ್ಬು ಕಂಬಗಳಾಗಲೀ, ಕಂಬಗಳಾಗಲೀ ಹೊರಗೆ ಬಳಸಿಲ್ಲ. ಆದರೆ ಆವನಿಯ ಲಕ್ಷ್ಮಣೇಶ್ವರದ ದೇವಾಲಯದಂತಹ ವಿಶಾಲ ಗರ್ಭಗೃಹ ಹೊಂದಿರುವ ಕಡೆ ಗರ್ಭಗೃಹದ ಒಳಗೋಡೆಗೆ ಹೊಂದಿಕೊಂಡಂತೆ ಹಾಗೂ ಮೇಲಿನ ಶಿಖರದ ಭಾರವನ್ನು ಹೊರಲು ಅನುಕೂಲವಾಗುವಂತೆ ನಾಲ್ಕು ಮೂಲೆ ಕಂಬಗಳ ಜೊತೆಗೆ ಮಧ್ಯೆ ಮೂರು ಕಂಬಗಳನ್ನು ಪ್ರತ್ಯೇಕವಾಗಿ ಬಳಸಲಾಗಿದೆ.

ಧರ್ಮಪುರಿಯ ಕಾಮಾಕ್ಷಿ ದೇವಾಲಯದ ಅಂತರಾಳವು ಗರ್ಭಗೃಹಕ್ಕಿಂತ ದೊಡ್ಡದಾಗಿದೆ. ಮತ್ತು ಅಂತರಾಳದ ಗೋಡೆ ಚಿಕ್ಕದಾಗಿರುವುದರಿಂದ ಮೇಲಿನ ಭಾರ ಹೊರಲು ಸಾಧ್ಯವಾಗುವಂತೆ

ಗೋಡೆ ಅಂಚಿನಲ್ಲಿ ಎರಡೂ ಕಡೆ ನಾಲ್ಕು ಕಂಬಗಳನ್ನು ಪ್ರತ್ಯೇಕವಾಗಿ ಸೇರಿಸಲಾಗಿದೆ. ನಂದಿಯ ಅರುಣಾಚಲೇಶ್ವರ ದೇವಾಲಯವು ನೊಳಂಬರ ಕಾಲದ್ದೆಂದು ಹೇಳಿದ್ದರೂ ಗರ್ಭಗೃಹ ಹಾಗೂ ಅಂತರಾಳ ಚೌಕಾಕಾರವಾಗಿಲ್ಲ. ಜೊತೆಗೆ ಅಂತರಾಳವು ತೆರೆದ ಅಂತರಾಳವಾಗಿರದೆ ಮುಂದೆ ಗೋಡೆ ಬಂದಿದೆ. ನವರಂಗವೂ ಚೌಕಾಕಾರವಾಗಿಲ್ಲ. ಹೀಗಾಗಿ ನೊಳಂಬರ ರಚನೆಗಿಂತ ಭಿನ್ನರೀತಿಯ ತಳಪಾಯ ಹೊಂದಿದೆ.

ದೇವಾಲಯದ ಹೊರಭಾಗದ ಭಾಗಗಳಲ್ಲಿ ಪ್ರಮುಖವಾದದ್ದು ಅಧಿಷ್ಠಾನ. ನೊಳಂಬರ ಬಹುತೇಕ ದೇವಾಲಯದ ಅಧಿಷ್ಠಾನಗಳು ಸರಳ ನೇರವಾಗಿರದೆ ಸಂಕೀರ್ಣವಾಗಿದೆ. ಅದೆಂದರೆ ಶಿಖರದಲ್ಲಿ ಬಂದಿರುವ ಕೂಟ, ಶಾಲ, ಪಂಜರಗಳಿಗನುಗುಣವಾಗಿ ಅಧಿಷ್ಠಾನವೂ ಸಹ ಹಿಂದೆ ಮುಂದೆ ಸರಿದಿದೆ. ಈ ಅಧಿಷ್ಠಾನಗಳು ಎತ್ತರವಾಗಿದ್ದು ಬೇರೆ ಬೇರೆ ಭಾಗಗಳನ್ನು ಹೊಂದಿವೆ. ಗಂಗರ ಅಧಿಷ್ಠಾನಗಳಂತೆ ಪಾದಬಂಧ ಅಧಿಷ್ಠಾನಗಳು ಕಡಿಮೆ. ಸಂಕೀರ್ಣ ಅಧಿಷ್ಠಾನಗಳೇ ಜಾಸ್ತಿ. ನಂದಿಯ ಭೋಗನಂದಿ ದೇವಾಲಯದ ಅಧಿಷ್ಠಾನದಲ್ಲಿ ಜಗತಿ, ತ್ರಿಪಟ್ಟ, ಕುಮುದ, ಕಂಪ ಗಳ, ಪಟ್ಟಿಕೆ ಗಳ, ಕಂಪ, ಊರ್ಧ್ವ ಕಮಲ ಪಟ್ಟಿಕೆಯನ್ನು ಹೊಂದಿದ್ದರೆ, ಆವನಿಯ ಲಕ್ಷ್ಮಣೇಶ್ವರದಲ್ಲಿ ಜಗತಿ, ಕಂಪ ಗಳ, ಕಂಪ, ತ್ರಿಪಟ್ಟ ಕುಮುದ, ಗಳ, ಕಪೋತ, ಪ್ರತಿ, ಗಳ, ಊರ್ಧ್ವಕಮಲ ಪಟ್ಟಿಕೆಯನ್ನು ಹೊಂದಿದೆ. ಅಧಿಷ್ಠಾನ ಎತ್ತರವಾದಂತೆಲ್ಲಾ ಸೇರ್ಪಡೆಯಾಗುವ ಭಾಗಗಳೂ ಜಾಸ್ತಿಯಾಗಿರುತ್ತವೆ. ಬಾದಾಮಿ ಚಲುಕ್ಯರಂತೆ ಪೂರ್ಣ ಕಪೋತಬಂಧ ಅಧಿಷ್ಠಾನಗಳನ್ನು ಬಳಸಿರುವುದಿಲ್ಲ. ಹೀಗಾಗಿ ಸಮ್ಮಿಶ್ರ ಅಧಿಷ್ಠಾನವನ್ನು ಇವರು ಬಳಸಿರುತ್ತಾರೆ. ನಂದಿಯ ಭೋಗ ನಂದೀಶ್ವರದ ದೇವಾಲಯವನ್ನು ಅನುಸರಿಸಿ ಕಟ್ಟಲಾಗಿರುವ ನಂದಿಯ ಅರುಣಾಚಲೇಶ್ವರ ದೇವಾಲಯದ ಅಧಿಷ್ಠಾನದಲ್ಲಿ ವೃತ್ತಕುಮುದ ಹಾಗೂ ಕಪೋತವನ್ನು ಬಳಸಲಾಗಿದೆ.

ದೇವಾಲಯದ ಭಿತ್ತಿಗಳಲ್ಲಿ ಅಧಿಷ್ಠಾನದ ರಚನೆಯನ್ನು ಅನುಸರಿಸಿ ಅವುಗಳು ಪಂಜರ, ಕೂಟ ಮತ್ತು ಶಾಲಾ ಭಾಗಗಳನ್ನು ಬಿಡಿಸಲಾಗಿದೆ. ಬೇರೆ ಬೇರೆ ದೇವಾಲಯಗಳಲ್ಲಿ ಎದ್ದು ಕಾಣುವಂತಹ ದೇವಕೋಷ್ಠಗಳಿಲ್ಲ. ಆವುಗಳಿಗೆ ಬದಲಾಗಿ ಲಕ್ಷ್ಮಣೇಶ್ವರ ಮತ್ತು ಅರುಣಾಚಲೇಶ್ವರ ದೇವಾಲಯಗಳಲ್ಲಿ ಎರಡು ಉಬ್ಬು ಕಂಬಗಳ ಮಧ್ಯೆ ಚಿಕ್ಕ ಕೋಷ್ಠಗಳನ್ನು ಬಿಡಿಸಿದ್ದು, ಅವುಗಳ ಮೇಲೆ ದೇವಾಲಯದ ಶಿಖರದ ಮಾದರಿಗಳನ್ನು ಬಿಡಿಸಲಾಗಿದೆ. ಕೋಷ್ಠಗಳಲ್ಲಿ ಮೂರ್ತಿಗಳನ್ನಿಡುವ ಬದಲಿಗೆ ಕೆಲವು ದೇವಾಲಯಗಳಲ್ಲಿ ವಾತಾಯನವನ್ನು ಕಟ್ಟಿಸಿ, ಬಳ್ಳಿ, ಅಲಂಕಾರ, ಹಾಗೂ ದೇವ ವಿಗ್ರಹಗಳನ್ನು ಸ್ಥಾಪಿಸಿರುತ್ತಾರೆ. ಇವು ವಾತಾಯನ ಹಾಗೂ ಅಲಂಕಾರ ಎರಡೂ ಕಾರ್ಯಗಳನ್ನು ಪೂರೈಸಿದಂತಾಗಿದೆ. ದೊಡ್ಡೇಶ್ವರ ದೇವಾಲಯದಲ್ಲಿ ದೇವಕೋಷ್ಠಗಳಿಲ್ಲ, ನವರಂಗದ ಮತ್ತು ಅಂತರಾಳದ ಭಾಗದ ವಾತಾಯನದಲ್ಲಿ ಮಾತ್ರ ದೇವತಾ ವಿಗ್ರಹಗಳು ಹಾಗೂ ಬಳ್ಳಿ ಅಲಂಕಾರವಿದೆ.

ದೇವಾಲಯದ ಮುಂಭಾಗದಲ್ಲಿ ಪ್ರವೇಶದ ಎರಡೂ ಕಡೆ ಗಂಗಾ ಯಮುನಾ ಶಿಲ್ಪಗಳನ್ನು ಬಿಡಿಸಿರುವುದು ಅನೇಕ ದೇವಾಲಯಗಳಲ್ಲಿ ಕಾಣುತ್ತೇವೆ. ಇವು ದೊಡ್ಡ ಪ್ರಮಾಣದಲ್ಲಿರಬಹುದು ಇಲ್ಲವೇ ಸಣ್ಣ ಪ್ರಮಾಣದಲ್ಲಿರಬಹುದು, ಹೇಮಾವತಿಯ ದೊಡ್ಡೇಶ್ವರ ದೇವಾಲಯದಲ್ಲಿ ಬಾಗಿಲ ಬಳಿ ವಾತಾಯನ ಜಾಲಂಧ್ರದಲ್ಲಿ ಗಂಗಾ, ದೊಡ್ಡಗಂಗಾ ಪ್ರತಿಮೆಯಿದ್ದರೆ, ಅರಳುಗುಪ್ಪೆಯ ಬಾಗಿಲವಾಡದ ಸ್ತಂಭಶಾಖೆಯಲ್ಲಿ ಗಂಗಾ-ಯಮುನಾ ಶಿಲ್ಪಗಳ ಚಿಕಣಿ ಶಿಲ್ಪಗಳನ್ನು ಕಾಣಬಹುದು. ಇನ್ನೊಂದು ಎದ್ದು ಕಾಣುವ ಲಕ್ಷಣವೆಂದರೆ ಶಂಖನಿಧಿ ಪದ್ಮನಿಧಿಗಳ ಶಿಲ್ಪಗಳನ್ನು ಬಾಗಿಲಿನ ಎರಡೂ ಕಡೆ ಬಿಡಿಸಿರುವುದು. ಹೇಮಾವತಿಯಲ್ಲಿ ಮಲ್ಲೇಶ್ವರ ದೇವಾಲಯದ ಬಾಗಿಲವಾಡದಲ್ಲಿ ಆನೆಯ ಮೇಲೆ ಕುಳಿತಿರುವ ಶಂಖನಿಧಿಯನ್ನು ಗಮನಿಸಬಹುದು. ಹಾಗೆಯೇ ಜಾಲಂದ್ರಗಳ ಬಳಿ ಎರಡೂ ಕಡೆ ಶಂಖನಿಧಿ ಪದ್ಮನಿಧಿಯನ್ನು ಬಿಡಿಸಿರುತ್ತಾರೆ. ಅರಳುಗುಪ್ಪೆಯಲ್ಲಿ ಈ ಶಿಲ್ಪಗಳನ್ನು ಮೂರ್ತರೂಪದಲ್ಲಿ ಬಿಡಿಸಿದೆ. ಬಾಗಿಲ ಬಳಿ ಎರಡೂ ಕಡೆ ಶಂಖ ಮತ್ತು ಪದ್ಮಗಳನ್ನೇ ಬಿಡಿಸಿದ್ದಾರೆ. ಈ ಬಗೆಯ ಶಂಖನಿಧಿ ಶ್ರೀಮಾದೇವಿ ಪದ್ಮನಿಧಿ ಬಿಂಬಗಳು ಗಂಗರ ದೇವಾಲಯಗಳಲ್ಲಿ ಕಾಣುವುದಿಲ್ಲ. ಅಗಡಿಯ ಕ್ರಿ.ಶ. ೭೭೮ ರ ಶಾಸನದಲ್ಲಿ ಶಂಖನಿಧಿ ಪದ್ಮನಿಧಿ ವಿಗ್ರಹಗಳನ್ನು ಮುಕುನೋವಜ ಮತ್ತು ಬೂದೋವಜನು ಮಾಡಿಸಿದಂತೆ ಉಲ್ಲೇಖವಾಗಿದೆ. ಶ್ರೀಮಾದೇವಿಯ ಉಲ್ಲೇಖವು ವಡ್ಡಾರಾದನೆಯುಲ್ಲಿ ಬಂದಿದೆ. ಬಹುಶಃ ಗಜಲಕ್ಷ್ಮಿಯನ್ನು ಈ ಹೆಸರಿನಲ್ಲಿ ಕರೆದಿರಬಹುದು. ಮುಂದೆ ಈ ಶಂಖನಿಧಿ, ಪದ್ಮನಿಧಿ ಶಿಲ್ಪಗಳು ನೊಳಂಬರ ದೇವಾಲಯಗಳಲ್ಲಿ ಪ್ರಮುಖವಾಗಿ ಕಾಣಬರುತ್ತವೆ.

ಬಾಗಿಲವಾಡಗಳು ನೊಳಂಬರ ಕಲಾವಂತಿಕೆಗೆ ಸಾಕ್ಷಿ. ನವರಂಗದ ಪ್ರವೇಶದ್ವಾರವನ್ನು ಅನೇಕ ಬಗೆಯ ದ್ವಾರ ಶಾಖೆಗಳಿಂದ ಅಲಂಕರಿಸಿರುತ್ತಾರೆ. ಸಿದ್ದೇಶ್ವರ ದೇವಾಲಯದ ಬಾಗಿಲವಾಡದಲ್ಲಿ ದ್ವಾರಪಾಲಕರು, ಗಂಧರ್ವರು, ಸಿಂಹಶಾಖೆ, ಸ್ತಂಭಶಾಖೆ, ರತ್ನಪಟ್ಟಿಶಾಖೆ, ಬಳ್ಳಿಶಾಖೆ, ಹೀಗೆ ಶಾಖೆಗಳನ್ನು ಕಡೆದಿದ್ದು ಮೇಲೆ ಕಪೋತ ಬಂದಿದೆ. ವಿರೂಪಾಕ್ಷ ದೇವಾಲಯದಲ್ಲಿ ಕಮಲದಳ ಶಾಖೆ, ಶಲಾಕ, ಬಳ್ಳಿ ಶಾಖೆ, ಸ್ತಂಭ ಶಾಖೆ, ರತ್ನಿ ಪಟ್ಟಾ, ಶಲಾಕ ಮತ್ತು ಬಳ್ಳಿ ಶಾಖೆಯನ್ನು ಹೊಂದಿದೆ. ಬಳ್ಳಿ ಶಾಖೆಯಲ್ಲಿ ವೃತ್ತಗಳ ಮಧ್ಯೆ ನೃತ್ಯ ಮಾಡುವ, ವಾದ್ಯಗಳನ್ನು ಬಾರಿಸುವ ಪುರುಷರ ಚಿಕಣಿಶಿಲ್ಪಗಳನ್ನು ಬಿಡಿಸಿರುತ್ತಾರೆ.

ಆವನಿಯಲ್ಲಿ ಕೆಲವು ದೇವಾಲಯಗಳಲ್ಲಿ ಬಾಗಿಲವಾಡವು ಸರಳವಾಗಿದ್ದು ಸ್ತಂಭ ಶಾಖೆ, ಸಿಂಹ ಶಾಖೆ, ಬಳ್ಳಿ ಶಾಖೆಯಂತಹ ಮೂರು ಶಾಖೆಗಳು ಮಾತ್ರ ಇವೆ.

ಹೇಮಾವತಿಯ ದೊಡ್ಡೇಶ್ವರ ದೇವಾಲಯದ ಬಾಗಿಲವಾಡದಲ್ಲಿ ಕಮಲದಳ ಶಾಖೆ, ರಜ್ಜು ಶಾಖೆ, ಸಿಂಹ ಶಾಖೆ, ಸ್ತಂಭ ಶಾಖೆ, ಮತ್ತು ವಲ್ಲಿ ಶಾಖೆಗಳನ್ನು ಹೊಂದಿದೆ. ಮೇಲೆ

ಕಪೋತವಿಲ್ಲ. ಕಪೋತಕ್ಕೆ ಬದಲಾಗಿ ನಟರಾಜ ಮತ್ತು ಶಿವಗಣಗಳ ಶಿಲ್ಪವನ್ನು ಬಿಡಿಸಲಾಗಿದೆ. ಅರಳುಗುಪ್ಪೆ, ಹೇಮಾವತಿಯ ಮಲ್ಲೇಶ್ವರ ದೇವಾಲಯ ಮುಂತಾದ ದೇವಾಲಯಗಳಲ್ಲಿ ಮೇಲೆ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪ ಬಿಡಿಸಿದೆ. ಮಲ್ಲೇಶ್ವರ ದೇವಾಲಯದಲ್ಲಿ ಬಾಗಿಲ ಲಲಾಟದಲ್ಲಿ ಶಂಖನಿಧಿ ಪದ್ಮನಿಧಿ ಮಧ್ಯೆ ಮೀನು, ಕಲಶ ಮುಂತಾದ ಮಂಗಳಚಿಹ್ನೆಗಳನ್ನು ಬಿಡಿಸಿದೆ.

ನಂದಿ ದೇವಾಲಯದ ಪ್ರಸ್ತರದ ಭಾಗದಲ್ಲಿ ಭೂತಮೂಲ ಬಿಡಿಸಿದೆ. ಆವನಿಯಲ್ಲಿ ಹಂಸಮಾಲಾ ಇದೆ. ಮೇಲಿನ ಕಪೋತದಲ್ಲಿ ನಾಸಿಗಳಿದ್ದು, ನಾಸಿಗಳ ಒಳಭಾಗದಲ್ಲಿ ಮಾನವ ಶಿರಗಳಿವೆ. ಹೇಮಾವತಿಯ ದೊಡ್ಡೇಶ್ವರದಲ್ಲಿ ಈ ನಾಸಿಗಳ ಒಳಭಾಗ ಖಾಲಿ ಇದೆ. ಬೇತೂರಿನಲ್ಲಿ ನಾಸಿಗಳು ಸಾಧಾರಣವಾಗಿವೆ. ಆವನಿಯ ಲಕ್ಷ್ಮಣೇಶ್ವರದಲ್ಲಿ ಇವು ಆಳವಾಗಿದ್ದು ಖಾಲಿ ಇವೆ. ಎಂ.ಎಸ್. ಕೃಷ್ಣಮೂರ್ತಿಯವರು ನಂದಿಯನ್ನು ಬಿಟ್ಟರೆ ಉಳಿದ ಕಡೆಗಳಲ್ಲಿ ಮೂಲ ವಿಮಾನಗಳು ಉಳಿದಿಲ್ಲವೆಂದಿರುತ್ತಾರೆ. ಆದರೆ ಬೇತೂರು, ಅರಳುಗುಪ್ಪೆ, ಆವನಿಯ ಲಕ್ಷ್ಮಣೇಶ್ವರ ಮುಂತಾದ ಕಡೆಯ ಶಿಖರಗಳು ಹಾಗೆಯೇ ಇವೆ. ಆವನಿ ಮತ್ತು ಅರಳುಗುಪ್ಪೆಯದು ಇಟ್ಟಿಗೆಯದಾಗಿವೆ. ಅರಳುಗುಪ್ಪೆಯ ಕಲ್ಲೇಶ್ವರ ದೇವಾಲಯದ ಶಿಖರ ಅಲ್ಪಸ್ವಲ್ಪ ಬದಲಾಗಿದೆ, ಅಧಿಷ್ಠಾನ ಮತ್ತು ಮುಚ್ಚಿಗೆಯನ್ನು ಬಿಟ್ಟರೆ ಉಳಿದೆಲ್ಲ ಭಾಗಗಳು ಇಟ್ಟಿಗೆಯವಾಗಿದೆ. ಆವನಿಯ ಶಿಖರದಲ್ಲಿ ಹೆಚ್ಚಿನ ಬದಲಾವಣೆ ಹೊಂದಿಲ್ಲ. ಇಲ್ಲಿ ಪ್ರಸ್ತರದವರೆಗೆ ಕಲ್ಲಿನಲ್ಲಿ ಕಟ್ಟಿದ್ದು, ಶಿಖರವನ್ನು ಇಟ್ಟಿಗೆ ಮತ್ತು ಗಾರೆಯಲ್ಲಿ ಕಟ್ಟಲಾಗಿದೆ. ದೇವಾಲಯದ ಒಳಭಾಗಗಳಲ್ಲಿ ಗರ್ಭಗೃಹ ಮತ್ತು ನವರಂಗಗಳಲ್ಲಿ ಯಾವ ವಿಶೇಷವಿಲ್ಲದಿದ್ದರೂ, ನವರಂಗದ ಮುಚ್ಚಿಗೆ ಭಾಗವು ಗಮನಾರ್ಹವಾದದ್ದು. ಹೇಮಾವತಿ, ಅರಳುಗುಪ್ಪೆ, ಬೇತೂರು ಮುಂತಾದ ಕಡೆ ಅಷ್ಟದಿಕ್ಪಾಲಕರ ಮಧ್ಯೆ ಇರುವ ನಟರಾಜ ಶಿಲ್ಪವನ್ನು ಬಿಡಿಸಿರುತ್ತಾರೆ. ಮದರಾಸು ಮ್ಯೂಸಿಯಂನಲ್ಲಿರುವ ಹೇಮಾವತಿಯ ಶಿಲ್ಪಗಳು, ಅರಳುಗುಪ್ಪೆ ಶಿಲ್ಪಗಳು ಸುಂದರವಾಗಿವೆ. ಅರಳುಗುಪ್ಪೆ ಶಿಲ್ಪದಲ್ಲಿ ನಟರಾಜನಿಗೆ ನಾಲ್ಕು ಕೈಗಳಿದ್ದರೆ ಬೇತೂರು ನಟರಾಜ ಶಿಲ್ಪದಲ್ಲಿ ೧೬ ಕೈಗಳಿವೆ ಹಾಗೂ ಇದು ಗಜಾಸುರ ಸಂಹಾರಮೂರ್ತಿಯಾಗಿದೆ.

ನೊಳಂಬರ ದೇವಾಲಯಗಳೊಳಗಿನ ಕಂಬಗಳನ್ನು ವಿದ್ವಾಂಸರು ನಾಲ್ಕು ವಿಭಾಗ ಮಾಡಿರುತ್ತಾರೆ. ಅದರೆ ಇದು ಬ್ರಹ್ಮಕಾಂತ, ವಿಷ್ಣುಕಾಂತ ಹಾಗೂ ರುದ್ರಕಾಂತವೆಂಬ ಮೂರು ಮಾದರಿಗಳಲ್ಲಿಯೇ ಬರುತ್ತವೆ. ಗಂಗರು ರುದ್ರಕಾಂತ ಕಂಬಗಳನ್ನು ಹೆಚ್ಚಾಗಿ ಬಳಸಿರುತ್ತಾರೆ. ಇವರ ಪ್ರಭಾವದಿಂದ ಈ ಬಗೆಯ ಕಂಬಗಳು ನೊಳಂಬರಲ್ಲಿ ಬಳಕೆಯಾಗಿರಬೇಕು. ಬರಗೂರು, ಆವನಿ, ಅರಳುಗುಪ್ಪೆ ಮುಂತಾದ ದೇವಾಲಯಗಳಲ್ಲಿ ಕಾಣುತ್ತೇವೆ. ರಾಷ್ಟ್ರಕೂಟರು ಸಹ ಈ ಬಗೆಯ ಕಂಬಗಳನ್ನು ಕರ್ನಾಟಕದಲ್ಲಿ ಬಳಸಿರುತ್ತಾರೆ. ಬ್ರಹ್ಮಾಕಾಂತ ರೀತಿಯ ಕಂಬಗಳನ್ನು ನಂದಿಯ ಭೋಗನಂದಿ, ಹೇಮಾವತಿಯ ಸಿದ್ದೇಶ್ವರ, ದೊಡ್ಡೇಶ್ವರ, ಆವನಿಯ ಲಕ್ಷ್ಮಣೇಶ್ವರ ಮುಂತಾದ ದೇವಾಲಯಗಳಲ್ಲಿ ಕಾಣಬಹುದಾಗಿದೆ. ಈ ಕಂಬಗಳು ಪೀಠದ ಮೇಲೆ ಇದ್ದು,

ಪಿಂಡಿಯಿಂದ ಕಂಬದ ಭಾಗದವರೆಗೆ ಚೌಕಾಕಾರದಲ್ಲಿಯೇ ಇರುತ್ತದೆ. ಪಿಂಡಿಯ ಮೇಲೆ ಬಳ್ಳಿಯ ಅಲಂಕಾರದ ಪಟ್ಟಿಕೆಯೂ, ಇದರ ಮೇಲೆ ಮಾಲಾಲಂಕಾರ ಬಂದಿದ್ದು, ಮಾಲೆಯ ಒಳಗೆ ಮಾನವ ಹಾಗೂ ದೇವತೆಗಳ ಚಿಕಣಿಶಿಲ್ಪಗಳನ್ನು ಕೆತ್ತಿರುತ್ತಾರೆ. ಮೇಲೆ ಕುಂಭ ಬಂದಿದ್ದು, ಅದರ ಮೇಲೆ ಕಂಠ ಬಂದಿದೆ. ಇದರ ಮೇಲೆ ಮುಚ್ಚಳ ಬಂದಿದ್ದು ಅದರ ಮೇಲೆ ಬೋದಿಗೆ ಬಂದಿದೆ.

ವಿಷ್ಣುಕಾಂತ ಕಂಬಗಳು ಎಂಟು ಮೂಲೆ, ೧೬ ಮೂಲೆ ಹೊಂದಿದ್ದು, ಹೇಮಾವತಿಯ ದೊಡ್ಡೇಶ್ವರ, ಧರ್ಮಪುರಿಯ ಕಾಮಾಕ್ಷಿ ದೇವಾಲಯಗಳಲ್ಲಿ ಕಂಡುಬಂದಿವೆ. ಈ ಕಂಬಗಳು ತಳಗಡೆ ಚೌಕಾಕಾರದ ಪಿಂಡಿಯನ್ನು ಹೊಂದಿದ್ದು, ಎಂಟು ಮೂಲೆ ಭಾಗದಲ್ಲಿ ಬಳ್ಳಿಗಳ ಅಲಂಕಾರದಲ್ಲಿ ಮನುಷ್ಯರಿದ್ದಾರೆ. ಮಧ್ಯೆ ಚೌಕಾಕಾರದ ಭಾಗದಲ್ಲಿ ಪುರಾಣಕಥೆಗಳನ್ನು ಅಥವಾ ದೇವತಾಶಿಲ್ಪಗಳನ್ನು ಅಥವಾ ಮಾಲಾಲಂಕಾರವನ್ನು ಪಡೆದಿವೆ. ಮೇಲೆ ಕುಂಭಾಕಾರವಿದೆ. ಮೇಲಿನ ಎರಡೂ ರೀತಿಯ ಕಂಭಗಳನ್ನು ಕೆ.ವಿ. ಸೌಂದರ್ ರಾಜನ್ ಅವರು ಚಿತ್ರಾಕಾಂಡವೆಂದು ಕರೆದಿರುತ್ತಾರೆ.[55]

ರುದ್ರಕಾಂತ ಕಂಭಗಳು ತಳಗಡೆ ಚೌಕಾಕಾರದ ಪಿಂಡಿ ಬಂದಿದ್ದು, ಅದರ ಮೇಲೆ ವೃತ್ತಾಕಾರದ ಶಲಾಕೆ ಬಂದಿದೆ. ಈ ಶಲಾಕೆಯಲ್ಲಿ ಮಧ್ಯೆ ಎಡಕಟ್ಟುಗಳೇ ಅಲ್ಲದೆ ಮೇಲೆ ಕುಂಭ ಬಂದಿದೆ. ಇವು ಹೆಚ್ಚಿಗೆ ಕಾಣಬರುವ ಪ್ರಕಾರಗಳಾಗಿವೆ.

**ಕಂಪಿಲಿಯ ನೊಳಂಬರ ವಾಸ್ತುಶಿಲ್ಪ :-**

ಕ್ರಿ.ಶ.ಸು. ೧೦೦೦ ದಿಂದ ಕಂಪಿಲಿಯ ನೊಳಂಬರ ಇತಿಹಾಸ ಆರಂಭವಾಗುತ್ತದೆ. ಕಂಪಿಲಿಯು ಮೊದಲು ಇವರ ಆಡಳಿತಕ್ಕೆ ಸೇರಿದ್ದರೂ ರಾಜಧಾನಿಯಾಗುವುದು ಇಮ್ಮಡಿ ಮಹೇಂದ್ರನ ಮಗನ ಕಾಲದಿಂದ ದಕ್ಷಿಣದ ರಾಜಧಾನಿ ಹೇಮಾವತಿಯನ್ನು ಬಿಟ್ಟು ಈ ಕಂಪಿಲಿಯನ್ನು ಪ್ರಮುಖ ರಾಜಧಾನಿಯನ್ನಾಗಿ ಮಾಡಿಕೊಂಡಿರುತ್ತಾರೆ.

ಕಂಪಿಲಿಗೆ ರಾಜಧಾನಿಯನ್ನು ಬದಲಾಯಿಸಿದ ಮೇಲೆ ರಾಜಕೀಯವಾಗಿಯೂ ಇವರೂ ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಆಳ್ವಿಕೆ ನಡೆಸಿದರು. ಚಾಳುಕ್ಯರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿ ಅವರ ನಿಷ್ಠಾವಂತ ಮಾಂಡಳೀಕರಾಗಿ ಆಡಳಿತ ನಡೆಸಿದರು, ಚಾಳುಕ್ಯರ ಮಾಂಡಳೀಕರಾದ್ದರಿಂದ ಇವರ ವಾಸ್ತು ಶೈಲಿಯಲ್ಲಿಯೂ ಅಲ್ಪಸ್ವಲ್ಪ ಬದಲಾವಣೆಗಳು ಆದವು, ಈ ಬದಲಾವಣೆಗಳಲ್ಲಿ ಮುಖ್ಯವಾದದ್ದು ಮುಚ್ಚಿಗೆಯಲ್ಲಿ ಶಿಲ್ಪಗಳನ್ನು ಬಿಡಿಸದೆ ಕಮಲದ ಹೂವನ್ನು ಮಾತ್ರ ಬಿಡಿಸಲಾಗಿದೆ.

**ಶಿವದೇವಾಲಯಗಳ ರಚನೆ, ಬಸದಿಗಳ ನಿರ್ಮಾಣ :-**

ಇವರ ಕಾಲದ ರಚನೆಗಳನ್ನು ಕಂಪಿಲಿಯ ಸೋಮೇಶ್ವರ ದೇವಾಲಯ ಮಲ್ಲಯ್ಯನಗುಡ್ಡದ ಮೈಲಾರನ ದೇವಾಲಯ, ಹಂಪಿಯ ದುರ್ಗಾ ಮತ್ತು ನಾಗನಾಥ ದೇವಾಲಯಗಳು, ಬಾಗಳಿಯ ಕಲ್ಲೇಶ್ವರ ದೇವಾಲಯ, ದೇವಘಾತದ ಈಶ್ವರ ದೇವಾಲಯ ಹಾಗೂ ಬಲ್ಲಕುಂದೆಯ ಪ್ರವೇಶದ್ವಾರ ಮತ್ತು ಜೈನ ಅವಶೇಷಗಳು ಕಾಣಬರುತ್ತವೆ. ಈ ದೇವಾಲಯಗಳಲ್ಲಿ ಕೆಲವನ್ನು ಬಿಟ್ಟರೆ ಉಳಿದವು ಶಿಖರಗಳನ್ನು ಹೊಂದಿವೆ. ಕಂಪಿಲಿಯ ಸೋಮೇಶ್ವರ ದೇವಾಲಯವು ಇವರ ಆರಂಭಿಕ ದೇವಾಲಯವಾಗಿರಬೇಕು. ತಮ್ಮ ಕುಲದೈವ ಅಥವಾ ಇಷ್ಟದೈವವಾದ ಸಿದ್ದೇಶ್ವರನಿಗಾಗಿ (ಭೈರವ) ಈ ದೇವಾಲಯವನ್ನು ರಚಿಸಿರಬೇಕು. ಗರ್ಭಗೃಹದಲ್ಲಿ ಭೈರವಶಿಲ್ಪವಿದ್ದು, ಇದನ್ನು ಈಗ ಸೋಮೇಶ್ವರಶಿಲ್ಪವೆಂದು ಕರೆಯುತ್ತಿದ್ದಾರೆ. ಮಲ್ಲಯ್ಯನಗುಡ್ಡದ ಮೈಲಾರನ ದೇವಾಲಯವು ಕ್ರಿ.ಶ. ೧೦೧೭ ರಲ್ಲಿ ರಚಿತವಾಗಿದ್ದು ನೊಳಂಬರ ಕಾಲದ ಇನ್ನೊಂದು ಮೈಲಾರನ (ಭೈರವನ) ದೇವಾಲಯವಾಗಿದೆ. ಕಾಲಾಂತರದಲ್ಲಿ ಈ ದೇವಾಲಯದ ಹೊರಭಾಗ ಬದಲಾಗಿದ್ದರೂ ಒಳಭಾಗ ಮೂಲ ರಚನೆಯಲ್ಲಿಯೇ ಇದೆ. ಮೂಲಶಿಖರ ಭಾಗ ಈಗ ಇಲ್ಲ. ಮೂಲ ವಿಗ್ರಹವೂ ಇಲ್ಲ. ಹಂಪಿಯ ದುರ್ಗಾದೇವಿ ದೇವಾಲಯ ನಾಗನಾಥ ದೇವಾಲಯಗಳು ಮತ್ತು ಬಾಗಳಿಯ ಕಲ್ಲೇಶ್ವರ ದೇವಾಲಯಗಳು ಇಂದಿಗೂ ಹೆಚ್ಚಿನ ಬದಲಾವಣೆಯಿಲ್ಲದೆ ಉಳಿದು ಬಂದಿವೆ. ಇವುಗಳಲ್ಲಿ ಬಾಗಳಿಯ ಕಲ್ಲೇಶ್ವರ ದೇವಾಲಯವು ಕ್ರಿ.ಶ. ೧೦೧೮ ರಲ್ಲಿ ರಚಿತವಾದ ಬಗ್ಗೆ ಶಾಸನಗಳು ಉಲ್ಲೇಖಿಸುತ್ತವೆ. ಕಲ್ಲೇಶ್ವರ ದೇವಾಲಯದ ಕೆಲವು ಭಾಗಗಳು ಹೊಯ್ಸಳರ ಕಾಲದಲ್ಲಿ ಬದಲಾಗಿದ್ದರೂ ಒಳರಚನೆ ಹಾಗೆಯೇ ಇದೆ. ದೇವಘಾತದ ಈಶ್ವರದೇವಾಲಯದ ಹೊರ ಗೋಡೆಗಳು ಹಾಳಾಗಿದ್ದರೂ, ಇದು ಸಹ ತನ್ನ ಮೂಲರೂಪವನ್ನು ಇಂದಿಗೂ ಉಳಿಸಿಕೊಂಡು ಬಂದಿದೆ. ಬಲ್ಲಕುಂದೆಯ ಊರಬಾಗಿಲು ಹಾಗೂ ಜೈನಶಿಲ್ಪಗಳು ಕಂಪಿಲಿಯ ನೊಳಂಬರ ಕಾಲದವಾಗಿವೆ. ಬಲ್ಲಕುಂದೆಯಲ್ಲಿ ಜೈನ ಬಸದಿಯು ಈಗ ಸಂಪೂರ್ಣ ನಾಶವಾಗಿದೆ. ಮರೋಳದ ಬಸದಿ ಈಗ ಇಲ್ಲ. ಆದರೆ ಜೈನ ಶಿಲ್ಪಗಳು ಮಾತ್ರ ಉಳಿದಿವೆ. ಜೈನಶಾಸನವಿರುವ ದೇವಾಲಯವನ್ನು ನೊಳಂಬರ ಕಾಲದ್ದೆಂದು ನಾವು ತೆಗೆದುಕೊಂಡರೂ ತೆಗೆದುಕೊಳ್ಳಬಹುದು. ಇವು ಕಂಪಿಲಿಯ ನೊಳಂಬರ ರಚನೆಗಳು.

ಈ ರಚನೆಗಳಲ್ಲಿ ಗರ್ಭಗೃಹ, ಅಂತರಾಳ ಮತ್ತು ನವರಂಗ ಭಾಗಗಳನ್ನು ಹೊಂದಿವೆ. ಕಂಪಿಲಿಯ ಸೋಮೇಶ್ವರ ದೇವಾಲಯದ ಒಳಭಾಗವು ಬಹುಮಟ್ಟಿಗೆ ಬದಲಾಗಿದೆ. ಗರ್ಭಗೃಹ ಮಾತ್ರ ಉಳಿದಿದೆ. ಉಳಿದ ಭಾಗಗಳು ಪೂರ್ಣ ಬದಲಾಗಿದೆ. ಹೀಗಾಗಿ ಮುಂದಿನ ಮಂಟಪದ ರಚನೆ ಹೇಗಿತ್ತೆಂದು ತಿಳಿಯುವುದು ಕಷ್ಟ. ಮಲ್ಲಯ್ಯನಗುಡ್ಡ, ಬಾಗಳಿ, ವಿಪ್ರ ಈ ಸ್ಥಳಗಳಲ್ಲಿ ಗರ್ಭಗೃಹದ ಮುಂದೆ ತೆರೆದ ಅಂತರಾಳವಿದೆ. ಬಾಗಳಿ, ವಿಪ್ರದಲ್ಲಿ ಅಂತರಾಳದ ತೊಲೆಗೆ

ಆಧಾರವಾಗಿ ಎರಡು ಕಂಬಗಳು ಬಂದಿವೆ. ಮಲ್ಲಯ್ಯನಗುಡ್ಡದಲ್ಲಿ ಆ ಕಂಬಗಳು ಇಲ್ಲ. ಹಂಪೆಯಲ್ಲಿ ಗರ್ಭಗೃಹದ ಮುಂದೆ ತೆರೆದ ಅಂಕಣವಿದ್ದು, ಇದು ಮಧ್ಯೆ ಸಮನಾಗಿದ್ದು ಸುತ್ತಲೂ ಇಳಿಜಾರು ಮಾಡು ಇದೆ. ನವರಂಗದ ಭಾಗವು ಮಲ್ಲಯ್ಯನಗುಡ್ಡ ಮತ್ತು ಬಾಗಳಿಯಲ್ಲಿ ಹಾಗೆಯೇ ಇವೆ. ಆದರೆ ಹೇಮಾವತಿಯಲ್ಲಿದ್ದಂತೆ ಚಿತ್ರಕಾಂಡ ಸ್ತಂಭಗಳಿಲ್ಲ. ಬಾಗಳಿಯಲ್ಲಿ ಅಂತರಾಳದ ಗೋಡೆಗೆ ಸೇರಿಸಿರುವ ಎರಡು ಕಂಬಗಳು ಮಾತ್ರ ಮಾಲಾಲಂಕಾರ ಹಾಗೂ ತಳಭಾಗಗಳಲ್ಲಿ ದ್ವಾರಪಾಲಕ ಶಿಲ್ಪಗಳನ್ನು ಹೊಂದಿದ್ದು ಚಿತ್ರಕಾಂಡ ಮಾದರಿಯಲ್ಲಿವೆ. ಬಾಗಿಲವಾಡಗಳು ಮಲ್ಲಯ್ಯನಗುಡ್ಡ ಹಾಗೂ ಬಾಗಳಿಯಲ್ಲಿ ಜೀರ್ಣೋದ್ಧಾರವಾಗಿವೆ. ಆದರೆ ಹಂಪೆಯ ದುರ್ಗಾದೇವಾಲಯದಲ್ಲಿ ಹಾಗೆಯೇ ಇದೆ. ಹೊರ ಭಾಗದ ಅಲಂಕಾರಗಳಲ್ಲಿ ಮಲ್ಲಯ್ಯನಗುಡ್ಡದಲ್ಲಿನ ದೇವಾಲಯ ಪೂರ್ಣ ಬದಲಾಗಿದ್ದರೆ ಬಾಗಳಿಯ ದೇವಾಲಯವು ಕರ್ಣ, ಭದ್ರಗಳಿಂದ ಕೂಡಿದ ಭಾಗಗಳನ್ನು ಹೊಂದಿದೆ. ಕಂಪಿಲಿಯ ಸೋಮೇಶ್ವರ ದೇವಾಲಯವೂ ಇದೇ ಮಾದರಿಯಲ್ಲಿದೆ. ಹಂಪೆಯ ದುರ್ಗಾ ದೇವಾಲಯವು ಚಿಕ್ಕದಿದ್ದು, ಇದರಲ್ಲಿ ಭದ್ರ, ಕರ್ಣ ಭಾಗಗಳು ಇಲ್ಲ. ಕಂಪಿಲಿಯ ಸೋಮೇಶ್ವರ ದೇವಾಲಯದ ಶಿಖರ ಭಾಗವು ಜೀರ್ಣವಾಗಿದ್ದರೆ ಬಾಗಳಿಯ ಶಿಖರವು ಇಟ್ಟಿಗೆಯದಾಗಿದೆ. ಹಂಪೆಯ ದುರ್ಗಾದೇವಾಲಯ ಶಿಖರವು ಶಿಲಾಮಯವಾಗಿದೆ.

ಸಾಮಾನ್ಯವಾಗಿ ಹೆಂಜೇರಿನ ನೊಳಂಬರ ದೇವಾಲಯಗಳಲ್ಲಿ ಕಾಣುವ ಸುಂದರ ಬಾಗಿಲವಾಡಗಳು ಕಂಪಿಲಿಯ ನೊಳಂಬರ ದೇವಾಲಯಗಳಲ್ಲಿ ಎಲ್ಲಾ ಕಡೆ ಕಾಣುವುದಿಲ್ಲ. ಬಾಗಳಿಯಲ್ಲಿ ಇಡೀ ಬಾಗಿಲವಾಡಗಳು ಹೊಯ್ಸಳರ ಕಾಲದಲ್ಲಿ ಬದಲಾಗಿದೆ. ಮಲ್ಲಯ್ಯನ ಗುಡ್ಡದಲ್ಲಿಯೂ ಬದಲಾಗಿವೆ. ಹಂಪಿಯ ದುರ್ಗಾದೇವಾಲಯದಲ್ಲಿ ಮಾತ್ರ ವಿಶೇಷವಾದ ಬಾಗಿಲವಾಡವಿದೆ. ಲಲಾಟದಲ್ಲಿ ಗರ್ಭಗೃಹದಲ್ಲಿನ ದೇವಿಯ ಪ್ರತಿರೂಪವನ್ನು ಕೆತ್ತಲಾಗಿದೆ.

ಈ ಮೇಲಿನ ವಿವರಗಳಿಂದ ಹೆಂಜೇರಿನ ನೊಳಂಬರ ಶಿಲ್ಪಿಗಳೂ ಕಂಪಿಲಿಯ ನೊಳಂಬರ ಶಿಲ್ಪಗಳಿಗೂ ಇರುವ ವ್ಯತ್ಯಾಸವನ್ನು ಗಮನಿಸಬಹುದಾಗಿದೆ.

### ನೊಳಂಬರ ದೇವಾಲಯಗಳ ವಿವರ

ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿಗ್ರಾಮದಲ್ಲಿ ಭೋಗನಂದೀಶ್ವರ ದೇವಾಲಯದ ಸಂಕೀರ್ಣವಿದ್ದು ಇದರಲ್ಲಿ ಇದ್ದಂತೆ ರಚಿತವಾಗಿರುವ ಅರುಣಾಚಲೇಶ್ವರ ದೇವಾಲಯವಿದೆ. ದೇವರಕೊಂಡಾರೆಡ್ಡಿಯವರು ಭೋಗನಂದೀಶ್ವರ ದೇವಾಲಯವನ್ನು ಮಹಾಬಲಿವಂಶದ ರಾಣಿ ರತ್ನಾವಳಿ ಅಥವಾ ಮಾಣಿಕಬ್ಬೆ ಕಟ್ಟಿಸಿರುವಳೆಂದೂ, ಇದು ಗಂಗರ ವಾಸ್ತುಶೈಲಿಯಂತಿದೆಯೆಂದೂ ಅಭಿಪ್ರಾಯಪಟ್ಟಿದ್ದಾರೆ.[56] ಆದರೆ ಕೃಷ್ಣಮೂರ್ತಿ ಮತ್ತು ಸೌಂದರ್‌ರಾಜನ್ ಅವರು ಈ ದೇವಾಲಯವನ್ನು ನೊಳಂಬರದೆಂದೇ ಹೇಳಿದ್ದಾರೆ. ನಂದಿಯ

ದೇವಾಲಯದ ಆವರಣದಲ್ಲಿ ದೊರೆತಿರುವ ಶಿಲಾಶಾಸನವನ್ನು ಒಂದನೆಯ ಪೊಳಲ್ಚೋರನದೆಂದು ಹೇಳಿ ಅದರ ಕಾಲವನ್ನು ನೊಳಂಬರ ಆರಂಭ ಕಾಲಕ್ಕೆ ಹಾಕಿರುತ್ತಾರೆ. ಆದರೆ ಶಾಸನವು ಲಿಪಿದೃಷ್ಟಿಯಿಂದ ಎರಡನೆಯ ಪೊಳಲ್ಚೋರನ ಕಾಲದ್ದಾಗಿದ್ದು, ಕ್ರಿ.ಶ.ಸು. ೯೭೫ ಕ್ಕೆ ಸೇರಿಸಬಹುದಾಗಿದೆ.

ಭೋಗನಂದೀಶ್ವರ ದೇವಾಲಯವು ಜೋಡಿ ದೇವಾಲಯದಂತೆ ಕಂಡರೂ ಈ ವಿಶಿಷ್ಟ ಅರುಣಾಚಲೇಶ್ವರವನ್ನು ಭೋಗನಂದಿ ದೇವಾಲಯದ ರಚನೆಯ ನಂತರ ಪ್ರತ್ಯೇಕವಾಗಿ ರಚಿಸಲಾಗಿದೆ. ಬಹುಶಃ ಇಮ್ಮಡಿ ಪೊಳಲ್ಚೋರನ ಕಾಲದಲ್ಲಿ ನಿರ್ಮಿಸಿರಬೇಕು. ಇದು ಒಂದು ರೀತಿಯಲ್ಲಿ ಭೋಗನಂದಿ ದೇವಾಲಯದ ಅನುಕರಣೆ. ಎರಡೂ ದೇವಾಲಯಗಳ ಅಂತರಾಳ ಮತ್ತು ನವರಂಗಗಳಲ್ಲಿ ವಾತಾಯನಗಳಿವೆ. ಭೋಗನಂದಿಯ ಅಂತರಾಳ ತೆರೆದಿದ್ದರೆ ಅರುಣಾಚಲೇಶ್ವರದಲ್ಲಿ ಮುಚ್ಚಿದ ಅಂತರಾಳವಿದೆ. ಗರ್ಭಗೃಹದಲ್ಲಿ ಎತ್ತರವಾದ ಚೌಕಾಕಾರದ ಲಿಂಗಪೀಠದ ಮೇಲೆ ಶಿವಲಿಂಗವಿದೆ. ನವರಂಗದ ಕಂಬಗಳು ರುದ್ರಕಾಂತಾ ರೀತಿಯವಾಗಿದ್ದು, ನವರಂಗದ ಮುಚ್ಚಿಗೆಯಲ್ಲಿ ಅಷ್ಟದಿಕ್ಪಾಲಕರ ಸಮೇತ ಉಮಾಮಹೇಶ್ವರ ಶಿಲ್ಪವಿದೆ. ಹೊರ ಬಾಗಿಲಲ್ಲಿ ಶಂಖನಿಧಿ, ಪದ್ಮನಿಧಿ ಶಿಲ್ಪಗಳಿವೆ. ಭೋಗನಂದೀಶ್ವರ ದೇವಾಲಯದ ಮುಂದೆ ಪ್ರತ್ಯೇಕ ನಂದಿಮಂಟಪವಿದ್ದು ೧೨ ಕಂಬಗಳನ್ನು ಈ ಮಂಟಪಕ್ಕೆ ಬಳಸಲಾಗಿದೆ. ದೇವಾಲಯದ ಪ್ರಸ್ತರ ಭಾಗದಲ್ಲಿನ ಕಪೋತದ ಭಾಗದ ಗೂಡುಗಳು ಮಾನವ ಶಿರವನ್ನು ಹೊಂದಿವೆ. ಮೊದಲ ಹಂತದಲ್ಲಿ ಶಿವ, ವಿಷ್ಣುವಿಗೆ ಸೇರಿದ ಶಿಲ್ಪಗಳಿವೆ. ಎರಡು ಹಂತಗಳನ್ನು (ದ್ವಿತಳ) ಹೊಂದಿರುವ ಈ ದೇವಾಲಯದ ಶಿಖರದ ಮೇಲೆ ಬಸವ ಶಿಲ್ಪಗಳಿವೆ.

ಅರುಣಾಚಲೇಶ್ವರ ದೇವಾಲಯವು ಹಿಂದೆ ಹೇಳಿದಂತೆ ನಂತರದ ರಚನೆಯಾಗಿದೆ. ಇದು ನೊಳಂಬರ ಕಾಲಕ್ಕೆ ಸೇರುತ್ತದೆಯೇ? ಎಂಬ ಬಗ್ಗೆ ಅನುಮಾನವಿದೆ. ಎಂ.ಎಸ್. ಕೃಷ್ಣಮೂರ್ತಿ, ಸೌಂದರ್‌ರಾಜನ್ ಮುಂತಾದವರು ಇದನ್ನು ನೊಳಂಬರ ರಚನೆಯೆಂದೇ ಪ್ರತಿಪಾದಿಸಿದ್ದಾರೆ. ದೇವರಕೊಂಡಾರೆಡ್ಡಿಯವರು ಈ ದೇವಾಲಯದ ಭಿತ್ತಿಯಲ್ಲಿನ ಕೋಷ್ಟಗೂಡುಗಳು ಮುಂತಾದವುಗಳ ಆಧಾರದ ಮೇಲೆ ಕ್ರಿ.ಶ.ಸು. ೧೧-೧೨ ನೆಯ ಶತಮಾನದಲ್ಲಿ ರಚಿತವಾಗಿರಬೇಕೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಬಹುಶಃ ಇವರ ಅಭಿಪ್ರಾಯವನ್ನು ಒಪ್ಪಬಹುದು.

**ಹೇಮಾವತಿ**

ಹೇಮಾವತಿಯು ಹಿಂದಿನ ಹೆಂಜೇರು ಆಗಿದ್ದು ನೊಳಂಬರ ರಾಜಧಾನಿಯಾಗಿತ್ತು. ಹೀಗಾಗಿ ಇಲ್ಲಿ ಅವರ ವಾಸ್ತುವಿನ ರಚನೆಗಳು ಅನೇಕವಿವೆ. ದೊಡ್ಡಪ್ಪ ದೇವಾಲಯದ ಆವರಣದಲ್ಲಿನ ದೊಡ್ಡೇಶ್ವರ, ಸಿದ್ದೇಶ್ವರ, ಮಲ್ಲೇಶ್ವರ, ವಿರೂಪಾಕ್ಷ, ಅಕ್ಕತಂಗಿ ದೇವಾಲಯಗಳು ಮುಖ್ಯವಾದವು.

ದೊಡ್ಡಪ್ಪ ದೇವಾಲಯವು ಒಳಗಡೆ ಚಿಕ್ಕ ಗರ್ಭಗೃಹ, ತೆರೆದ ಅಂತರಾಳ ಮತ್ತು ವಿಶಾಲವಾದ ನವರಂಗ ಮಂಟಪವನ್ನು ಹೊಂದಿದೆ. ದೇವಾಲಯ ವಿಶಾಲವಾಗಿರುವುದರಿಂದ ಮೇಲಿನ ಭಾರವನ್ನು ಹೊರಲು ಅನುಕೂಲವಾಗುವಂತೆ ಅಂತರಾಳದಲ್ಲಿ ನಾಲ್ಕು ಕಂಬಗಳಿವೆ. ಹಾಗೆಯೇ ಗರ್ಭಗೃಹವು ಹೊರಭಾಗದಲ್ಲಿ ದೊಡ್ಡದಾಗಿ ಒಳಗೆ ಚಿಕ್ಕದಾಗಿರಲು ಕಾರಣ ಮೇಲೆ ಇದ್ದಿರಬಹುದಾದ ಶಿಖರದ ಭಾರವನ್ನು ಹೊರಲು ದಪ್ಪಗೋಡೆಯನ್ನು ಹೊಂದಿದೆ. ನವರಂಗಭಾಗವನ್ನು ವಿಶಾಲವಾಗಿಸಲು ೧೬ ಚಿತ್ರಕಾಂಡ ಕಂಬಗಳನ್ನು ಬಳಸಲಾಗಿದೆ. ವಾತಾಯನ ವ್ಯವಸ್ಥೆಗಾಗಿ ಅಂತರಾಳದಲ್ಲಿ ಎರಡು ಚಿಕ್ಕ ಜಾಲಂಧ್ರ ಹಾಗೂ ನವರಂಗದಲ್ಲಿ ಎರಡೂ ಕಡೆ ಎರಡೆರಡು ಹಾಗೂ ಮುಂಭಾಗದಲ್ಲಿ ಎರಡು ಜಾಲಂಧ್ರಗಳಿವೆ. ಈ ಜಾಲಂಧ್ರಗಳು ಗಂಗಾ, ಬ್ರಹ್ಮ, ಕಾರ್ತಿಕೇಯ, ವಿಷ್ಣು, ಮಿಥುನ ಮತ್ತು ಬಳ್ಳಿಯ ಸುರುಳಿಗಳನ್ನು ಹೊಂದಿದೆ. ಗರ್ಭಗೃಹ ಮತ್ತು ನವರಂಗ ಮಂಟಪದ ಪ್ರದೇಶದಲ್ಲಿ ಬಹು ಸುಂದರವಾದ ಪಂಚಶಾಖಾ ಬಾಗಿಲವಾಡಗಳನ್ನು ಹೊಂದಿದೆ. ಲಲಾಟದಲ್ಲಿ ಅಷ್ಟದಿಕ್ಪಾಲಕರಿಂದ ಕೂಡಿದ ನಟರಾಜ ಶಿಲ್ಪವಿದೆ. ಸೌಂದರ್‌ರಾಜನ್ ಅವರು ಅಲ್ಲಿ ದೊರೆತಿರುವ ಕ್ರಿ.ಶ. ೯೩೬ ರ ಶಾಸನದ ಆಧಾರದಿಂದ ಈ ದೇವಾಲಯವು ಬೀರ ಅಣ್ಣಿಗನ ಕಾಲದ್ದೆಂದು ನಿರ್ಣಯಿಸಿರುತ್ತಾರೆ.

### ಅಕ್ಕತಂಗಿ ಗುಡಿಗಳು

ಈ ಗುಡಿಗಳು ಜೋಡಿಗುಡಿಗಳಾಗಿದ್ದು ಎರಡೂ ಬೇರೆ ಬೇರೆ ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗವನ್ನು ಹೊಂದಿವೆ. ದೊಡ್ಡೇಶ್ವರ ದೇವಾಲಯವನ್ನು ಅನುಸರಿಸಿ ಕಟ್ಟಿದಂತೆ ಇವೆ. ಈ ಎರಡೂ ದೇವಾಲಯಗಳು ಶಿಥಿಲಾವಸ್ಥೆಯಲ್ಲಿವೆ. ದೇವಾಲಯದ ಕಪೋತದಲ್ಲಿ ಅಳವಾದ ಗೂಡುಗಳಿದ್ದು ಸಿಂಹಲಲಾಟಗಳಿಂದ ಶೋಭಿಸುತ್ತವೆ. ಗರ್ಭಗೃಹದ ಬಾಗಿಲವಾಡವನ್ನು ಕಪ್ಪುಕಲ್ಲಿನಲ್ಲಿ ಅಲಂಕಾರಿಕವಾಗಿ ಕೆತ್ತಲಾಗಿದೆ. ತಂಗಿ ದೇವಾಲಯವು ಅಕ್ಕ ದೇವಾಲಯದಂತೆ ಇದ್ದು ಒರಟು ಕೆತ್ತನೆಗಳು ಕಾಣಬರುತ್ತವೆ.

### ಸಿದ್ದೇಶ್ವರ ದೇವಾಲಯ

ಚೌಕಾಕಾರದ ಗರ್ಭಗೃಹವನ್ನು ಹೊಂದಿರುವ ಈ ದೇವಾಲಯುವು ಪ್ರತಿಬಂಧ ಅಧಿಷ್ಠಾನವನ್ನು ಹೊಂದಿದ್ದಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[57] ಅರ್ಧ ಮಂಟಪ ಮತ್ತು ನವರಂಗ ಮಂಟಪವನ್ನು ಹೊಂದಿರುವ ಈ ದೇವಾಲಯ ಭಾಗಶಃ ಜೀರ್ಣೋದ್ಧಾರವಾಗಿದೆ.

### ಮಲ್ಲೇಶ್ವರ ದೇವಾಲಯ

ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗ ಮಂಟಪವನ್ನು ಹೊಂದಿರುವ ಈ ದೇವಾಲಯವು ನವರಂಗ ಮಂಟಪದಲ್ಲಿ ನಾಲ್ಕು ಕಂಬಗಳನ್ನು ಬಳಸಲಾಗಿದೆ. ಬಾಗಿಲವಾಡವು ಬಹು ಹೆಚ್ಚಿನ ಕುಸುರಿ ಕೆಲಸದಿಂದ ಕೂಡಿದ ಶಾಖೆಗಳನ್ನು ಹೊಂದಿದೆ. ತಳಗಡೆ ಆನೆಯ ಮೇಲೆ

ಕುಳಿತ ಶಂಖನಿಧಿ, ಪದ್ಮನಿಧಿಗಳನ್ನು ಸೇರಿಸಲಾಗಿದೆ. ದ್ವಾರಬಂಧದಲ್ಲಿ ಕಪೋತದ ಭಾಗ ಬಿಡಿಸಿದ್ದು, ಅದರ ಮೇಲೆ ಪಂಚಮಂಗಲಗಳಿಂದ ಅಲಂಕೃತವಾದ ಗಜಲಕ್ಷ್ಮಿ ಶಿಲ್ಪವನ್ನು ಬಿಡಿಸಲಾಗಿದೆ. ಕಪೋತ ಭಾಗವು ಸಿಂಹಲಲಾಟದ ಗೂಡುಗಳಿಂದ ಅಲಂಕರಣಗೊಂಡಿದೆ.

## ಬರಗೂರು

ಬರಗೂರಿನ ಈಶ್ವರ ದೇವಾಲಯವು ನೊಳಂಬ ಅರಸ ಮಹೇಂದ್ರನೇ ಕಟ್ಟಿಸಿ ದಾನಗಳನ್ನು ನೀಡಿದ ಬಗ್ಗೆ ಶಾಸನವೊಂದು ತಿಳಿಸುತ್ತದೆ. ಶಾಸನದಲ್ಲಿ ಇದನ್ನು ಮಹೇಂದ್ರೇಶ್ವರನೆಂದು ಕರೆಯಲಾಗಿದೆ. ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಅರ್ಧಮಂಟಪದಲ್ಲಿ ಎರಡು ಕಂಬಗಳನ್ನು ಬಳಸಲಾಗಿದೆ. ನವರಂಗದಲ್ಲಿ ಬ್ರಹ್ಮಕಾಂತ ರೀತಿಯ ನಾಲ್ಕು ಕಂಬಗಳಿವೆ. ಮುಂದಿನ ನಂದಿಮಂಟಪದಲ್ಲಿ ೧೬ ಕಂಬಗಳನ್ನು ಬಳಸಲಾಗಿದೆ. ನವರಂಗದ ಮುಚ್ಚಿಗೆಯಲ್ಲಿ ಪದ್ಮವಿದೆ. ಗರ್ಭಗೃಹ ಮತ್ತು ನವರಂಗದ ಪ್ರವೇಶದಲ್ಲಿ ಸುಂದರವಾದ ಎರಡು ಬಾಗಿಲವಾಡಗಳಿವೆ. ಈ ದೇವಾಲಯವು ಒಂದನೆಯ ಮಹೇಂದ್ರನೇ ಕಟ್ಟಿಸಿರುವುದರಿಂದ ಈ ದೇವಾಲಯವು ಗಂಗರ ದೇವಾಲಯಗಳಂತೆ ಇದ್ದು, ಗಂಗವಾಡಿಯ ಶಿಲ್ಪಿಗಳು ಕಟ್ಟಿರುವ ಸಾಧ್ಯತೆ ಇದೆ.

## ಆವನಿ

ಆವನಿಯಲ್ಲಿ ದೇವಾಲಯ ಸಮುಚ್ಚಯವೊಂದಿದ್ದು, ಈ ಸಮುಚ್ಚಯದ ದೇವಾಲಯಗಳಲ್ಲಿ ಲಕ್ಷ್ಮಣೇಶ್ವರ, ಭರತೇಶ್ವರ, ಶತ್ರುಘ್ನೇಶ್ವರ ಮುಂತಾದ ದೇವಾಲಯಗಳು ನೊಳಂಬರ ಕಾಲಕ್ಕೆ ಸೇರುತ್ತವೆ. ಈ ದೇವಾಲಯಗಳನ್ನು ಇಮ್ಮಡಿ ಪೊಳಲ್ಚೋರ ಮತ್ತು ಅವನ ಮಗ ಇಮ್ಮಡಿ ಮಹೇಂದ್ರನ ಕಾಲದಲ್ಲಿ ಮತ್ತು ಪೊಳಲ್ಚೋರನ ಹೆಂಡತಿ ಕದಂಬ ವಂಶದ ದೀವಬ್ಬರಸಿ ಕಾಲದಲ್ಲಿ ತ್ರಿಭುವನ ಕರ್ತಾರದೇವ ಎಂಬುವವನು ಕಟ್ಟಿಸಿದಂತೆ ಶಾಸನದಲ್ಲಿ ಉಲ್ಲೇಖವಿದೆ. ಈತ ಕಟ್ಟಿಸಿದ ೩೦ ದೇವಾಲಯಗಳಲ್ಲಿ ಕೆಲವಾದರೂ ಆವನಿಯಲ್ಲಿದ್ದಿರಬೇಕು. ಹೀಗಾಗಿ ಈ ದೇವಾಲಯದ ಕಾಲವನ್ನು ಕ್ರಿ.ಶ.ಸು. ೯೬೧ ಕ್ಕೆ ಹಾಕಬಹುದಾಗಿದೆ. ಇದೇ ಆವರಣದಲ್ಲಿರುವ ಭರತೇಶ್ವರ ದೇವಾಲಯದ ಶಾಸನದಲ್ಲಿ ದೀವಬ್ಬರಸಿ ನೊಳಂಬ ನಾರಾಯಣೇಶ್ವರ ದೇವಾಲಯವನ್ನು ಕಟ್ಟಿಸಿದಂತೆ ಹೇಳಿದೆ. ಈ ದೇವಾಲಯವು ಭರತೇಶ್ವರವೇ ಅಗಿದ್ದಿರಬೇಕು. ದೀಪದ ಕಂಬವೊಂದು ಇವರ ಕಾಲದ ರಚನೆ.

## ಲಕ್ಷ್ಮಣೇಶ್ವರ ದೇವಾಲಯ

ಈ ದೇವಾಲಯವು ಸುಂದರವಾಗಿ ಹಾಗೂ ನಾಜೂಕಾಗಿ ನಿರ್ಮಿತವಾದ ದೇವಾಲಯ. ಅಧಿಷ್ಠಾನವು ಉಪಾನ, ಜಗತಿ, ಕುಮುದ ಹಾಗೂ ಪ್ರತಿಯನ್ನು ಹೊಂದಿದ್ದು, ಪ್ರತಿಬಂಧ ಅಧಿಷ್ಠಾನವನ್ನು ಹೊಂದಿದೆ. ದೇವಾಲಯದ ಉತ್ತರ ಭಾಗದ ಅಧಿಷ್ಠಾನದಲ್ಲಿನ ವಾರಿಮಾರ್ಗವು

ಬಹುಸುಂದರವಾಗಿದ್ದು ಮುಂಭಾಗದಲ್ಲಿ ವ್ಯಾಳದ ಭಾಗವನ್ನು ಹೊಂದಿದೆ. ಈ ವಾರಿಮಾರ್ಗದ ಬಳಿ ತ್ರಿಭುವನ ಕರ್ತಾರದೇವನ ಶಿಲ್ಪವಿದೆ. ಅಧಿಷ್ಠಾನವು ಕರ್ಣ, ಭದ್ರ ಭಾಗಗಳಿಂದ ಕೂಡಿದ್ದು ಹಾಗೆಯೇ ಮೇಲಕ್ಕೆ ಬಂದಿದೆ. ದೇವಾಲಯದ ಮೇಲ್ಭಾಗವು ಅಂದರೆ ಶಿಖರದ ಭಾಗವು ಇಟ್ಟಿಗೆ ಗಾರೆಯಿಂದ ಕೂಡಿದೆ. ಈ ಭಾಗ, ಕಾಲದಿಂದ ಕಾಲಕ್ಕೆ ಜೀರ್ಣೋದ್ಧಾರವಾಗಿರುವುದರಿಂದ ಮೂಲದಲ್ಲಿ ಹೇಗಿತ್ತೆಂದು ಊಹಿಸುವುದು ಕಷ್ಟ. ದೇವಾಲಯವು ಗರ್ಭಗೃಹ ತೆರೆದ ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಅಂತರಾಳದಲ್ಲಿ ಎರಡು ಕಂಬಗಳು ಬಂದಿದ್ದು, ಮೇಲಿನ ತೂಕವನ್ನು ಹೊರಲು ಸಮರ್ಥವಾಗಿವೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಅವು ಚಿತ್ರಕಾಂಡ ಸ್ತಂಭಗಳಾಗಿವೆ. ಅಂತರಾಳದ ಕಂಬಗಳು ಬ್ರಹ್ಮಕಾಂತ ರೀತಿಯಲ್ಲಿವೆ. ವಾತಾಯನದಲ್ಲಿ ನಟರಾಜ, ವಿಷ್ಣು, ಮಹಿಷಾಸುರಮರ್ಧಿನಿ, ಬಳ್ಳಿಗಳನ್ನು ಬಿಡಿಸಲಾಗಿದೆ.

ಭರತೇಶ್ವರ ದೇವಾಲಯವು ಲಕ್ಷ್ಮಣೇಶ್ವರದ ಎದುರಿಗಿದ್ದು ಎಡಮುಖವಾಗಿದೆ. ಬಹುತೇಕ ಜೀರ್ಣೋದ್ಧಾರವಾಗಿರುವ ಈ ದೇವಾಲಯದ ಅಧಿಷ್ಠಾನ ಮಾತ್ರ ಜೀರ್ಣೋದ್ಧಾರವಾಗದೆ ಉಳಿದಿದೆ. ಉಪಾನ, ವೃತ್ತಕುಮುದ, ಅದರ ಮೇಲೆ ಯಾಳಿ, ಆನೆ, ಸಿಂಹ ಮುಂತಾದ ಪ್ರಾಣಿಗಳನ್ನು ಬಿಡಿಸಿದೆ. ಮೇಲೆ ಪ್ರತಿ ಬಂದಿದೆ. ಗರ್ಭಗೃಹ, ತೆರೆದ ಅಂತರಾಳ, ನವರಂಗ ಮಂಟಪವನ್ನು ಹೊಂದಿರುವ ಇದರಲ್ಲಿ ಅರ್ಧ ಮಂಟಪದಲ್ಲಿ ಎರಡು ಕಂಬಗಳಿವೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ನವರಂಗ ಮಂಟಪದ ಮುಚ್ಚಿಗೆಯಲ್ಲಿ ಉಮಾಮಹೇಶ್ವರ ಮೂರ್ತಿಯು ಅಷ್ಟದಿಕ್ಪಾಲಕರ ಮಧ್ಯೆ ಕುಳಿತಿರುವಂತೆ ಬಿಡಿಸಲಾಗಿದೆ. ಬಾಗಿಲವಾಡದಲ್ಲಿ ಪೂರ್ಣಘಟಗಳಲ್ಲದೆ ಶಂಖನಿಧಿ, ಪದ್ಮನಿಧಿಗಳನ್ನು ಬಿಡಿಸಲಾಗಿದೆ. ಬಾಗಿಲವಾಡವನ್ನು ಬೂದು ಬಣ್ಣದ ಕಲ್ಲಿನಲ್ಲಿ ಕೆತ್ತಲಾಗಿದೆ.

**ನೊಣವಿನಕೆರೆ**

ಊರ ಹೊರಗೆ ನೊಣಬೇಶ್ವರ, ಶಾಂತೇಶ್ವರ, ಗರ್ಗೇಶ್ವರ, ಚೋಳೇಶ್ವರ ಮತ್ತು ಕಲ್ಲೇಶ್ವರ ಎಂಬ ದೇವಾಲಯಗಳಿವೆ. ಇವುಗಳಲ್ಲಿ ನೊಣಬೇಶ್ವರ ಮತ್ತು ಗರ್ಗೇಶ್ವರ ದೇವಾಲಯಗಳು ಪ್ರಾಚೀನವಾದವುಗಳು, ದೇವರಕೊಂಡಾರೆಡ್ಡಿಯವರು ಈ ದೇವಾಲಯಗಳನ್ನು ಗಂಗರವೆಂದು ಹೇಳಿದ್ದಾರೆ. ಆದರೆ ಅವುಗಳ ರಚನಾಕ್ರಮದಿಂದ ಇವು ನೊಳಂಬರದೆಂದು ಹೇಳಬಹುದಾಗಿದೆ. ತೆರೆದ ಅಂತರಾಳದಲ್ಲಿ ಬಳಸಿರುವ ಎರಡು ಕಂಬಗಳು ಹಾಗೆಯೇ ರಚನೆಯಲ್ಲಿ ನೊಳಂಬರ ದೇವಾಲಯದಂತಿರುವುದು ಹಾಗೂ ಈ ಪ್ರದೇಶ ನೊಳಂಬರ ಆಳ್ವಿಕೆಯಲ್ಲಿದ್ದದ್ದೂ ನಮ್ಮ ಊಹೆಗೆ ಕಾರಣ.

ಗರ್ಗೇಶ್ವರ ಮತ್ತು ನೊಳಂಬೇಶ್ವರ ದೇವಾಲಯಗಳ ಗರ್ಭಗೃಹ, ತೆರೆದ ಅಂತರಾಳ ಮತ್ತು ನವರಂಗನ್ನು ಮಂಟಪವನ್ನು ಹೊಂದಿರುವ ಈ ದೇವಾಲಯಗಳ ಮುಚ್ಚಿಗೆಯಲ್ಲಿ ಪದ್ಮವನ್ನು

ಬಿಡಿಸಿದೆ. ಕಂಬಗಳು ಬ್ರಹ್ಮಕಾಂತ ರೀತಿಯವಾಗಿದ್ದು ಗಂಗರ ಪ್ರಭಾವವನ್ನು ಸೂಚಿಸುತ್ತವೆ. ಗೋಡೆಗಳು ಇಟ್ಟಿಗೆಯವು.

**ಅರಳಗುಪ್ಪೆ**

ಗ್ರಾಮದ ಪೂರ್ವಕ್ಕೆ ಕೆರೆಯ ಬಳಿ ಕಲ್ಲೇಶ್ವರ ದೇವಾಲಯ ಆವರಣವಿದ್ದು, ಈ ಆವರಣದಲ್ಲಿ ಐದು ದೇವಾಲಯಗಳಿವೆ. ಇವುಗಳಲ್ಲಿ ದೊಡ್ಡದು ಹಾಗೂ ಮುಖ್ಯವಾದದ್ದು ಕಲ್ಲೇಶ್ವರ ದೇವಾಲಯ. ಇದು ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ದೇವರಕೊಂಡಾರೆಡ್ಡಿ, ಷೇಕ್ ಆಲಿಯವರು ಈ ದೇವಾಲಯವನ್ನು ಗಂಗರ ಕಾಲದ್ದೆಂದು ಹೇಳಿದ್ದರೆ, ಎಂ.ಎಸ್. ಕೃಷ್ಣಮೂರ್ತಿಯವರು ನೊಳಂಬರ ಕಾಲದೆಂದು ಹೇಳಿರುತ್ತಾರೆ. ಈ ಹೇಳಿಕೆಗೆ ಸಮರ್ಥನೆಯಾಗಿ ಈ ದೇವಾಲಯದಲ್ಲಿ ಶಂಖನಿಧಿ, ಪದ್ಮನಿಧಿಗಳಿರುವುದು. ಬಾಗಿಲ ಶಲಾಕಾಭಾಗದಲ್ಲಿ ಗಂಗಾಯಮುನಾ ಶಿಲ್ಪಗಳಿದ್ದು, ಇದು ನೊಳಂಬರದೆಂದು ಹೇಳಲು ಕಾರಣವಾಗಿದೆ. ಈ ದೇವಾಲಯದ ಮುಂದೆ ಇದಕ್ಕೆ ಹೊಂದಿಕೊಂಡಂತೆ ತ್ರಿಕೂಟಾಚಲ ಮಾದರಿಯಲ್ಲಿ ಉಮಾಮಹೇಶ್ವರ ಮಂಟಪ, ಸೂರ್ಯ ಮಂಟಪ ಹಾಗೂ ವಿಷ್ಣು ಮಂಟಪಗಳನ್ನು ರಚಿಸಲಾಗಿದೆ.

ಈ ದೇವಾಲಯದಲ್ಲಿ ಬಳಸಿರುವ ಕಂಬಗಳು ರುದ್ರಕಾಂತ ಮಾದರಿಯವಾಗಿದ್ದು ಗಂಗರ ಪ್ರಭಾವ ಈ ದೇವಾಲಯದಲ್ಲಿ ಕಾಣಬರುತ್ತದೆ. ಈ ದೇವಾಲಯ ಪ್ರಸಿದ್ಧವಾಗಿರುವುದು, ನವರಂಗದಲ್ಲಿರುವ ನಟರಾಜ ಶಿಲ್ಪದಿಂದ, ಈ ಶಿಲ್ಪವು ಅಷ್ಟದಿಕ್ಪಾಲಕ ಶಿಲ್ಪಗಳ ಮಧ್ಯೆ ಮುಚ್ಚಿಗೆಯಲ್ಲಿದ್ದು ಉತ್ಕೃಷ್ಟ ಶಿಲ್ಪಗಳ ಸಾಲಿಗೆ ಸೇರುವಂತಹದಾಗಿದೆ. ದೇವಾಲಯದ ಗೋಡೆಗಳು ಇಟ್ಟಿಗೆಯದಾಗಿದ್ದು ಸಾಕಷ್ಟು ಬಾರಿ ಜೀರ್ಣೋದ್ಧಾರವಾದಂತೆ ಕಂಡುಬರುತ್ತದೆ. ಮೇಲಿನ ನಿರ್ಮಾಣವೂ ಸಹ ಯಾವ ಕಾಲದ್ದೆಂದು ಹೇಳಲಾಗುವುದಿಲ್ಲ. ನವರಂಗದಲ್ಲಿ ಬೆಳಕು ಬರಲು ವಲ್ಲಿ ವಾತಾಯನವನ್ನು ಇರಿಸಲಾಗಿದೆ. ಉಳಿದ ದೇವಾಲಯಗಳು ಈ ಲಕ್ಷಣಗಳನ್ನು ಹೊಂದಿಲ್ಲದಿರುವುದರಿಂದ ಅವನ್ನು ಈ ಕಾಲಕ್ಕೆ ಸೇರಿಸಲು ಆಧಾರಗಳು ಸಾಲವು.

**ಧರ್ಮಪುರಿ**

ಶಾಸನಗಳಲ್ಲಿ ಇದನ್ನು ತಗಡೂರು ಎಂದು ಕರೆಯಲಾಗಿದೆ. ಕ್ರಿ.ಶ.೮೯೨ ರ ಮಹೇಂದ್ರನ ಶಾಸನವೊಂದು ಇಲ್ಲಿ ದೊರೆತಿದ್ದು ಚಂದಿಯಣ್ಣ, ನಿಧಿಯಣ್ಣ ಎಂಬಿಬ್ಬರು ಇಲ್ಲಿ ಬಸದಿಯನ್ನು ಕಟ್ಟಿಸಿದಂತೆ ಉಲ್ಲೇಖವಾಗಿದೆ. ಆದರೆ ಬಸದಿ ದೊರೆತಿಲ್ಲ. ಬಹುಶಃ ಕಾಲಗರ್ಭದಲ್ಲಿ ಸೇರಿ ಹಾಳಾಗಿರಬೇಕು. ಊರಿನ ಕೋಟೆ ಪ್ರದೇಶದಲ್ಲಿ ಮಲ್ಲಿಕಾರ್ಜುನ ದೇವಾಲಯದಲ್ಲಿ ಆವರಣವಿದ್ದು,

ಇಲ್ಲಿನ ಮಲ್ಲಿಕಾರ್ಜುನ ಮತ್ತು ಕಾಮಾಕ್ಷಿ ದೇವಾಲಯಗಳು ನೊಳಂಬರ ಕಾಲದವೆಂದು ವಿದ್ವಾಂಸರು ಗುರುತಿಸಿದ್ದಾರೆ.[58] ಮಲ್ಲಿಕಾರ್ಜುನ ದೇವಾಲಯದ ಗರ್ಭಗೃಹ, ತೆರೆದ ಅಂತರಾಳ, ನವರಂಗ ಮತ್ತು ಮುಖಮಂಟಪಗಳಿವೆ. ಮುಖಮಂಟಪ ಇತ್ತೀಚಿನದು. ಅಂತರಾಳದಲ್ಲಿ ಅಡ್ಡ ತೊಲೆಯನ್ನು ಹೊರಲು ಎರಡು ಕಂಬಗಳನ್ನು ಸೇರಿಸಲಾಗಿದೆ. ನವರಂಗದಲ್ಲಿನ ನಾಲ್ಕು ಕಂಬಗಳ ಹಿಂಡಿಭಾಗದಲ್ಲಿ ವಿವಿಧ ದೇವತೆಯ ಶಿಲ್ಪಗಳಿವೆ. ಮುಚ್ಚಿಗೆಯಲ್ಲಿ ಅಷ್ಟದಿಕ್ಪಾಲಕರ ಮಧ್ಯೆ ಇರುವ ನಟರಾಜ ಶಿಲ್ಪವಿದೆ.

ಈ ದೇವಾಲಯದ ಪಕ್ಕದ ಕಾಮಾಕ್ಷಿ ದೇವಾಲಯದ ತಳಪಾಯದಲ್ಲಿ ರಾಮಾಯಣದ ಶಿಲ್ಪಗಳನ್ನು ಬಿಡಿಸಲಾಗಿದೆ. ಎತ್ತರವಾದ ಅಧಿಷ್ಠಾನವನ್ನು ಇದು ಹೊಂದಿದೆ. ಮಧ್ಯೆ 'ಗಳ' ಭಾಗದಲ್ಲಿ ರಾಮಾಯಣದ ಶಿಲ್ಪಗಳು ಬಂದಿವೆ. ಉಳಿದಂತೆ ಕಂಬಗಳು ಮಲ್ಲಿಕಾರ್ಜುನ ದೇವಾಲಯದಲ್ಲಿರುವಂತೆಯೇ ಇವೆ. ತಳವಿನ್ಯಾಸವೂ ಹಾಗೆಯೇ ಇದೆ.

**ಕಂಪಿಲಿ ನೊಳಂಬರ ವಾಸ್ತು ರಚನೆಗಳು:–**

**ಕಂಪಿಲಿ**

ಕಂಪಿಲಿಯು ನೊಳಂಬರ ರಾಜಧಾನಿಯಾಗಿದ್ದರೂ ಅಲ್ಲಿ ನೊಳಂಬರ ಅವಶೇಷಗಳು ಕಡಿಮೆ. ಊರ ಹೊರಗಿನ ಕೆರೆಯ ಕಟ್ಟೆಯ ಕೆಳಗಿರುವ ಸೋಮೇಶ್ವರ ದೇವಾಲಯವು ನೊಳಂಬರ ರಚನೆಯಾಗಿದೆ. ದೇವಾಲಯದ ರಚನೆಯ ಬಗ್ಗೆ ಯಾವ ಶಾಸನಾಧಾರವಿಲ್ಲದಿದ್ದರೂ ನೊಳಂಬರ ರಾಜಧಾನಿಯಾಗಿದ್ದಾಗ ರಚಿಸಿರಬಹುದಾದ ಸೋಮೇಶ್ವರ ದೇವಾಲಯವು ಉತ್ತರದ ರಚನೆಗಳಿಗಿಂತ ಭಿನ್ನವಾಗಿದೆ. ಈಗ ದೇವಾಲಯದ ಗರ್ಭಗೃಹ ಮಾತ್ರ ಉಳಿದಿದ್ದು ಉಳಿದ ಭಾಗವನ್ನು ನೂತನವಾಗಿ ರಚಿಸಲಾಗಿದೆ. ಹೀಗಾಗಿ ಹಿಂದೆ ಇದ್ದಿರಬಹುದಾದ ತೆರೆದ ಅಂತರಾಳವಾಗಲೀ, ಗರ್ಭಗೃಹವಾಗಲೀ ಈಗ ಉಳಿದಿಲ್ಲ. ಆದರೆ ಒಳಗೆ ಲಿಂಗದ ಬದಲಿಗೆ ಮೂರ್ತಿಶಿಲ್ಪವಾಗಿರುವುದರಿಂದ ಇದು ಹೇಮಾವತಿ ಸಿದ್ದೇಶ್ವರನ ದೇವಾಲಯದ ಪ್ರತಿರೂಪವಿರಬೇಕೆಂದು ಭಾವಿಸಬಹುದಾಗಿದೆ. ದೇವಾಲಯದ ಅಧಿಷ್ಠಾನವು ಭೂಮಿಯಲ್ಲಿ ಸೇರಿರುವುದರಿಂದ ಅದರ ಭಾಗಗಳ ಬಗ್ಗೆ ಸ್ಪಷ್ಟವಾಗಿ ಗುರುತಿಸಲು ಸಾಧ್ಯವಿಲ್ಲ. ಗರ್ಭಗೃಹದ ಹಿಂಬದಿಯಲ್ಲಿ ಬ್ರಹ್ಮಕಾಂತ ಮಾದರಿಯ ಉಬ್ಬುಕಂಬಗಳನ್ನು ಹೊಂದಿದೆ. ಮೇಲೆ ಫಲಕ ಸರಳ ಬೋದಿಗೆಗಳು ಬಂದಿದೆ. ಮೇಲಿನ ಕಪೋತ ಭಾಗವು ಅಷ್ಟೇನೂ ಸುಂದರ ರಚನೆಯಲ್ಲ. ಶಿಖರದ ಭಾಗವು ಬೇತೂರಿನ ದೇವಾಲಯದಂತೆ ಹಂತ ಹಂತವಾಗಿದ್ದಿರಬೇಕು. ಶಿಖರ ಮುಂದಿನ ಕಾಲದ ರಚನೆಯಾಗಿರಬೇಕು.

**ಮಲ್ಲಯ್ಯನಗುಡ್ಡ**

ತೆಕ್ಕಲಕೋಟೆಗೆ ಪೂರ್ವಕ್ಕೆ ಸುಮಾರು ಐದು ಕಿ.ಮೀ. ದೂರದಲ್ಲಿ ಈ ಗುಡ್ಡವಿದ್ದು, ಹರವಿನ ಮಲ್ಲಯ್ಯ ಅಥವಾ ಹರವಿನ ಮಲ್ಲೇಶ್ವರನ ಗುಡಿಯೆಂದು ಅಲ್ಲಿನ ಸ್ಥಳೀಯರು ಹೆಸರಿಸುವ ಗುಡಿ ಇದೆ. ಈ ದೇವಾಲಯ ಸಂಕೀರ್ಣದಲ್ಲಿ ನಾಲ್ಕು ದೇವಾಲಯಗಳಿದ್ದು ಅವುಗಳಲ್ಲಿ ಒಂದು ನೊಳಂಬರ ಕಾಲದ ಕಟ್ಟಡವಾಗಿದೆ. ಇದು ಹಿಂದೆ ಮೈಲಾರನ ದೇವಾಲಯವಾಗಿತ್ತೆಂಬ ಸಂಗತಿಯನ್ನು ಅಲ್ಲಿ ದೊರೆತಿರುವ ಶಾಸನದಿಂದ ತಿಳಿಯುತ್ತದೆ. ಈ ಶಾಸನದ ಕಾಲ ಕ್ರಿ.ಶ. ೧೦೧೭ ಆಗಿದ್ದು, ನೊಳಂಬ ಉದಯಾದಿತ್ಯದೇವನು ಇಲ್ಲಿನ ಮೈಲಾರದೇವರಿಗೆ ಸಿರಿಯೂರನ್ನು ದತ್ತಿ ನೀಡಿದಂತೆ ತಿಳಿಸುತ್ತದೆ. ಹೀಗಾಗಿ ಈ ದೇವಾಲಯವು ಇವನ ಕಾಲಕ್ಕೆ ಇತ್ತು, ಅಥವಾ ಇವನ ಕಾಲಕ್ಕೆ ರಚನೆಯಾಗಿತ್ತೆಂದು ಹೇಳಬಹುದು. ಈ ದೇವಾಲಯದ ಹೊರಗೋಡೆಗಳು ಸಾಕಷ್ಟು ಬದಲಾಗಿದ್ದು ಮೂಲ ಸ್ವರೂಪ ತಿಳಿಯುವುದಿಲ್ಲ. ದೇವಾಲಯವು ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ದೇವಾಲಯದ ಮುಂದೆ ಪ್ರತ್ಯೇಕ ನಂದಿ ಮಂಟಪವಿದೆ. ತೆರೆದ ಅಂತರಾಳದಲ್ಲಿ ಕಂಬಗಳಿಲ್ಲ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಹೇಮಾವತಿಯ ನೊಳಂಬರ ಕಂಬಗಳಿಗೆ ಇವನ್ನು ಹೋಲಿಸುವಂತಿಲ್ಲ. ಚೌಕಾಕಾರದ ಕಂಬಗಳು ಇವಾಗಿದ್ದು, ಅಲಂಕಾರವಾಗಲೀ ಚಿತ್ರಗಳ ಕೆತ್ತನೆಯಾಗಲಿ ಈ ಕಂಬಗಳಲ್ಲಿ ಇಲ್ಲ. ಬಾಗಿಲವಾಡವೂ ಸಹ ಅಲಂಕಾರಿಕವಾಗಿಲ್ಲ. ಇದೊಂದು ಸಾಧಾರಣ ದೇವಾಲಯವೆನ್ನಬಹುದು. ಈಗಿನ ಗರ್ಭಗೃಹದಲ್ಲಿ ಕುಮಾರಸ್ವಾಮಿ, ಭೈರವ ಮತ್ತು ಕಾಳಿಕಾದೇವಿಯ ಮೂಲ ವಿಗ್ರಹಗಳಿವೆ. ಈ ಮೂರು ವಿಗ್ರಹಗಳು ವಿಜಯನಗರ ಕಾಲದವು. ಈ ದೇವಾಲಯದಲ್ಲಿದ್ದಿರಬಹುದಾದ ಮೊದಲ ಮೈಲಾರ (ಭೈರವ) ವಿಗ್ರಹ ಈಗ ಮಲ್ಲಯ್ಯನ ದೇವಾಲಯದ ಗೋಡೆಗೆ ಸೇರಿಸಿರುವ ಭಗ್ನ ಶಿಲ್ಪವಾಗಿದೆ. ಕಾಳಿಯ ಶಿಲ್ಪವೂ ಭಗ್ನಗೊಂಡು ದೇವಾಲಯದ ಹೊರಗೆ ಬಿದ್ದಿದೆ. ನಂದಿಮಂಟಪವೂ ಸಾಕಷ್ಟು ಬದಲಾಗಿದೆ. ನಂದಿ ಶಿಲ್ಪವೂ ದೇವಾಲಯದ ರಚನಾಕಾಲದ್ದಾಗಿದ್ದು ಅಲ್ಲಿಯೇ ಇದ್ದ ಕಲ್ಲನ್ನು ನಂದಿ ಶಿಲ್ಪವನ್ನಾಗಿ ತಿದ್ದಲಾಗಿದೆ.

**ಹಂಪೆ**

ಹಂಪೆಯ ವಿರೂಪಾಕ್ಷ ದೇವಾಲಯದ ಪಕ್ಕದಲ್ಲಿರುವ ಮನ್ಮುಖ ಕುಂಡದ ಪಶ್ಚಿಮಕ್ಕಿರುವ ದೇವಾಲಯದ ಸಮುಚ್ಚಯದಲ್ಲಿ ಎರಡು ದೇವಾಲಯಗಳು ನೊಳಂಬರ ಕಾಲದವಾಗಿವೆ. ಕ್ರಿ.ಶ. ೧೦೧೮ ರಲ್ಲಿ ಉದಯಾದಿತ್ಯನು ಪಂಪಾತೀರ್ಥಕ್ಕೆ ಬಂದಿದ್ದಂತೆ ಉಲ್ಲೇಖವಿರುವುದರಿಂದ ಬಹುಶಃ ಅವನ ಕಾಲಕ್ಕೆ ಈ ದೇವಾಲಯಗಳು ರಚನೆಯಾಗಿರಬೇಕು. ದುರ್ಗಾದೇವಾಲಯ, ನಾಗೇಶ್ವರ ದೇವಾಲಯ ಮತ್ತು ಕೆಲವು ಶಿಥಿಲ ದೇವಾಲಯಗಳು ಈ ಕಾಲದ್ದಾಗಿರಬೇಕು.

ದುರ್ಗಾದೇವಾಲಯವು ಭದ್ರ, ಕರ್ಣಗಳನ್ನು ಹೊಂದಿದ್ದು ಉಪಾನ ವೃತ್ತ, ಕುಮುದಗಳ ಮತ್ತು ಪಟ್ಟಿಕೆಯನ್ನು ಹೊಂದಿದೆ. ಹೊರ ಭಿತ್ತಿಯಲ್ಲಿ ಬ್ರಹ್ಮಕಾಂತರೀತಿಯ ನೀಳವಾದ ಉಬ್ಬುಕಂಬಗಳ ಮೇಲೆ, ಸರಳ ಬೋದಿಗೆ ಅದರ ಮೇಲೆ ಕಪೋತವಿದೆ. ನಿರಾಡಂಬರವಾಗಿರುವ ಈ ದೇವಾಲಯವು ದ್ವಿತಳ ವಿಮಾನವನ್ನು ಹೊಂದಿದ್ದು ಭದ್ರ ಕರ್ಣಗಳ ರಚನೆಯಿಲ್ಲ. ಮೇಲಿನ ಸ್ತೂಪ ಚೌಕಾಕಾರವಾಗಿದೆ. ದೇವಕೋಷ್ಠಗಳ ಸ್ಥಳಗಳಲ್ಲಿ ಉಬ್ಬು ಕಂಬಗಳನ್ನು ಬಿಡಿಸಿದೆಯಾದರೂ ಗೂಡುಗಳನ್ನು ಆಳವಾಗಿ ಬಿಡಿಸಿಲ್ಲ. ಚಿಕ್ಕ ಅಂತರಾಳ ಹಾಗೂ ತೆರೆದ ನವರಂಗವನ್ನು ಹೊಂದಿದೆ. ನವರಂಗದ ಮುಚ್ಚಿಗೆಯು ಅಂಚಿನಲ್ಲಿ ಕೆಳಮುಖವಾಗಿ ಬಾಗಿದೆ. ಮಧ್ಯದ ಕಂಬಗಳು ಎತ್ತರವಾಗಿದ್ದು ಸುತ್ತು ಕಂಬಗಳು ಮುಚ್ಚಿಗೆ ಬಾಗಿರುವುದರಿಂದ ಕುಳ್ಳಾಗಿ ಕಾಣುತ್ತವೆ. ತಳಗೆ ಚೌಕಕಾರ ಮಧ್ಯೆ ಗುಂಡಾಗಿ ಮತ್ತೆ ಚೌಕಾಕಾರವಾಗಿ ಮೇಲೆ ಗುಂಡಾದ ಕೊಡದ ಭಾಗವನ್ನು ಹೊಂದಿದೆ. ಇದರ ಮೇಲೆ ನೇರವಾಗಿ ಬೋದಿಗೆ ಬಂದಿದೆ. ಅಂತರಾಳದ ಬಾಗಿಲವಾಡವು ಬಹು ಸುಂದರವಾಗಿದ್ದು ಪಂಚ ಶಾಖೆಗಳನ್ನು ಹೊಂದಿದೆ. ಬಾಗಿಲ ತಳಗಡೆ ಸಿಂಹಗಳು, ದ್ವಾರಪಾಲಕ ಹಾಗೂ ಭಕ್ತರನ್ನು ಬಿಡಿಸಿದ್ದು, ತಳಲಾಲಟದಲ್ಲಿ ಗಜಲಕ್ಷ್ಮಿ ಇದೆ. ಮೇಲಿನ ಲಲಾಟದಲ್ಲಿ ಎರಡು ಸಿಂಹಗಳ ಮಧ್ಯೆ ಮಹಿಷಮರ್ದಿನಿ ಶಿಲ್ಪವಿದೆ. ಗರ್ಭಗೃಹದಲ್ಲಿಯೂ ಮಹಿಷಮರ್ದಿನಿಯ ಶಿಲ್ಪವಿದ್ದು, ಮುಂದೆ ವಾಹನವಾದ ಸಿಂಹವನ್ನು ಬಹು ಅಲಂಕಾರಿಕವಾಗಿ ಬಿಡಿಸಲಾಗಿದೆ.

ಇದೇ ದೇವಾಲಯದಲ್ಲಿರುವ ನಾಗೇಶ್ವರ ದೇವಾಲಯದ ತಳವಿನ್ಯಾಸವು ಸಹ ಮೇಲಿನದರ ರೀತಿಯಲ್ಲಿಯೇ ಇದ್ದರೂ, ವೃತ್ತ ಕುಮುದಕ್ಕೆ ಬದಲಾಗಿ ತ್ರಿಪಟ್ಟ ಕುಮುದವಿದೆ. ಮೇಲಿನ ಶಿಖರ ಮೂಲದ ಶಿಖರದ ಮೇಲೆ ಗಾರೆಯಿಂದ ಮುಚ್ಚಲಾಗಿದೆ. ಅಂತರಾಳದ ಬಾಗಿಲವಾಡ ಅಲಂಕಾರಿಕವಾಗಿಲ್ಲದೆ ಸಾಮಾನ್ಯವಾಗಿದೆ. ಉಳಿದ ಕೆಲವು ದೇವಾಲಯಗಳು ಹೆಚ್ಚು ಜೀರ್ಣಾವಸ್ಥೆಯಲ್ಲಿದ್ದು, ಶಿಥಿಲವಾಗಿರುವುದರಿಂದ ಅವುಗಳ ರಚನಾಕಾಲದ ಲಕ್ಷಣಗಳನ್ನು ಗಮನಿಸಲು ಸಾಧ್ಯವಾಗುವುದಿಲ್ಲ.

**ಬಾಗಳಿ**

ಕ್ರಿ.ಶ. ೧೦೧೮ರ ಶಾಸನದ ಪ್ರಕಾರ ಬಾಗಳಿಯ ಕಲ್ಲೇಶ್ವರಕ್ಕೆ ಕಂಪಲಿಯಿಂದ ಬಂದು ಪಂಪಾತೀರ್ಥದಲ್ಲಿದ್ದು ನೊಳಂಬ ಅರಸ ಉದಯಾದಿತ್ಯ ದಾನ ನೀಡಿದ ಉಲ್ಲೇಖವಿದೆ. ಇದೇ ಕಾಲದಲ್ಲಿ ಸೋಮಸಿಂಗಭಳಾರನು ಕಲ್ಲೇಶ್ವರದೇವರನ್ನು ಪೂಜಿಸಿದಂತೆ ಹೇಳಿಕೊಂಡಿದ್ದಾನೆ. ಈ ಕಾರಣಗಳಿಂದ ಕಲ್ಲೇಶ್ವರ ದೇವಾಲಯವು ಕ್ರಿ.ಶ. ೧೦೧೮ ರ ನೊಳಂಬರ ಕಾಲದ ರಚನೆಯಾಗಿರಬೇಕು. ಇದಲ್ಲದೆ ಈ ದೇವಾಲಯುವನ್ನು ರಚಿಸಿದ ಆಚಾರಿಗಳಲ್ಲಿ ಪ್ರಮುಖವಾದ ಹೆಸರು ನೊಳಂಬಾಚಾರಿಯದು. ಈ ಎಲ್ಲಾ ಕಾರಣಗಳಿಂದ ಈ ದೇವಾಲಯ ಕಂಪಿಲಿಯ ನೊಳಂಬರ

ಕಾಲದ ಉತ್ತಮ ರಚನೆ ಎನ್ನಬಹುದು. ಸಿ.ಎಸ್. ಪಾಟೀಲರು ಈ ದೇವಾಲಯದ ರಚನಾ ಕಾಲದ ಬಗ್ಗೆ ನಿರ್ದಿಷ್ಟವಾಗಿ ಏನನ್ನು ಹೇಳುವುದಿಲ್ಲ. ಸೌಂದರ್‌ರಾಜನ್ ಅವರು ರಾಷ್ಟ್ರಕೂಟ-ನೊಳಂಬ ರೀತಿಯಲ್ಲಿದೆ ಎಂದು ಹೇಳಿ ಕ್ರಿ.ಶ. ೧೧ನೆಯ ಶತಮಾನದ ಮಧ್ಯಭಾಗಕ್ಕೆ ಸೇರಿಸುತ್ತಾರೆ. ಈಗಿನ ಕಲ್ಲೇಶ್ವರ ದೇವಾಲಯ ಸಮುಚ್ಚಯದಲ್ಲಿ ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಹೊಯ್ಸಳ ರಚನೆಗಳನ್ನು ಕಾಣುತ್ತೇವೆ. ಈ ದೇವಾಲಯವು ಕೂಟ, ಕರ್ಣ, ಭದ್ರ ಭಾಗಗಳನ್ನು ಹೊಂದಿದೆ. ಅಧಿಷ್ಠಾನದಲ್ಲಿ ಪದ್ಮೋಪಾನ, ತ್ರಿಪಟ್ಟ, ಕುಮುದ ಹಾಗೂ ಕಪೋತವನ್ನು ಹೊಂದಿದೆ. ಕಪೋತದ ಮೇಲೆ ಪ್ರತಿ ಬರಬೇಕಿತ್ತು. ಆದರೆ ಕೆತ್ತನೆಗಳಿಲ್ಲ. ಮೇಲೆ ವೇದಿ ಬಂದಿದೆ. ಭಿತ್ತಿಯಲ್ಲಿ ಹೆಚ್ಚು ಉಬ್ಬಿದ ಬ್ರಹ್ಮಕಾಂತ ಕಂಬಗಳನ್ನು ಬಿಡಿಸಿದ್ದು, ದೇವಕೋಷ್ಠಗಳ ಸ್ಥಾನದಲ್ಲಿ ಸಣ್ಣ ದೇವಾಲಯದ ಮಾದರಿಗಳನ್ನು ಬಿಡಿಸಿದೆ. ಕಪೋತದಲ್ಲಿ ಅನೇಕ ಚಿಕಣಿ ಮಿಥುನ ಶಿಲ್ಪಗಳಿವೆ. ಇದರ ಮೇಲಿನ ಶಿಖರವು ಇಟ್ಟಿಗೆ ಗಾರೆಯದಾಗಿದ್ದು, ಮಧ್ಯ ಕಾಲದಲ್ಲಿ ಜೀರ್ಣೋದ್ಧಾರವಾಗಿದೆ.

ಗರ್ಭಗೃಹ, ಉದ್ದವಾದ ಮುಚ್ಚಿದ ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ಇದರ ಮುಂದೆ ಹೊಯ್ಸಳರ ಕಾಲದ ವಿಶಾಲವಾದ ನವರಂಗವಿದೆ. ದೇವಾಲಯಕ್ಕೆ ನೇರವಾಗಿ ಮುಂದೆ ಸೂರ್ಯಮಂಟಪವಿದೆ. ಗರ್ಭಗೃಹದಲ್ಲಿ ಯಾವ ಬದಲಾವಣೆಯೂ ಆಗಿಲ್ಲ. ಮೊದಲು ತೆರೆದ ಅಂತರಾಳವಿತ್ತು. ಹೊಯ್ಸಳರ ಕಾಲದಲ್ಲಿ ಅಂತರಾಳವನ್ನು ಮುಚ್ಚಿ ಬಾಗಿಲವಾಡವನ್ನು ಸೇರಿಸಲಾಗಿದೆ. ನವರಂಗದಲ್ಲಿ ನಾಲ್ಕು ಕಂಬಗಳಿದ್ದು ಮುಚ್ಚಿಗೆಯ ಮಧ್ಯೆ ಕಮಲವಿದೆ. ಬಲಗೋಡೆಯಲ್ಲಿ ಯತಿಯ ಮತ್ತು ಆನೆಯ ಶಿಲ್ಪವಿದೆ. ಈ ಯತಿ ದೇವಾಲಯದ ಮೂರು ದಿಕ್ಕನ್ನು ಕಟ್ಟಿಸಿದಂತೆ ಹೇಳಿದೆ. ದೇವಾಲಯದ ಮುಂಭಾಗದ ಬಾಗಿಲವಾಡವು ಸಹ ಹೊಯ್ಸಳರ ರಚನೆಯಾಗಿದೆ. ದಕ್ಷಿಣದ ಬಾಗಿಲವಾಡವು ಈ ಕಾಲದ್ದೇ ಆಗಿದೆ. ಸಪ್ತ ಶಾಖೆಗಳನ್ನು ಹೊಂದಿರುವ ಈ ಬಾಗಿಲವಾಡದಲ್ಲಿ ಕೆಳಗಿನ ಲಲಾಟದಲ್ಲಿ ಗಜಲಕ್ಷ್ಮಿ ಇದ್ದರೆ, ಮೇಲಿನ ಲಲಾಟದಲ್ಲಿ ನಟರಾಜ ಗಣಪತಿ ಶಿವಲಿಂಗಗಳಿವೆ. ಇದು ಸ್ಪಷ್ಟವಾಗಿ ಕಂಪಿಲಿಯ ನೊಳಂಬರ ಕೊಡುಗೆಯೆಂಬುದರಲ್ಲಿ ಸಂಶಯವಿಲ್ಲ. ದೇವಾಲಯದ ಅಧಿಷ್ಠಾನದ ಭಾಗಗಳಲ್ಲಿ ಅನೇಕ ಚಿಕಣಿ ಶಿಲ್ಪಗಳನ್ನು ಬಿಡಿಸಿದ್ದು, ಅವುಗಳ ಪಕ್ಕದಲ್ಲಿ ಶಾಸನಗಳಿವೆ. ಒಂದೆರಡು ಕಡೆ 'ನೊಳಂಬಂ ಕೇಳ್' ಎಂದಿದೆ. ನವರಂಗದ ಮಧ್ಯದ ಕಂಭಗಳಲ್ಲಿ ಯಾವುದೇ ಅಲಂಕರಣವಿಲ್ಲ. ಆದರೆ ಅಂತರಾಳದ ಗೋಡೆಗೆ ಸೇರಿಸಿರುವ ಕಂಭವು ಚಿತ್ರಕಾಂತ ಕಂಬವಾಗಿದ್ದು ನಾಲ್ಕು-ಎಂಟು-ನಾಲ್ಕು ಮುಖಗಳನ್ನು ಹೊಂದಿವೆ. ಮೇಲಿನ ಪಿಂಡಿಯಲ್ಲಿ ಮಾಲಾಲಂಕಾರವಿದ್ದು ನೃತ್ಯಗಾರರನ್ನು ಬಿಡಿಸಲಾಗಿದೆ. ನವರಂಗಗಳ ಕಂಬಗಳು ದಪ್ಪವಾಗಿದ್ದು ನಾಲ್ಕು-ಎಂಟು-ನಾಲ್ಕು ಮುಖಗಳನ್ನು ಪಡೆದಿದ್ದರೂ ಚಿತ್ರಗಳನ್ನು ಬಿಡಿಸಿಲ್ಲ.

## ವಿಪ್ರ

ವಿಪ್ರಗ್ರಾಮವು ಈಗ ಹಾಳುಗ್ರಾಮವಾಗಿದ್ದು ಗಂಗಾವತಿಗೆ ಸಮೀಪದ ದೇವಾಘಾತದ ಬಳಿ ಇದೆ. ಈ ಸ್ಥಳದಲ್ಲಿ ಎರಡು ಕಡೆ ದೇವಾಲಯುಗಳು ರಚಿತವಾಗಿವೆ. ದೇವಾಘಾತದಲ್ಲಿ ಅಮೃತೇಶ್ವರ ದೇವಾಲಯವಿದೆ. ಹಾಳುಗ್ರಾಮ ವಿಪ್ರದಲ್ಲಿ ಶಂಕರಲಿಂಗನ ಗುಡಿಯಿದೆ. ಇವೆರಡರ ನಡುವೆ ದುರ್ಗಾ ಗುಡಿ ಇದೆ. ಕಂಪಿಲಿಯ ನೊಳಂಬರ ಒಂದೆರಡು ಶಾಸನಗಳಲ್ಲಿ ವಿಪ್ರದ ನೆಲೆವೀಡಿನ ಉಲ್ಲೇಖ ಬಂದಿರುವುದರಿಂದ ಈ ವಿಪ್ರವೂ ಸಹ ನೊಳಂಬರ ಒಂದು ತಾತ್ಕಾಲಿಕ ರಾಜಧಾನಿಯಾಗಿದ್ದಿರಬೇಕೆಂದು ಊಹಿಸಬಹುದು.

ವಿಪ್ರದಲ್ಲಿನ ಶಂಕರಲಿಂಗೇಶ್ವರ ಗುಡಿಯು ನೊಳಂಬರ ರಚನೆಯಾಗಿದ್ದು ಇದು ಗರ್ಭಗೃಹ, ತೆರೆದ ಅಂತರಾಳ ಮತ್ತು ತೆರೆದ ನವರಂಗವನ್ನು ಹೊಂದಿದೆ. ಚೌಕಾಕಾರದ ಗರ್ಭಗೃಹದಲ್ಲಿನ ಲಿಂಗವು ಚೌಕಾಕಾರದ ಪೀಠದ ಮೇಲೆ ವೃತ್ತಾಕಾರದ ವರ್ತುಲ ಮಧ್ಯೆ ಲಿಂಗವಿದೆ. ತೆರೆದ ಅಂತರಾಳದಲ್ಲಿ ಮೇಲಿನ ತೊಲೆಗೆ ಆಧಾರವಾಗಿ ಎರಡು ಕಂಬಗಳನ್ನು ನಿಲ್ಲಿಸಲಾಗಿದೆ.

ಹಂಪೆಯ ದುರ್ಗಾದೇವಾಲಯದಂತೆ ತೆರೆದ ನವರಂಗವಿದೆ. ಹಾಗೂ ಇದರ ಮೇಲಿನ ಸುತ್ತಲ ಮುಚ್ಚಿಗೆ ಬಾಗಿತ್ತು. ನವರಂಗದ ಕಂಬಗಳಲ್ಲಿ ಯಾವುದೇ ಅಲಂಕಾರವಿಲ್ಲ. ಹಾಗೂ ಬಾಗಳಿಯ ನವರಂಗದ ಕಂಬಗಳಂತೆ ಇವೆ. ಚಿತ್ರಕಾಂಡ ಕಂಬಗಳಿಲ್ಲ. ಬೋದಿಗೆ ಮಾತ್ರ ಗಂಗರ ಕಂಬಗಳಂತೆ ಸರಳ ಬೋದಿಗೆ ಬಳಸಲಾಗಿದೆ. ಗರ್ಭಗೃಹದ ಬಾಗಿಲವಾಡವು ಸರಳವಾಗಿದೆ. ತಳಗಡೆ ದ್ವಾರಪಾಲಕ ಶಿಲ್ಪಗಳನ್ನು ಬಿಟ್ಟರೆ ಹೆಚ್ಚಿನ ಅಲಂಕಾರವಿಲ್ಲ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ.

ದೇವಘಾತದಲ್ಲಿನ ಅಮೃತೇಶ್ವರ ದೇವಾಲಯು ಸಂಕೀರ್ಣವು ಇನ್ನೊಂದು ದೇವಾಲಯವಾಗಿದೆ. ಈ ದೇವಾಲಯದ ಒಳರಚನೆಯು ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ. ನವರಂಗದಲ್ಲಿನ ಮುಂಭಾಗ ಬಿದ್ದು ಹೋಗಿದೆ. ಈ ದೇವಾಲಯದ ನವರಂಗಕ್ಕೆ ಉತ್ತರ ದಕ್ಷಿಣವಾಗಿ ಎರಡು ಬಾಗಿಲುಗಳಿವೆ. ಗರ್ಭಗೃಹದ ಲಿಂಗ ಪೀಠವು ಚೌಕಾಕಾರವಾಗಿದೆ. ಅಂತರಾಳ ತೆರೆದ ಅಂತರಾಳವಾಗಿದ್ದು ಮಧ್ಯೆ ಕಂಬಗಳಿಲ್ಲ. ಗರ್ಭಗೃಹದ ಗೋಡೆಗಳಲ್ಲಿ ಹೆಚ್ಚು ಉಬ್ಬಿದ ದೊಡ್ಡ ಕಂಬಗಳಿವೆ. ನವರಂಗದ ನಾಲ್ಕು ಕಂಬಗಳು ಬಾಗಳಿಯ ಕಲ್ಲೇಶ್ವರ ದೇವಾಲಯದ ಕಂಬಗಳಂತೆ ಇವೆ. ಮೇಲೆ ಸಾದಾ ಬೋದಿಗೆ ಇದೆ. ಈ ಬೋದಿಗೆ ಮಧ್ಯೆ ಚಿಕ್ಕದಾದ ಸೀಳು ಬಂದಿದೆ. ನವರಂಗದ ಮುಚ್ಚಿಗೆಯಲ್ಲಿ ಕಮಲವಿದೆ. ದೇವಾಲಯದ ಗರ್ಭಗೃಹದ ಮೇಲಿರುವ ಶಿಖರಭಾಗವು ತಳಪಾದ ಮೇಲಿನಿಂದ ಇಟ್ಟಿಗೆಯಿಂದ ನಿರ್ಮಾಣವಾಗಿದೆ. ಈ ಗೋಡೆ ಆಗಾಗ್ಗೆ ಜೀರ್ಣೋದ್ಧಾರವಾಗಿದ್ದರೂ ಮೂಲ ರಚನೆ ಹಾಗೆಯೇ ಇದೆ. ಅದು ಬದಲಾವಣೆ ಆಗಿರುವ

ಕಡಿಮೆ. ಎತ್ತರವಾದ ಈ ಗರ್ಭಗೃಹದ ಶಿಖರವು ಎರಡು ತಳಗಳನ್ನು ಹೊಂದಿದೆ. ದೇವಕೋಷ್ಠಗಳಿಲ್ಲ. ಇಟ್ಟಿಗೆಯ ಉಬ್ಬುಕಂಬಗಳಿವೆ. ಮೇಲಿನ ಸ್ತೂಪದ ಭಾಗವು ಇತ್ತೀಚೆಗೆ ಜೀರ್ಣೋದ್ಧಾರವಾಗಿದೆ. ಮೇಲೆ ಕಲಶವಿಲ್ಲ. ಅಂತರಾಳ ಮತ್ತು ನವರಂಗದ ಗೋಡೆಗಳು ಇಟ್ಟಿಗೆ ಮತ್ತು ಗಾರೆಯವಾಗಿದ್ದು, ಈಗ ಪೂರ್ಣ ಹಾಳಾಗಿವೆ. ಕ್ರಿ.ಶ. ೧೦ನೆಯ ಶತಮಾನದ ಶಾಸನವೊಂದು ಈ ದೇವಾಲಯಕ್ಕೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.

ದುರ್ಗಾ ದೇವಾಲಯವು ಕಂಪಿಲಿ ನೊಳಂಬರ ಅಂತ್ಯಕಾಲದಾಗಿದ್ದು, ವಿಪುಲ ಶಂಕರಲಿಂಗ ಹಾಗೂ ಅಮೃತೇಶ್ವರ ದೇವಾಲಯದ ಪ್ರಭಾವದಿಂದ ರಚಿತವಾದದ್ದಾಗಿದೆ. ಗರ್ಭಗೃಹ, ಮುಚ್ಚಿದ ಅಂತರಾಳ ನವರಂಗವಿದೆ. ಅಂತರಾಳದ ಬಾಗಿಲವಾಡ ಕಲ್ಯಾಣದ ಚಾಳುಕ್ಯರ ಕಾಲದ್ದಾಗಿದೆ.

## ಮೈಲಾರ ದೇವಾಲಯಗಳು ಮತ್ತು ನೊಳಂಬರು

ಕರ್ನಾಟಕದಲ್ಲಿ ಉಳಿದಿರುವ ಪ್ರಮುಖವಾದ ಪ್ರಾಚೀನ ಸಂಪ್ರದಾಯಗಳಲ್ಲಿ ಒಂದು ಎಲ್ಲಮ್ಮನ ಸಂಪ್ರದಾಯ ಮತ್ತೊಂದು ಮೈಲಾರನ ಸಂಪ್ರದಾಯಗಳಾಗಿವೆ. ಹಾಗೂ ಈ ಎರಡೂ ವಿಶಿಷ್ಟ ಆಚರಣೆಗಳುಳ್ಳ ಪೂಜಾ ಸಂಪ್ರದಾಯಗಳಾಗಿವೆ.

ಅನೇಕ ಕನ್ನಡ ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ಮೈಲಾರದೇವರ ಉಲ್ಲೇಖ ಬಂದಿದೆ. ಈ ಪ್ರಬಂಧದಲ್ಲಿ ಮೈಲಾರನ ಸಂಪ್ರದಾಯ ನಡೆದು ಬಂದಿರುವ ಹಾದಿಯನ್ನಾಗಲಿ ಅಥವಾ ಜಾನಪದೀಯವಾಗಿ ಪ್ರಚಲಿತವಿರುವ ವಿಷಯಕ್ಕಾಗಲಿ ಒತ್ತು ಕೊಡದೆ ನೇರವಾಗಿ ಮೈಲಾರ ದೇವಾಲಯಗಳ ಪ್ರಾಚೀನತೆ ಮತ್ತು ಉಗಮದ ಬಗ್ಗೆ ಮಾತ್ರ ಪ್ರಸ್ತಾಪ ಮಾಡಲಾಗಿದೆ.

ಡಾ|| ಎಂ. ಚಿದಾನಂದಮೂರ್ತಿಯವರು ಕನ್ನಡ ಕಾವ್ಯ ಶಾಸನಗಳಲ್ಲಿ ಮೈಲಾರ–ಮಾಳಚಿ[59] ಎಂಬ ಲೇಖನದಲ್ಲಿ ಚರ್ಚಿಸುತ್ತ, ಮೈಲಾರನನ್ನು ಕುರಿತ ಕ್ರಿ.ಶ. ೧೧೧೨ರಲ್ಲಿ ನಯಸೇನನ ಧರ್ಮಾಮೃತದಲ್ಲಿ ಬರುವ ಉಲ್ಲೇಖವೇ ಪ್ರಾಚೀನವಾದುದು ಮತ್ತು ಮೈಲ ಎಂಬ ಹೆಸರು ಕ್ರಿ.ಶ. ೧೦೩೨ ರಲ್ಲಿ ಉಲ್ಲೇಖಿತವಾಗಿದೆ ಎಂದಿದ್ದಾರೆ. ನೇಗಿನಹಾಳರು 'ಮೈಲಾರಲಿಂಗ–ಖಂಡೋಬಾ' ಕೃತಿಯಲ್ಲಿ ಕರ್ನಾಟಕದಲ್ಲಿ ಸುಮಾರು ಮೈಲಾರನ ಹದಿನಾಲ್ಕು ದೇವಾಲಯಗಳನ್ನು ಗುರುತಿಸಿ ಅವುಗಳ ಬಗ್ಗೆ ವಿಸ್ತೃತವಾದ ಚರ್ಚೆ ನಡೆಸಿದ್ದಾರೆ. ಅವರು ಹೂವಿನಹಡಗಲಿ ತಾಲೂಕಿನ ಹಿರೇ ಮೈಲಾರ, ರಾಣಿಬೆನ್ನೂರು ತಾಲೂಕಿನ ದೇವರಗುಡ್ಡ, ಸೌದತ್ತಿ ತಾಲೂಕಿನ ಬೀಳಗಿ, ಗುಲ್ಬರ್ಗಾ ತಾಲೂಕಿನ ಯಾತಗಿರಿ ಅಥವಾ ಯಾದಗಿರಿ, ಶಿರಹಟ್ಟಿ ತಾಲೂಕಿನ ಕಪ್ಪತಗುಡ್ಡ, ಹೊಸಪೇಟೆ ತಾಲೂಕಿನ ಆನೆಗೊಂದಿ, ನಾಗಮಂಗಲ ತಾಲೂಕಿನ ಮೈಲಾರ ಪಟ್ಟಣ, ಮೈಸೂರು ಬಳಿಯ ಮುಡುಕುತೊರೆ, ಕನಕಪುರದ ಹೊನ್ನಾಗರ, ಹಾಸನದ ಸಿದ್ಧೇಶ್ವರ ಮುಂತಾದ ಕ್ಷೇತ್ರಗಳು ಮೈಲಾರನ ಕ್ಷೇತ್ರಗಳೆಂದು ಗುರುತಿಸಿದ್ದಾರೆ.

ಇನ್ನು ಹಿರೇಮೈಲಾರದ ಸುತ್ತಲಿನ ೮–೧೦ ತಾಲೂಕುಗಳಲ್ಲಿ ಚಿಕ್ಕಪುಟ್ಟ ದೇವಾಲಯಗಳು ಸಾಕಷ್ಟಿವೆ. ಹೀಗೆ ಕರ್ನಾಟಕದಲ್ಲಿ ಈ ಸಂಪ್ರದಾಯಕ್ಕೆ ಸೇರಿದ ೩೦೦ಕ್ಕೂ ಹೆಚ್ಚು ಸಣ್ಣ, ದೊಡ್ಡ ದೇವಾಲಯಗಳಿವೆ. ಮೈಲಾರನ ಸಂಪ್ರದಾಯ ಕರ್ನಾಟಕಕ್ಕೆ ಮಾತ್ರ ಸೀಮಿತವಾಗದೆ ಮುಂದೆ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಿಗೂ ವಿಸ್ತರಿಸಿತು.

ಮಹಾರಾಷ್ಟ್ರದಲ್ಲಿ ಪಾಲಿ, ನಳದುರ್ಗ, ಜೇಜೂರಿ, ಮಾಲೆಗಾಂವ, ಆರೂಢಮಲ್ಲ, ಧಾಮಣಟೇಕ, ನೇವಾಸೆ, ಔರಂಗಬಾದ್ ಜಿಲ್ಲೆಯ ಸಾತಾರ ಮೊದಲಾದ ಊರುಗಳಲ್ಲಿ ದೇವಸ್ಥಾನಗಳೂ, ಸ್ವಯಂಭೂಲಿಂಗಗಳೂ ಇವೆ. ಇಲ್ಲಿಯೂ ಸುಮಾರು ೨೫೦ ಕ್ಕೂ ಹೆಚ್ಚು ದೇವಾಲಯಗಳಿವೆ. ಆಂಧ್ರದ ರಂಗಾರೆಡ್ಡಿ ಜಿಲ್ಲೆಯ ವೆಲುಪಗೊಂಡದ ಕ್ರಿ.ಶ. ೧೧೯೯ ನೆಯ ಶಾಸನದಲ್ಲಿ ಅಲ್ಲೊಂದು ಮೈಲಾರ ದೇವಾಲಯವಿದ್ದ ಉಲ್ಲೇಖವಿದೆ. ವಾರಂಗಲ್ ಜಿಲ್ಲೆಯ ಐನವೋಲು ದೇವಾಲಯ ೧೧ನೆಯ ಶತಮಾನದ್ದೆಂದು ಆಂಧ್ರಪ್ರಭ ಪತ್ರಿಕೆ (೨೩.೨.೧೯೮೨)ಯಲ್ಲಿ ವರದಿಯಾಗಿದೆ. ಆಂಧ್ರದಲ್ಲಿ ಮೀನಗೊಂದಿ ಮತ್ತು ಐನವೋಲು ದೇವಾಲಯಗಳಲ್ಲದೆ ಅದಿಲಾಬಾದ್ ಜಿಲ್ಲೆಯ ಮೈಲಾರಂ, ಕೋಮರಾಳಿ ಮುಂತಾದ ಊರುಗಳಲ್ಲಿ ಮೈಲಾರ ದೇವಾಲಯಗಳಿವೆಯೆಂದು ತಿಳಿದುಬರುತ್ತದೆ.

ಕರ್ನಾಟಕದಲ್ಲಿ ಅತಿ ಪ್ರಾಚೀನವೂ ಹಾಗೂ ಪ್ರಮುಖವಾಗಿರುವ ಮೈಲಾರ ದೇವಾಲಯಗಳಲ್ಲಿ ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲೂಕಿನಲ್ಲಿರುವ ಹಿರೇಮೈಲಾರ ಕ್ಷೇತ್ರವು ಒಂದಾಗಿದೆ. ತುಂಗಭದ್ರಾ ನದಿ ಇದನ್ನು ಸುತ್ತು ಹಾಕಿದೆ. ಈ ಮೈಲಾರಕ್ಷೇತ್ರದ ಮೂರು ದಿಕ್ಕುಗಳಲ್ಲಿ ನದಿ ಹರಿಯುತ್ತಿದ್ದು ಮತ್ತೊಂದು ದಿಕ್ಕಿನಲ್ಲಿ ಗುಡ್ಡದ ಸಾಲು ಇದ್ದು, ಅದು ನದಿ ಉಂಗುರದ ಆಕಾರವನ್ನು ಹೋಲುತ್ತದೆ. ಈ ಕ್ಷೇತ್ರವನ್ನು ಗುಂಗುರಾಲ, ಉಂಗ್ಲಾರ ಕ್ಷೇತ್ರವೆಂದು ಶಾಸನಗಳಲ್ಲಿ ಕರೆಯಲಾಗಿದೆ. ಈ ನದಿಯ ದಡದಲ್ಲಿ ಕುರವತ್ತಿ, ಐರಣಿ, ಹೊನ್ನತ್ತಿ, ಚೌಡದಾಸನಪುರ, ಹೊಳಲ, ಗುತ್ತಲ, ಹಾವನೂರು ಮುಂತಾದ ಇತಿಹಾಸ ಪ್ರಸಿದ್ಧ ಊರುಗಳಿವೆ.

ಹಿರೇಮೈಲಾರ ಕ್ಷೇತ್ರದ ಮುಖ್ಯ ದೇವಾಲಯದ ರಂಗಮಂಟಪದ ಎಡದ ಕಂಬದ ಮೇಲೆ ಕ್ರಿ.ಶ. ೧೪೩೬ ನೆಯ ವರ್ಷದ ಶಾಸನದಲ್ಲಿ 'ಉಂಗುಲಾಲದ ಶ್ರೀಮನ್ಮಹಾಮಯಿಲಾರ ದೇವರ' ಎಂಬ ಉಲ್ಲೇಖವಿದೆ.

ಅದೇ ದೇವಸ್ಥಾನದ ಸುತ್ತ ಚತುಷ್ಕೋಣಾಕಾರದ ಪೌಳಿ ಗೋಡೆ ಇದೆ. ಪೂರ್ವ, ದಕ್ಷಿಣ ಮತ್ತು ಉತ್ತರದಲ್ಲಿ ಪ್ರವೇಶದ್ವಾರಗಳಿವೆ. ಪೂರ್ವದ್ವಾರವು ಕಲ್ಯಾಣಿ ಚಾಲುಕ್ಯರ ಕಾಲದ ರಚನೆಯಾಗಿದೆ. ದೇವಾಲಯ ಸಾಕಷ್ಟು ದೊಡ್ಡದಾಗಿದೆ. ವಿಸ್ತೃತವಾದ ಗರ್ಭಗೃಹ, ಸುಖನಾಸಿ ಮತ್ತು ರಂಗಮಂಟಪದ ಭಾಗಗಳೂ ಪ್ರಾಚೀನ ಕಾಲದ ರಚನೆಗಳಾಗಿವೆ. ಮೈಲಾರ ದೇವಾಲಯದ

ಗರ್ಭಗೃಹದಲ್ಲಿ ಸ್ವಯಂಭೂ ಲಿಂಗವಿದೆ. ಲಿಂಗ ಸಹಜವಾಗಿದ್ದು ಬುಡದಲ್ಲಿರುವ ಒಂದು ದೊಡ್ಡ ಬಂಡೆಗಲ್ಲಿನಿಂದ ಮೇಲೆದ್ದಿದೆ. ಇದರ ಸುತ್ತ ಕೂಡಿಸಿರುವ ಪಾಣಿಪೀಠ ಅಷ್ಟೇನೂ ದೊಡ್ಡದಾಗಿಲ್ಲ. ಈ ಸ್ವಯಂಭೂಲಿಂಗದ ಹಿಂಭಾಗದ ಗೋಡೆಯಲ್ಲಿ ಸುಮಾರು ೨೫೦ ಸೆಂ.ಮೀ. ಎತ್ತರದ ಕಮಾನು ಕೊರೆಯಲಾಗಿದೆ. ಈ ಕಮಾನಿನಲ್ಲಿ ಮೈಲಾರಲಿಂಗನ ಮೃಣ್ಮಯಮೂರ್ತಿಯ ಇದೆ. ಮೂರ್ತಿ ೧೮೩ ಸೆಂ.ಮೀ. ಎತ್ತರ ೧೮೩ ಸೆಂ.ಮೀ. ಅಗಲವಾಗಿದೆ. ಚತುರ್ಭುಜ ಹೊಂದಿದ್ದು, ನಾಲ್ಕು ಹಸ್ತಗಳಲ್ಲಿ ಖಡ್ಗ, ತ್ರಿಶೂಲ, ಡಮರು ಮತ್ತು ಬಟ್ಟಲುಗಳಿವೆ. ಖಡ್ಗವೊಂದನ್ನು ಬಿಟ್ಟು ಉಳಿದೆಲ್ಲವೂ ಮೃಣ್ಮಯಮೂರ್ತಿಯ ತಲೆಯ ಮೇಲೆ ಸುತ್ತಿ ಕಟ್ಟಿದ ಜಟೆಯೂ, ಇಳಿಬಿದ್ದ ಗಡ್ಡ ಮತ್ತು ಮೀಸೆಗಳೂ ಇವೆ. ಮೂರ್ತಿಯ ಎರಡೂ ಬದಿಯಲ್ಲಿ ಚಾಮರಧಾರಿಗಳನ್ನೂ, ಪಾದದಡಿಯಲ್ಲಿ ಎರಡೂ ಪಕ್ಕದಲ್ಲಿ ಎರಡು ರುಂಡಗಳನ್ನು ಬಿಡಿಸಲಾಗಿದೆ. ಮೂರ್ತಿ ರೌದ್ರ-ಶಾಂತಗಳ ವಿಶಿಷ್ಟ ಭಾವವನ್ನು ಏಕಕಾಲದಲ್ಲಿ ಹೊರಸೂಸುವ ಕಲಾಕೃತಿಯಾಗಿದೆ. ಇವೆಲ್ಲವನ್ನು ಮಣ್ಣಿನಿಂದಲೇ ಮಾಡಿರುವುದರಿಂದ ಇದು ಮಣ್ - ಮೈಲಾರ ಕ್ಷೇತ್ರವೆಂದೇ ಪ್ರಖ್ಯಾತವಾಗಿದೆ. ಅಲ್ಲದೆ ಇದನ್ನು ಮಣ್-ಮೈಲಾರಲಿಂಗ, ಮಾರ್ತಾಂಡ ಭೈರವ, ಮಲ್ಲಯ್ಯನೆಂದು ಕರೆಯುತ್ತಾರೆ. ಶಿವನು ಕೈಲಾಸದಿಂದ ರಾಕ್ಷಸ ನಿಗ್ರಹಕ್ಕಾಗಿ ಮೈಲಾರ ಕ್ಷೇತ್ರದಲ್ಲಿ ಸ್ವಯಂಭೂಲಿಂಗ ರೂಪದಿಂದ ಹುತ್ತದಲ್ಲಿ ಒಡಮೂಡಿದ್ದನ್ನು ಅರಿತ ಕಪಿಲಮುನಿ ಮೀನಗೊಂದಿಯಿಂದ ಇಲ್ಲಿಗೆ ಬಂದು ಹುತ್ತವನ್ನು ಒಡೆದು ಒಳಗಿದ್ದ ಈ ಸ್ವಯಂಭೂಲಿಂಗವನ್ನು ಭಂಡಾರ ಮುಂತಾದ ಪವಿತ್ರದ್ರವ್ಯಗಳಿಂದ ಪೂಜಿಸಿ ಲೋಕಕ್ಕೆ ಪೂಜಾವಿಧಾನವನ್ನು ತಿಳಿಸಿಕೊಟ್ಟನೆಂದು ಪರಂಪರೆಯಿಂದ ನಂಬಿಕೆ ಹರಿದುಬಂದಿದೆ.

ಈ ಕ್ಷೇತ್ರವನ್ನು ಹಿರೇಮೈಲಾರ, ಆದಿಮೈಲಾರ, ಮಣ್ ಮೈಲಾರ ಅಥವಾ ಉಂಗ್ಲಾರಕ್ಷೇತ್ರವೆಂದೂ ಕರೆಯುತ್ತಾರೆ. ಸಾಮಾನ್ಯವಾಗಿ ಕರ್ನಾಟಕ ತುಂಬೆಲ್ಲಾ ವ್ಯಾಪಿಸಿರುವ ಈ ದೇವರಕ್ಷೇತ್ರಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದ ಮತ್ತು ಮೂಲ ಮೈಲಾರ ಎಂಬ ನಂಬಿಕೆ ಕರ್ನಾಟಕದ ಉದ್ದಗಲಕ್ಕೂ ಹರಡಿದೆ. )

ರಾಣಿಬೆನ್ನೂರಿನ ದೇವರಗುಡ್ಡ ಎರಡನೇ ಅತಿ ಮಹತ್ವದ ದೇವಾಲಯ. ಇದನ್ನು ಶ್ರೀಕ್ಷೇತ್ರಗುಡ್ಡ, ಗುಡ್ಡಾಪುರ ಎಂದು ಕರೆಯುವುದು ವಾಡಿಕೆ. ಇದು ಹಿರೇಮೈಲಾರದಿಂದ ನೇರ ಪಶ್ಚಿಮಕ್ಕೆ ಸುಮಾರು ೯ ಮೈಲಿ ದೂರದಲ್ಲಿದೆ. ಮುಖ್ಯ ದೇವಸ್ಥಾನ ನೈಋತ್ಯ-ಈಶಾನ್ಯ ದಿಕ್ಕುಗಳಲ್ಲಿ ಸುಮಾರು ೧.೫ ಕಿ.ಮೀ. ಉದ್ದಕ್ಕೆ ಹರಡಿರುವ ಗುಡ್ಡದ ದಕ್ಷಿಣ ತುದಿಗೆ ಅತ್ಯಂತ ಎತ್ತರವಾದ ಶಿಖರವೊಂದರ ಮೇಲೆ ಪೂರ್ವಾಭಿಮುಖವಾಗಿದೆ. ಪ್ರಸ್ತುತ ದೇವಾಲಯ ಗರ್ಭಗೃಹ, ಅದಕ್ಕೆ ಹೊಂದಿಕೊಂಡಂತೆ ಹೊರ ಗರ್ಭಗೃಹ, ಸುಖನಾಸಿಯ ಭಾಗ, ರಂಗಮಂಟಪ, ವಿಸ್ತಾರವಾದ ಮುಖಮಂಟಪವಿದೆ. ಪೂರ್ವ-ಪಶ್ಚಿಮ ಮತ್ತು ಉತ್ತರ ದಿಕ್ಕುಗಳಿಂದ ಪ್ರವೇಶದ್ವಾರಗಳಿವೆ. ಒಳ ಗರ್ಭಗೃಹದಲ್ಲಿ ಸ್ವಯಂಭೂಲಿಂಗವಿದೆ. ಹಿಂಬದಿಯಲ್ಲಿ ಸುಮಾರು ೧ ಮೀಟರ್ ಎತ್ತರದ ಪೀಠದ

ಮೇಲೆ ಮೈಲಾರಲಿಂಗನ ಚತುರ್ಭುಜ ಮೂರ್ತಿಯನ್ನು ಕೂಡಿಸಿದೆ. ನಾಲ್ಕು ಕೈಗಳಲ್ಲಿ ಕ್ರಮವಾಗಿ ಖಡ್ಗ, ತ್ರಿಶೂಲ, ಡಮರು ಮತ್ತು ಬಟ್ಟಲುಗಳಿವೆ. ಮೂರ್ತಿ ಆನಂದಾಸನದಲ್ಲಿದ್ದು ಹಣೆಯಲ್ಲಿ ಉರಿಗಣ್ಣು ತೋರಿಸಲಾಗಿದೆ. ಮೂರ್ತಿ ಶಿಲ್ಪದಿಂದ ಪ್ರತ್ಯೇಕವಾದ ದೊಡ್ಡ ಗಾತ್ರದ ಕಟ್ಟಿಗೆಯ ಖಡ್ಗವೂ ಹಲವು ನಮೂನೆಯ ೫-೬ ಬಾಣಗಳು ಎಡಬದಿಯಲ್ಲಿವೆ. ಬದಿಯಲ್ಲಿ ಪಂಚಲೋಹದಿಂದಾದ ಪೀಠಸ್ಥ ಚತುರ್ಭುಜ ಹೊಂದಿರುವ 'ಖಂಡೇರಾಯ'ನೆಂದು ಕರೆಯಲಾಗುವ ಮೂರ್ತಿಯೊಂದಿದೆ. ಇದೂ ಮೈಲಾರ ಲಿಂಗನ ಮೂರ್ತಿಯೆ.

ಸವದತ್ತಿ ತಾಲೂಕಿನ ಮುರಗೋಡಿನಿಂದ ದಕ್ಷಿಣಕ್ಕೆ ೪ ಕಿ.ಮೀ. ಅಂತರದಲ್ಲಿ ಕಾರೀಮನಿ ಇದೆ. ಊರಿನ ಉತ್ತರ, ಪೂರ್ವ ಮತ್ತು ದಕ್ಷಿಣದಲ್ಲಿ ಸೋಗಲಗುಡ್ಡದ ಸಾಲುಗಳು ಹಬ್ಬಿದ್ದು ಇದು ಒಂದು ಕಿ.ಮೀ. ಅಂತರದಲ್ಲಿ ಸಂಧಿಸಿದೆ. ಈ ಸಂಧಿಸಿದ ಭಾಗದ ಇಳಿಜಾರಿನಲ್ಲಿ ಮೈಲಾರಲಿಂಗನ ಕ್ಷೇತ್ರವಿದೆ. ಬೆಳಗಾವಿ ಜಿಲ್ಲೆಯ ಭಕ್ತರು ಈ ದೇವರನ್ನು 'ಮಲ್ಲಯ್ಯ', 'ಮಲ್ಲಿಕಾರ್ಜುನ' ಎಂದು ಕರೆಯುತ್ತಾರೆ.

ಮುಖ್ಯ ದೇವಾಲಯದ ದಕ್ಷಿಣ ಭಾಗದ ಗರ್ಭಗೃಹದಲ್ಲಿ ಸ್ವಯಂಭೂಲಿಂಗವಿದೆ. ಇದು ೧೫-೨೦ ಸೆಂ.ಮೀ. ಗಳಷ್ಟು ಎತ್ತರವಾಗಿದ್ದು ಸುಮಾರು ೨೫ ಸೆಂ.ಮೀ.ಗಳಷ್ಟು ವ್ಯಾಸ ಉಳ್ಳದ್ದಾಗಿದೆ. ಇದರ ಸುತ್ತಲೂ ಪಾಣಿಪೀಠವನ್ನು ಕೂಡಿಸಿರುವುದಿಲ್ಲ. ನೈಸರ್ಗಿಕವಾದ ಬಂಡೆಗಲ್ಲು ಹೊರಗೆ ಸ್ಪಷ್ಟವಾಗಿ ಕಾಣುತ್ತದೆ. ಈ ಬಂಡೆಗಲ್ಲಿನ ಮೇಲೆ ಕೊಂಬಿನಂತೆ ಸ್ವಯಂಭೂಲಿಂಗ ಮೂಡಿದೆ. ಇದರ ಹಿಂಭಾಗದಲ್ಲಿ ಒಂದು ಶಿಲಾಫಲಕ ಸ್ಥಾಪಿಸಲಾಗಿದ್ದು ಅದರ ಮೇಲೆ ಅಶ್ವಾರೋಹಿಯಾದ ಮೈಲಾರನ ಉಬ್ಬುಶಿಲ್ಪ ಕೆತ್ತಲಾಗಿದೆ. ಈ ಶಿಲಾಫಲಕದ ಎತ್ತರ ಸುಮಾರು ೬೨ ಸೆಂ.ಮೀ. ಈ ದೇವಾಲಯಗಳ ಸಮುದಾಯದ ಹೊರ ಬದಿಯ ಉತ್ತರ ಗೋಡೆಗೆ ಹೊಂದಿದಂತೆ ಮೈಲಾರ ದೇವರ ಉಲ್ಲೇಖವಿರುವ ಕ್ರಿ.ಶ. ೧೫೬೩ ರ ಶಿಲಾಶಾಸನವೊಂದಿದೆ. ಈ ಶಿಲಾಶಾಸನವು ಅಪ್ರಕಟಿತವೆಂದು ನೇಗಿನಹಾಳ ಅವರು ಹೇಳಿದ್ದಾರೆ.

ಗುಡೂರು ಹುಲ್ಲಪ್ಪನ ದೇವಾಲಯ ಬಾದಾಮಿಯಿಂದ ಹುನಗುಂದಕ್ಕೆ ಹೋಗುವ ದಾರಿಯಲ್ಲಿ ಸುಮಾರು ೩೫ ಕಿ.ಮೀ. ಅಂತರದಲ್ಲಿದೆ. ಈ ದೇವಾಲಯದ ಬಾಗಿಲಿಗೆ ಹೊಂದಿದಂತೆ ಪೂರ್ವಬದಿಯಲ್ಲಿ ಅಶ್ವಾರೋಹಿಯಾದ ಮೈಲಾರಲಿಂಗನ ಉಬ್ಬುಮೂರ್ತಿಯೊಂದಿದೆ. ಈ ದೇವರ ಉತ್ಸವದ ವೇಳೆಯಲ್ಲಿ ಕಂಚವೀರರು ವಡಬು ಹೇಳುವಾಗ ಮೈಲಾರದೇವರು ಮೈಲಾರದಿಂದ ಇಲ್ಲಿಗೆ ಬಂದನೆಂದು ಹೇಳುತ್ತಾರೆ.

ಹಿಪ್ಪರಿಗಿಯ ಮಲ್ಲಯ್ಯನನ್ನು ದೇವರಹಿಪ್ಪರಗಿ ಎಂದು ಜನ ಸಾಮಾನ್ಯರು ಗುರುತಿಸುತ್ತಾರೆ. ಧಾರವಾಡ ಜಿಲ್ಲೆಯ ಗೆಜ಼ಿಟಿಯರ್‌ನಲ್ಲಿ ಸಹ ಇಲ್ಲಿಯ ದೇವರನ್ನು ಮಾರ್ತಂಡ ಎಂದು

ಕರೆಯಲಾಗಿದೆ. ಯಾತಗಿರಿ ಮಲ್ಲಯ್ಯ, ಪ್ರೇಮಪುರ ಮೈಲಾರ ಪಾಲಿ ಪೇಂಬರನ ಖಂಡೋಬಾ, ಜೆಜೂರಿ ಖಂಡೋಬಾ, ಮಂಗಸೂಳಿ ಮಲ್ಲಯ್ಯ – ಹೀಗೆ ಮೈಲಾರ ಇರುವ ಸ್ಥಳ ಮತ್ತು ಹೆಸರುಗಳ ಬಗ್ಗೆ ಅನೇಕ ಹೇಳಿಕೆಗಳಿವೆ.

**ಮಯಿಲಾರು :-**

ಮೈಲಾರ ಎಂದು ಕರೆಯುವ ಈ ದೇವರ ಹೆಸರು ಹೇಗೆ ಬಂದಿರಬಹುದು? ಊಹಿಸಿದಾಗ ಈ ಪದವು ಎರಡು ಪದಗಳ ಸಂಯುಕ್ತ ಪದವಾಗಿದ್ದು ಮಯಿಲ+ಆರ ಎಂದಿದೆ. ಮಯಿಲ ಎಂದರೆ ದ್ರಾವಿಡ ಭಾಷೆಯಲ್ಲಿ ಊದಾ ಅಥವಾ ನೀಲವರ್ಣವೆಂದರ್ಥ. ಬಹುಶಃ ಕಾಳಾಮುಖರು ಪೂಜಿಸುತ್ತಿದ್ದ ದೇವರು ಎಂದರ್ಥವಿರಬಹುದೆ? 'ಆರ' ಶಬ್ದದ ಅರ್ಥ ಸ್ಪಷ್ಟವಿಲ್ಲ. ಇನ್ನೊಂದು ಅರ್ಥ ಮೈಲಾರ–ಭೈರವನ ರೂಪದಲ್ಲಿದ್ದು ಭೈರವನಿಗೆ ಮಯಿಲ ಎಂದು ದ್ರಾವಿಡ ಭಾಷೆಯಲ್ಲಿ ಕರೆಯುತ್ತಿದ್ದರೆ? ಈ ದೇವರ ಗೊರವರು ಇಂದಿಗೂ ಕರಿ ಕಂಬಳಿ ಹೆಗಲ ಮೇಲೆ ಹಾಕಿಕೊಳ್ಳುವರು. ಇದರಿಂದ ಈ ಹೆಸರು ಬಂದಿರಬಹುದೆ? (ಮೈಲ=ನೀಲಿ ಅಥವಾ ಕಪ್ಪು ಮತ್ತು ಮಯಿಲ ಎಂಬುದು ಪ್ರಾಕೃತ ಶಬ್ದ ಎಂದು ಕನ್ನಡ ನಿಘಂಟಿನಲ್ಲಿ ಹೇಳಿದೆ).

**ಈ ಹಿನ್ನೆಲೆಯಲ್ಲಿ ಮೈಲಾರ ದೇವಾಲಯದ ಪ್ರಾಚೀನತೆಯಾದರೂ ಏನು!**

ಮಡಕಶಿರಾ ತಾಲೂಕಿನ ಹೇಮಾವತಿ ನೊಳಂಬರ ರಾಜಧಾನಿಯಾಗಿತ್ತು. ನೊಳಂಬರ ಆರಾಧ್ಯ ದೈವ ಸಿದ್ಧೇಶ್ವರ. ಸಿದ್ಧೇಶ್ವರನನ್ನು ಅಲ್ಲಿಯ ಸ್ಥಳೀಯರು ಹೆಂಜೇರಪ್ಪ, ಹೆಂಜೇರು ಸಿದ್ದಪ್ಪೆಂದೇ ಕರೆಯುತ್ತಾರೆ. ರಾಜಕೀಯ ಸ್ಥಿತ್ಯಂತರದಿಂದ ಮುಂದೆ ನೊಳಂಬರು ತಮ್ಮ ರಾಜಧಾನಿ ಹೇಮಾವತಿಯಿಂದ ಉತ್ತರದ ಕಂಪಿಲಿಗೆ ಸ್ಥಳಾಂತರಿಸಿದರು. ಆಗ ತಮ್ಮ ಇಷ್ಟದೈವವನ್ನು ತಮ್ಮ ಜೊತೆಯಲ್ಲಿ ತೆಗೆದುಕೊಂಡು ಬಂದರು. ಕಂಪಿಲಿಯಲ್ಲಿ ಅವರು ಕಟ್ಟಿಸಿದ ದೇವಾಲಯದ ಕುರುಹಾಗಿ ಸೋಮೇಶ್ವರ ದೇವಸ್ಥಾನವಿದೆ. ಈ ದೇವರನ್ನು ಸೋಮೇಶ್ವರ ಎಂದು ಕರೆದರೂ, ಅದು ಭೈರವನ ಬಿಂಬ. ಈ ಭೈರವನ ಪೀಠದಲ್ಲಿ ಕುದುರೆಯನ್ನು ಬಿಡಿಸಿದ್ದಾರೆ. ಇದು ಭೈರವನ ಅರ್ಥಾತ್ ಮೈಲಾರ ಬಿಂಬ. ಈ ದೇವಾಲಯಕ್ಕೆ ಸಂಬಂಧಿಸಿದಂತೆ ಶಾಸನೋಕ್ತ ಆಧಾರವಿಲ್ಲ. ಆದರೆ ದೇವಾಲಯದ ರಚನಾದೃಷ್ಟಿಯಿಂದ ಕ್ರಿ.ಶ.೧೦ ನೆಯ ಶತಮಾನದ ಉತ್ತರಾರ್ಧಕ್ಕೆ ಹಾಕಬಹುದಾಗಿದೆ.

ಇದೇ ಕಂಪಿಲಿಯ ಸಮೀಪದ ತೆಕ್ಕಲುಕೋಟೆಯ ಬಳಿ ಇರುವ ಹರವಿನ ಮಲ್ಲಯ್ಯನ ಗುಡ್ಡದಲ್ಲಿ ದೊರೆತಿರುವ ಶಾಸನವು ಮೈಲಾರನ ಆರಾಧನೆಯ ಬಗ್ಗೆ ಮಹತ್ವದ ಸುಳಿವೊಂದನ್ನು ನೀಡುತ್ತದೆ. ಕ್ರಿ.ಶ. ೧೦೧೭ ರಲ್ಲಿ ನೊಳಂಬ ಅರಸ ಜಗದೇಕಮಲ್ಲ ಉದಯಾದಿತ್ಯನ ಕಾಲದಲ್ಲಿ ಈಗಿನ ಮಲ್ಲಯ್ಯನಗುಡ್ಡದಲ್ಲಿ ಮೈಲಾರ ದೇವಾಲಯವನ್ನು ಕಟ್ಟಿಸಿ ಅದಕ್ಕೆ ಹಗರಿ ನದಿಯ ದಡದಲ್ಲಿದ್ದ ಸಿರಿಯನೂರು ಎಂಬ ಒಂದು ಗ್ರಾಮವನ್ನು ದಾನ ನೀಡಿದಂತೆ ಶಾಸನದಲ್ಲಿ

ಉಲ್ಲೇಖವಿದೆ.

**ಶಾಸನ ಪಾಠ.**

ಸ್ವಸ್ತಿ ಸಮಸ್ತ ಭುವನಾಶ್ರಯ ಪ್ರಥುವಿವಲ್ಲಭ ಮಹಾರಾಜಾಧಿ ರಾಜಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕ ಚಾಳುಕ್ಯಾಭರಣಂ ಶ್ರೀಮಜ್ಜಗದೇಕಮಲ್ಲದೇವರ ರಾಜ್ಯ ಮುತ್ತರೊತ್ತರಾಭಿವೃಧ್ಧಿ ಸಲುತ್ತಿರೆ ಸಮಧಿಗತ ಪಂಚಮಹಾಶಬ್ದ ಪಲ್ಲವಾನ್ವಯ ಶ್ರೀ ಪ್ರಥುವಿವಲ್ಲಭ ಪಲ್ಲವ ಕುಳತಿಳಕನಮೋಘನೇಕವಾಕ್ಯ ಕಾಂಚಿಪುರವರೇಶ್ವರ ಶ್ರೀ ಮಜ್ಜಗದೇಕಮಲ್ಲ ನೊಐಂಬ ಪಲ್ಲವ ಪೆರ್ಮ್ಮಾನಡಿಗಳ್ ನೊಐಂಬವಾಡಿ ಮೂವತ್ತಿರಿಚಾಸಿರಮುಮಂ ಕದಂಬಳಿಕೆ ಸಾಯಿರಮುಮಂ ಕೋಗಳಿ ಐನೂಱುಮಂ ಬಲ್ಲಕುಂದೆ ಮೂನೂಱುಮಂ ಕುದಿಯುಪರವಿ ಯಪ್ಪತ್ತುಮಂ ಕರಿವಿಡಿ ಮೂವತ್ತುಮಂ ದುಷ್ಟನಿಗ್ರಹ ವಿಶಿಷ್ಟಪ್ರತಿಪಾಳನಂ ಗೆಯ್ಯುತ್ತುಮಿರೆ ಸಕವರ್ಷ ೯೩೯ ನೆಯ ಪಿಂಗಳಸಂವತ್ಸರದ ಚೈತ್ರ ಬಹುಳ ೧೩ ಬೃಹಸ್ಪತಿವಾರದಂದು ಶ್ರೀಮತ್ ಮೈಲಾರದ ದೇವಜ್ಞ ಬಲ್ಲಕುನೆ, ಮುನೂಱರೊಳಗಣ ಪಗರೆ ತಡಿಯ ಸಿಱಿಯನೂರಂ ಸರ್ವ್ವಾಭ್ಯನ್ತ ಸಿದ್ಧಿಯಾಗೆ ಕೊಟ್ಟರಿಧರ್ಮಮಂ ಪ್ರತಿಪಾಳಿಸಿದ ....(ಇಲ್ಲ). ಯಾ ನೆಯ ಲಿಲೊಳು ವಿರ್ವ್ವಸ್ಸಿನ... ಗದಾಹ ಸಾವಿರ ಬ್ರಾಹ್ಮಣರ್ಗ್ಗೆ ಸಾಯಿರ ಕವಿಲೆಯುಮಂ ಸಾಯಿರ ಗದ್ಯಾಣ ಹೊನ್ನಮಂ ದಾನಂಗೊಟ್ಟ ಪಲಮಕ್ಕುಂ ಈ ಧರ್ಮ್ಮಮಂ ನಱಿದಾತಂಗೆ ಈ ಪೇಳ್ದ ತೀರ್ಥಂಗಳೊ....

ಈ ಶಾಸನದ ಹಿನ್ನೆಲೆಯಲ್ಲಿ ಪ್ರಸ್ತುತ ದೇವಾಲಯವನ್ನು ಪರಿಶೀಲಿಸಲಾಗಿ ದೇವಾಲಯದ ಒಳರಚನೆ ಕ್ರಿ.ಶ. ೧೧ ನೆಯ ಶತಮಾನದ ಪೂರ್ವಾರ್ಧಕ್ಕೆ ಸೇರಿದ್ದಾಗಿದೆ. ದೇವಾಲಯದ ಸ್ವರೂಪ ಹೀಗಿದೆ : ಗರ್ಭಗೃಹ, ತೆರದ ಅಂತರಾಳ ಮತ್ತು ನವರಂಗಗಳನ್ನು ಒಳಗೊಂಡಿದೆ. ಈ ದೇವಾಲಯದಲ್ಲಿ ಈಗಿರುವ ಬಿಂಬಗಳು ಕ್ರಿ. ಶ. ಸುಮಾರು ೧೫-೧೬ನೆಯ ಶತಮಾನಕ್ಕೆ ಸೇರಿದವು. ಗರ್ಭಗೃಹದ ಪೀಠದ ಮೇಲೆ ಈಗ ಮೂರು ದೇವತೆಗಳಿದ್ದು ಮಧ್ಯದಲ್ಲಿ ಭೈರವಮೂರ್ತಿಯೂ ಎಡಭಾಗದಲ್ಲಿ ಕಾಳಿಕಾದೇವಿಯ ಶಿಲ್ಪವಿದೆ. ಬಲಭಾಗದಲ್ಲಿ ಕುಮಾರಸ್ವಾಮಿಯ ಶಿಲ್ಪವಿದೆ. ಮೂರು ವಿಗ್ರಹಗಳ ಮುಂದೆ ಮೂರು ಶಿವಲಿಂಗಗಳಿವೆ. ಬಹುಶಃ ಈ ಶಿವಲಿಂಗಗಳನ್ನು ಕಾಲಾಂತರದಲ್ಲಿ ಇರಿಸಿರಬಹುದು.

ಹರವಿನಮಲ್ಲಯ್ಯ ದೇವಾಲಯದ ಮೂಲ ಬಿಂಬದ ಬಗ್ಗೆ ಹುಡುಕಾಟ ನಡೆಸಿವಾಗ ಅದೇ ದೇವಾಲಯದ ನೈರುತ್ಯದಿಕ್ಕಿನಲ್ಲಿ ನವರಂಗದ ಗೋಡೆಗೆ ಸೇರಿಸಿರುವ ಸ್ಥಳದಲ್ಲಿ ಭಗ್ನ ಭೈರವ ಶಿಲ್ಪವೊಂದು ಇದ್ದು ಎದೆಯ ಮೇಲ್ಭಾಗ ಮಾತ್ರ ಉಳಿದು ಬಂದಿದೆ. ಈ ಬಿಂಬವು ಮೂರ್ತಿ ಶಿಲ್ಪಲಕ್ಷಣಗಳಿಂದ ಕ್ರಿ.ಶ.ಸು. ೧೧ನೆಯ ಶತಮಾನದ ಪೂರ್ವಾರ್ಧಕ್ಕೆ ಸೇರುತ್ತದೆ. ಶಿಲ್ಪಕ್ಕೆ ಜಟಾಭಾರವಿದೆ. ಶಿರೋಭಾಗದಲ್ಲಿ ಹಣೆಗಣ್ಣು, ಕೋರೆ ಹಲ್ಲುಗಳು ಇವೆ. ಬಲ ಕಿವಿಯಲ್ಲಿ

ಪತ್ರಕುಂಡಲ, ಎಡಗಿವಿಯಲ್ಲಿ ಶಂಖ ಕುಂಡಲವಿದೆ. ಕತ್ತಿನಲ್ಲಿರುವ ಆಭರಣ ಅಡ್ಡಿಕೆಯಂತೆ ಕಾಣುತ್ತದೆ. ಭುಜಕೀರ್ತಿ ಇದೆ. ನಾಲ್ಕು ಕೈಗಳಿದ್ದು ಒಂದರಲ್ಲಿ ಅಕ್ಷಮಾಲೆ, ಇನ್ನೊಂದರಲ್ಲಿ ಶೂಲ, ಮತ್ತೊಂದರಲ್ಲಿ ಡಮರು ಇದೆ. ಇನ್ನೊಂದು ಕೈ ಭಿನ್ನವಾಗಿದ್ದು ಏನಿದೆಯೆಂದು ಕಾಣಬರುವುದಿಲ್ಲ. ಈ ಭಗ್ನಗೊಂಡ ಶಿಲ್ಪ ಯಾವುದೇ ಅನುಮಾನವಿಲ್ಲದೆ ನೊಳಂಬರ ಕಾಲದಲ್ಲಿ ಪ್ರತಿಷ್ಠಾಪಿತವಾಗಿದ್ದ ಮೈಲಾರನ ಬಿಂಬವೇ ಆಗಿದ್ದಿರಬೇಕು. ಇದೇ ಆವರಣದಲ್ಲಿ ಭಗ್ನಗೊಂಡ ಪ್ರಾಚೀನ ಕಾಳಿಕಾದೇವಿಯ ಬಿಂಬವೂ ದೊರಕಿದೆ. ಆದರೆ ರುಂಡದ ಭಾಗ ಭಗ್ನಗೊಂಡಿದೆ.

ಭಗ್ನ ಭೈರವ ಅಥವಾ ಮೈಲಾರನಮೂರ್ತಿಯ ದೇವಾಲಯದ ಮುಂಭಾಗದ ಮಂಟಪದಲ್ಲಿ ಬೃಹತ್ತಾದ ಏಕಶಿಲಾ ನಂದಿವಿಗ್ರಹವಿದೆ. ಈ ನಂದಿಯ ಶಿಲ್ಪವೂ ದೇವಾಲಯ ನಿರ್ಮಾಣ ಕಾಲದ್ದೇ ಆಗಿರುತ್ತದೆ. ಹುಟ್ಟುಗಲ್ಲಿನಲ್ಲಿ ಕಡೆದಿರುವ ಈ ಶಿಲ್ಪದ ಅವಯವಗಳನ್ನು ಬಿಡಿ ಬಿಡಿಯಗಿ ಬಿಡಿಸಿದ್ದು, ಸುಂದರವಾಗಿದೆ. ನಂದಿಯು ತಲೆಯನ್ನು ಸ್ವಲ್ಪ ಬಾಗಿಸಿದಂತೆ ಇದೆ. ನಂದಿಮಂಟಪದ ಕಂಬಗಳು ಸಹ ದೇವಾಲಯದ ನಿರ್ಮಾಣ ಕಾಲದ್ದೇ ಆಗಿರುತ್ತದೆ. ನಂದಿಯ ಎತ್ತರ ಸುಮಾರು ೧.೯ ಮೀ. ಉದ್ದ ಸುಮಾರು ೩.೬೫ ಮೀ. ಇದೆ. ಕತ್ತಿನಲ್ಲಿ ಗಗ್ಗರದ ಸರ ಹಾಕಿದೆ.

ಈ ಹಿನ್ನೆಲೆಯಲ್ಲಿ ಈಗಿರುವ ಹೂವಿನ ಹಡಗಲಿ ತಾಲೂಕಿನ ಮೈಲಾರಕ್ಷೇತ್ರಕ್ಕಿಂತ ಇದೇ ಪ್ರಾಚೀನವಾದ ಹಾಗೂ ಮೈಲಾರನ ಸಂಪ್ರದಾಯದ ಮೂಲ ಸ್ಥಳ. ಮೈಲಾರ ಎಂಬುದು ಸ್ಥಳದ ಹೆಸರಲ್ಲ. ಅದು ದೇವತೆಯ ಹೆಸರಿರಬೇಕು. ಮುಂದೆ ಈ ದೇವತೆ ನೆಲೆಗೊಂಡ ಸ್ಥಳಗಳನ್ನು ಬೇರೆ ಬೇರೆ ವಿಶೇಷಣಗಳೊಂದಿಗೆ ಮೂಲಮೈಲಾರ, ಮಣ್–ಮೈಲಾರ, ಮಲ್ಲಾರಿ, ಮಾರ್ತಾಂಡ ಭೈರವ, ಖಂಡೋಬಾ ಮುಂತಾದ ಹೆಸರುಗಳಿಂದ ಕರೆದಿರುತ್ತಾರೆ.

ಈ ಮೈಲಾರನ ಪೂಜಾ ಉಗಮ ನೊಳಂಬರ ಕಾಲದಲ್ಲಿ ಆರಂಭವಾಗಿ ನೊಳಂಬರ ರಾಜಕೀಯ ಸ್ಥಿತ್ಯಂತರಗಳೊಂದಿಗೆ ಕರ್ನಾಟಕದ ಉದ್ದಗಲಕ್ಕೆ ಹರಡಿದೆ ಎಂದು ಹೇಳಬಹುದು. ಹೇಮಾವತಿಯಿಂದ ಕಂಪಿಲಿ ಮತ್ತು ಅಲ್ಲಿಂದ ಬೇರೆ ಬೇರೆ ಸ್ಥಳಗಳಿಗೆ ನೊಳಂಬರು ರಾಜರಾಗಿ, ಅಧಿಕಾರಿಗಳಾಗಿ ವಲಸೆ ಹೋದಾಗ ತಮ್ಮ ಇಷ್ಟದೈವವನ್ನು ತಾವು ನೆಲೆಗೊಂಡ ಸ್ಥಳಗಳಲ್ಲಿ ಪ್ರತಿಷ್ಠಾಪಿಸಿರಬಹುದು. ಅವೇ ಇಂದಿನ ಮೈಲಾರ ಕ್ಷೇತ್ರಗಳಾಗಿರಬಹುದು. ಮೈಲಾರನ ಸಂಪ್ರದಾಯಕ್ಕೆ ಸೇರಿದ ಬ್ರಾಹ್ಮಣ ಕುಟುಂಬಗಳು ಮತ್ತು ಒಕ್ಕಲುಗಳು ಇದ್ದು, ಈ ಕುಟುಂಬಗಳ ವಲಸೆಯೊಂದಿಗೆ ಮೈಲಾರ ಸಂಪ್ರದಾಯ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಹಬ್ಬಲು ಕಾರಣವಾಗಿರಬೇಕು.

ಮೈಲಾರನ ಬಗ್ಗೆ ಹೇಳುವಾಗ ಹಾಸನದ ಸಿದ್ಧೇಶ್ವರನ ಬಗ್ಗೆ ಹೇಳಬೇಕಾಗುತ್ತದೆ. ಶ್ರೀಮತಿ ವಸಂತಲಕ್ಷ್ಮಿಯವರು ಇದರ ಬಗ್ಗೆ ಲೇಖನ ಬರೆದಿದ್ದಾರೆ. ಇದು ಶಿಲ್ಪಲಕ್ಷಣದಿಂದ ಕ್ರಿ.ಶ. ೮ ನೆಯ ಶತಮಾನಕ್ಕೆ ಸೇರಿದುದಾಗಿದೆ. ಈ ಶಿಲ್ಪದಲ್ಲಿ ಸಿದ್ಧೇಶ್ವರ, ನಾಯಿ ಮತ್ತು ಕುದುರೆಯನ್ನೂ ಬಿಡಿಸಿದೆ. ಅಂದರೆ ಭೈರವನ ವಾಹನಗಳಲ್ಲಿ ಕುದುರೆಯೂ ಒಂದೆಂಬುದು ಸ್ಪಷ್ಟವಾಗುತ್ತದೆ. ಇದನ್ನು ಮೈಲಾರ ಎಂದು ಕರೆದಿರುವ ಶಾಸನಗಳಾವು ಇಲ್ಲದಿದ್ದರೂ ಇದು ಮೈಲಾರನೆಂಬುದರಲ್ಲಿ ಸಂದೇಹವಿಲ್ಲ. ಹಾಗೆಯೇ ಹೇಮಾವತಿಯ ಸಿದ್ಧೇಶ್ವರ ಬಿಂಬವೂ ಸಹ ಭೈರವನ ಶಿಲ್ಪವೇ ಆಗಿದೆ. ಹೀಗಾಗಿ ಮೈಲಾರ ಎಂದು ಕರೆಯದಿದ್ದರೂ ಆ ಸಂಪ್ರದಾಯದ ಭೈರವಶಿಲ್ಪಗಳು ಅಲ್ಲಲ್ಲಿ ಪ್ರತಿಷ್ಠಾಪಿತಗೊಂಡು ಪೂಜೆಗೊಳ್ಳುತ್ತಿದ್ದವು. ಕ್ರಿ.ಶ. ೧೦೧೭ ನಂತರ ಈ ಬಿಂಬಗಳನ್ನು ಕೆಲವೆಡೆ ಮೈಲಾರ ಎಂದು ಕರೆಯಲಾರಂಭಿಸಿದರು. ಹೀಗೆ ಮೈಲಾರನ ಸಂಪ್ರದಾಯ ನೊಳಂಬವಾಡಿಯಿಂದ ನೊಳಂಬರ ಅಡಳಿತದೊಂದಿಗೆ ಬೇರೆ ಬೇರೆ ಸ್ಥಳಗಳಲ್ಲಿ ಹರಡಿರುವುದು ಸ್ಪಷ್ಟವಾಗುತ್ತದೆ. ನೊಳಂಬರ ಉಲ್ಲೇಖವಿರುವ ಶಾಸನವೊಂದು ಮಹಾರಾಷ್ಟ್ರದ ದಕ್ಷಿಣ ಜಿಲ್ಲೆಯೊಂದರಲ್ಲಿ ದೊರೆತಿರುವುದು ಮೇಲಿನ ನನ್ನ ವಾದವನ್ನು ಪುಷ್ಟೀಕರಿಸುತ್ತದೆ.

++

1. EC.XI.Cl.7
2. EC.XI.Cl.33.
3. EC.XI.Cl.33.
4. EC.XII.Si.38.
5. ಕ.ವಿ.ಶಾ.ಸಂ.೪.ನಾ.೯೩
6. EC.VII(R) No.285.
7. EC.XI.Jl.29..
8. SII.IX.Pt.No.33.
9. EC.X.Mb.59.
10. EC.X.Cm.49.
11. SII.IX.Pt.1.28.
12. [illegible].
13. EC.X.Mb.38.
14. EC.X.Mb.50.
15. EC.VII.Hn.119.
16. [illegible]
17. [illegible].
18. ಕ.ವಿ.ಶಾ.ಸಂ.೧.ಸಿರ[illegible].
19. ಕ.ವಿ.ಶಾ.ಸಂ.೧.ಹರಹ.೯೭.
20. ಕ.ವಿ.ಶಾ.ಸಂ.೧.ಹರಪ.[illegible]
21. SII.VOL.IX.Pt.1.No.96.
22. SII.XI.Pt.1.No.61.
23. ಕ.ವಿ.ಶಾ.ಸಂ.೧.ಬಳ್ಳಾರಿ.೪೮,೪೯
24. [illegible] ಹಗರಿ.೧೮.
25. EC.XI.Dg.71.
26. [illegible]
27. [illegible]
28. [illegible].
29. ಕ.ವಿ.ಶಾ.ಸಂ.೧.ಹಡಗ.೫೮
30. SII.IX.Pt.1.75.
31. ಕ.ವಿ.ಶಾ.ಸಂ.೧.ಹರಪ.೫೪.
32. EC.XI.Dg.20.
33. [illegible].
34. [illegible]
35. [illegible].24.
36. [illegible].

37. EC.VII.HI.107.

38. [illegible]

39. SII.IX.Pt.1.No.110.

40. SII.XI.Pt.I.No.111.

41. EC.XI.JI.10.

42. SII.IX.Pt.1.115.

43. SII.XI.Pt.1.107.

44. SII.IX.Pt.1.No.133.

45. SII.XI.Pt..No.109.

46. SII.XI.Pt.1.110.

47. [illegible]

48. [illegible]

49. SII.VIII. No.369.

49. ಕ.ವಿ.ಶಾ.ಸಂ.೧.

50. SII.XX.No.49.

51. SII.XI.Pt.2.No.124.

52. SII.XVIII.No.89.

53. MAR.1929.No.54.

54. SII.XI.Pt.2.No.127.

55. Upper Dravida Desa.P.208.

56. Upper Dravida Desa.P.213.

57. The Nolambas.p.176.M.S.Krishanamurthy.

# ಅಧ್ಯಾಯ – X

# ಸಮಾರೋಪ

ನೊಳಂಬರು ಗಂಗರ ಸಾಮಂತರಾಗಿ ಈಗಿನ ಆಂಧ್ರ ಪ್ರದೇಶದ ಮಡಕಶಿರಾ ತಾಲೂಕಿನ ಹೆಂಜೇರು ಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಆರಂಭಿಸಿದ ಬಗ್ಗೆ ಶಾಸನಗಳ ಆಧಾರದಿಂದ ಗುರುತಿಸಲಾಗಿದೆ. ಕರ್ನಾಟಕವನ್ನು ಆಳ್ವಿಕೆ ಮಾಡಿದ ರಾಜರುಗಳಲ್ಲಿ ಪಲ್ಲವರು ಒಬ್ಬರು. ಇವರು ಶಾತವಾಹನರಿಗೆ ಸೇರಿದ ಪ್ರದೇಶಗಳನ್ನು ಆಕ್ರಮಿಸಿಕೊಂಡು ಅವರ ಉತ್ತರಾಧಿಕಾರಿಗಳಾಗಿ ಆಳ್ವಿಕೆ ನಡೆಸಿದರು. ನಂತರ ಕದಂಬರಿಂದ(ಮಯೂರಶರ್ಮ) ಪರಾಜಿತರಾಗಿ ಕರ್ನಾಟಕದಲ್ಲಿಯೇ ನೆಲೆ ನಿಂತ ಇವರು ಸಣ್ಣ ಮಾಂಡಲೀಕರಾಗಿ ಅಲ್ಲಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಹೀಗೆ ನೆಲೆ ನಿಂತವರಲ್ಲಿ ನೊಳಂಬ ಪಲ್ಲವರ ಶಾಖೆಯೂ ಒಂದು. ಗಂಗರ ಸಾಮಂತರಾಗಿ ಆಳ್ವಿಕೆ ಪ್ರಾರಂಭಿಸಿದ ಇವರ ಮೂಲವನ್ನು ಮತ್ತು ನೊಳಂಬ ಶಬ್ದದ ನಿಷ್ಪತ್ತಿಯ ಬಗ್ಗೆ ಬೇರೆ ಬೇರೆ ಮೂಲಗಳ ಸಹಾಯದಿಂದ ವಿವೇಚಿಸಲಾಗಿದೆ.

ಈ ವಂಶದ ಅರಸರು ಯಾರು, ಯಾವ ಪ್ರದೇಶಗಳಲ್ಲಿ ಆಡಳಿತ ನಡೆಸಿದರು ಮತ್ತು ಇವರ ಸಾಂಸ್ಕೃತಿಕ ಕೊಡುಗೆಗಳು ಏನು ಎಂಬುದರ ಬಗ್ಗೆ ಗುರುತಿಸಲಾಗಿದೆ. ನೊಳಂಬರ ಶಾಸನಗಳಲ್ಲಿ ಬರುವ ರಾಜವಂಶದ ಸ್ತ್ರೀಯರು ಹಾಗೂ ಕೆಲವು ಅಧಿಕಾರಿಗಳ ಪತ್ನಿಯರು ಆ ಕಾಲದಲ್ಲಿ ಆಳ್ವಿಕೆ ನಡೆಸಿರುವುದನ್ನು, ದೇವಾಲಯಗಳ ರಚನೆ ಮತ್ತು ಅವುಗಳ ನಿತ್ಯ ಪೂಜೆ ಪುನಸ್ಕಾರಗಳಿಗಾಗಿ ದಾನ ದತ್ತಿಗಳನ್ನು ನೀಡಿದ ಮತ್ತು ಕೆರೆ-ಕಟ್ಟೆಗಳನ್ನು ಕಟ್ಟಿಸಿ ಅವುಗಳಿಗೆ ತೂಬುಗಳನ್ನು ಇಡಿಸಿ, ಅವುಗಳ ನಿರ್ವಹಣೆಗೆ ವ್ಯವಸ್ಥೆ ಮಾಡಿರುವುದನ್ನು ಶಾಸನಗಳ ಆಧಾರದಿಂದ ಗುರುತಿಸಿ ಪರಿಚಯಿಸಲಾಗಿದೆ. ನೊಳಂಬ ಅರಸರ ಜೊತೆ ಜೊತೆಗೆ ರಾಜ್ಯಾಡಳಿತದ ವ್ಯವಸ್ಥೆಗೆ ಕೈಜೊಡಿಸಿದ ಮಾಂಡಲೀಕರು, ದಂಡನಾಯಕರು, ಸಾಮಂತರು, ಹೆಗ್ಗಡೆ ಮುಂತಾದವರನ್ನೂ, ಇವರು ಆಳ್ವಿಕೆ ನಡೆಸಿದ ಆಡಳಿತ ಪ್ರದೇಶಗಳನ್ನು ಗುರುತಿಸಿದೆ. ಮಹಾಜನರು, ಯತಿಗಳು ಆಡಳಿತದಲ್ಲಿ, ಮತ್ತು ತಮ್ಮದೇ ಆದ ಚಿಂತನೆಯಲ್ಲಿ ಪ್ರಜಾ ಪರಿಪಾಲನೆಯ ವ್ಯವಸ್ಥೆಯ ಜೊತೆಯಲ್ಲಿ

ಧಾರ್ಮಿಕ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದರು. ಅವರ ಕಾಲದಲ್ಲಿ ಅಗ್ರಹಾರ ಮತ್ತು ಮಠಗಳಲ್ಲಿ ನಡೆಯುತ್ತಿದ್ದ ವಿದ್ಯಾಭ್ಯಾಸದ ಬಗ್ಗೆ, ಅಲ್ಲಿದ್ದ ಘಟಿಕಾಸ್ಥಾನದ ಬಗ್ಗೆಯೂ ಗಮನಿಸಲಾಗಿದೆ.

ಶಾಸನಾಧಾರಗಳಿರುವ ನೊಳಂಬರ ದೇವಾಲಯಗಳನ್ನು ಮತ್ತು ದೇವಾಲಯಗಳ ರಚನಾ ವೈಶಿಷ್ಟವನ್ನೂ ಪರಿಮಿತಿ ವ್ಯಾಪ್ತಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಸಮಗ್ರವಾಗಿ ಅಲ್ಲದಿದ್ದರೂ ವಿವಿಧ ಧರ್ಮಗಳ ಅಧ್ಯಯಯನದಿಂದ ಕಂಡುಬಂದ ವಿವರಗಳನ್ನು ದಾಖಲಿಸಿದೆ. ಈ ಕಾರ್ಯವನ್ನು ಅನೇಕ ವಿದ್ವಾಂಸರು ಈವರೆಗೆ ಅಧ್ಯಯನ ನಡೆಸಿರುವ ಹಾದಿಯಲ್ಲಿ ಮುಂದುವರಿದು ನೊಳಂಬರು ಸಾಂಸ್ಕೃತಿಕವಾಗಿ ನೀಡಿದ ಕೊಡುಗೆಗಳ ವಿವರಗಳನ್ನು ದಾಖಲಿಸಿದೆ. ಇವರು ನೊಳಂಬವಾಡಿ– ೩೨೦೦೦ ಪ್ರದೇಶದಿಂದ ಕ್ರಿ.ಶ. ೧೧ನೆಯ ಶತಮಾನದ ಆರಂಭದಲ್ಲಿ ರಾಜಕೀಯ ಏಳುಬೀಳುಗಳಿಂದ ಅನಿವಾರ್ಯವಾಗಿ ಕರ್ನಾಟಕದ ಉತ್ತರ ಭಾಗದ ಕಂಪಿಲಿಗೆ ರಾಜಧಾನಿಯನ್ನು ಬದಲಾಯಿಸಿದರು. ತಮ್ಮ ಆಳ್ವಿಕೆಗೆ ಸೇರಿದ ಸುತ್ತಮುತ್ತಲ ಪ್ರದೇಶಗಳಲ್ಲಿ ಸಾಂಸ್ಕೃತಿಕವಾಗಿ ರಚಿಸಿದ ರಚನಾತ್ಮಕ ದೇವಾಲಯಗಳನ್ನು ಗುರುತಿಸಲಾಗಿದೆ. ಬಾಗಳಿ, ಕಂಪಿಲಿ, ಮಲ್ಲಯ್ಯನಗುಡ್ಡ, ದೇವಘಾತ, ವಿಪ್ರ ಮುಂತಾದ ಕಡೆ ನಿರ್ಮಿಸಲಾಗಿರುವ ದೇವಾಲಯಗಳ ಬಗ್ಗೆ ಮಾಹಿತಿಗಳನ್ನು ನೀಡಲು ಪ್ರಯತ್ನಿಸಲಾಗಿದೆ. ನೊಳಂಬರು ನಿರ್ಮಿಸಿದ ದೇವಾಲಯ, ಬಸದಿ ಮತ್ತಿತರ ವಾಸ್ತು ರಚನೆಗಳ ಸ್ಥೂಲ ಚಿತ್ರಣ ನೀಡಲಾಗಿದೆ.

ನೊಳಂಬರು ಗಂಗರ ಹಾಗೂ ಬಾದಾಮಿ ಚಲುಕ್ಯರ ವಾಸ್ತು ಮತ್ತು ಮೂರ್ತಿ ಶಿಲ್ಪಗಳಿಂದ ಪ್ರಭಾವಿತರಾಗಿ ನೊಳಂಬ ಶೈಲಿಯನ್ನು ಆಚರಣೆಗೆ ತಂದು ತಮ್ಮದೇ ಆದ ಶಿಲ್ಪಕಲಾ ನೈಪುಣ್ಯತೆಯನ್ನು ಮೆರೆದರು. ಮುಂದೆ ಹೊಯ್ಸಳರು ತಾವು ರಚಿಸಿದ ದೇವಾಲಯಗಳಲ್ಲಿ ನೊಳಂಬವಾಸ್ತುಶೈಲಿಯ ಕೆಲ ಅಂಶಗಳನ್ನು ಅನುಕರಿಸಿರಬೇಕು.

ನೊಳಂಬರಿಂದ ಹೆಚ್ಚು ಶೈವ ದೇವಾಲಯಗಳು ನಿರ್ಮಿತವಾಗಿವೆ. ಕ್ಷೇತ್ರ ಪರಿವೀಕ್ಷಣಾ ಕಾರ್ಯವನ್ನು ನಮ್ಮ ಪರಿಮಿತಿಯಲ್ಲಿ ನಡೆಯಿಸಿದ್ದು ಇನ್ನೂ ಸಮಗ್ರ ಕ್ಷೇತ್ರಕಾರ್ಯದಿಂದ ಶಿಥಿಲವಾಗಿ ಇನ್ನು ಅವರ ಪಳಯುಳಿಕೆಗಳಾಗಿರುವ ಅನೇಕ ದೇವಾಲಯಗಳನ್ನು ಗುರುತಿಸುವ ಕಾರ್ಯ ನಡೆಯಬೇಕಿದೆ.

ನೊಳಂಬವಾಡಿ ಪ್ರದೇಶದ ದೊಡ್ಡೇಶ್ವರ ದೇವಾಲಯದಲ್ಲಿ ಇಂದಿಗೂ ಪೂಜೆ ನಡೆಯುತ್ತಿದ್ದು ಆ ದೇವರ ಬಗ್ಗೆ ಹೆಣೆದುಕೊಂಡು ಬಂದಿರುವ ಐತಿಹ್ಯ, ಜಾನಪದ ನಂಬಿಕೆಗಳನ್ನು ವಿಶ್ಲೇಷಿಸುವ ಅಗತ್ಯ ಕಂಡು ಬರುತ್ತದೆ. ಇವರ ವಾಸ್ತು ಮತ್ತು ಮೂರ್ತಿ ಶಿಲ್ಪಗಳ ಬಗೆಗಿನ

ಚಿತ್ರಣ ಒಂದೆಡೆ ತರುವ ಪ್ರಯತ್ನ ಮಾಡಲಾಗಿದೆ. ಇಷ್ಟಾದರೂ ವಾಸ್ತು ಮತ್ತು ಮೂರ್ತಿ ಶಿಲ್ಪಗಳ ಬಗ್ಗೆಯೂ ಸುಂದರ ಕಲಾನೈಪುಣ್ಯತೆಯಿಂದ ಕೂಡಿರುವ ಅಲಂಕಾರಿಕವಾಗಿ ನಿರ್ಮಿಸಲಾಗಿರುವ ಬಾಗಿಲವಾಡ ಮತ್ತು ಕಂಬಗಳ ರಚನೆಗಳ ಬಗ್ಗೆ ಇನ್ನೂ ಹಲವಾರು ದೃಷ್ಟಿಕೋನಗಳಿಂದ ಅಧ್ಯಯನ ನಡೆಸಲು ಸಾಕಷ್ಟು ಅವಕಾಶಗಳಿವೆ.

ಕರ್ನಾಟಕದಲ್ಲಿ ಸುಮಾರು ಮೂರು ಶತಮಾನಗಳಿಗೂ ಮಿಕ್ಕಿ ವಿವಿಧ ಪ್ರದೇಶಗಳಲ್ಲಿ ಆಳ್ವಿಕೆ ಮಾಡಿದ ನೊಳಂಬರು ತಮ್ಮ ಕಾಲದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕತೆಯ ನೆರಳಾಗಿ ಮೂಡಿ ಬಂದಿರುವ ಈ ಸಾಂಸ್ಕೃತಿಕ ಅಧ್ಯಯನ ಅವರ ಇತಿಹಾಸವನ್ನು ಅರಿಯುವಲ್ಲಿ ನೆರವಾಗುವುದೆಂದು ನಂಬಿದ್ದೇವೆ. ++

# ಗ್ರಂಥಸೂಚಿ

## ಕನ್ನಡ


| | | | |
|---|---|---|---|
| ೧. | ಅಣ್ಣಿಗೇರಿ. ಎ.ಎಂ. ಮತ್ತು ಮಲ್ಲಾರಿ ಮೇವುಂಡಿ | : | ಶಾಸನ ಸಾಹಿತ್ಯ ಸಂಚಯ, ಧಾರವಾಡ, ೧೯೬೦ |
| ೨. | ಅಣ್ಣಿಗೇರಿ. ಎ.ಎಂ. ಮತ್ತು ಶೇಷಶಾಸ್ತ್ರಿ | : | ಶಾಸನ ಸಂಗ್ರಹ, ಕ.ಸ.ಪ. ೧೯೮೨. |
| ೩. | ಎಚ್ಚೆಸ್ಕೆ. | : | ಅವಲೋಕನ, ೧೯೮೫. |
| ೪. | ಕಲಬುರ್ಗಿ.ಎಂ.ಎಂ. | : | ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು, ಭಾಗ-೧, ಹಂಪಿ. |
| | | : | ಮಾರ್ಗ-೧ ಮತ್ತು ೨ |
| | | : | ಶಾಸನ ವ್ಯಾಸಂಗ ಸಂಪುಟ-೧ ೧೯೭೪. |
| | | : | ಶಾಸನ ವ್ಯಾಸಂಗ ಸಂಪುಟ-೨ ೧೯೭೮. |
| ೫. | ಕೃಷ್ಣ.ಎಂ.ಎಚ್. | : | ಕನ್ನಡ ನಾಡಿನ ಚರಿತ್ರೆ, ಬೆಂಗಳೂರು, ೧೯೫೦. |
| ೬. | ಕೃಷ್ಣಮೂರ್ತಿ.ಪಿ.ವಿ. | : | ಬಾಣರ ಶಾಸನಗಳ ಅಧ್ಯಯನ. |
| ೭. | ಕೃಷ್ಣರಾವ್.ಎಂ.ವಿ. ಮತ್ತು ಕೇಶವ ಭಟ್ಟ.ಎಂ. | : | ಕರ್ನಾಟಕ ಇತಿಹಾಸ ದರ್ಶನ, ಬೆಂಗಳೂರು, ೧೯೭೦. |
| ೮. | ಗುರುವ.ಆರ್.ಎಸ್. | : | ಕಾರವಾರ ಜಿಲ್ಲೆಯ ಶಾಸನಗಳು, ಧಾರವಾಡ, ೧೯೭೫. |
| ೯. | ಗೋಪಾಲ್.ಬಾ.ರಾ. | : | ಕರ್ನಾಟಕದ ಇತಿಹಾಸ ಮೈಸೂರು, ೧೯೮೬. |
| | | : | ಬನವಾಸಿಯ ಕದಂಬರು, ೧೯೮೩. |
| | | : | ಕರ್ನಾಟಕದ ಕಲೆಗಳು, ಸಂ.೪, ಬೆಂಗಳೂರು, ೧೯೯೩. |
| ೧೦. | ಚಿದಾನಂದಮೂರ್ತಿ.ಎಂ. | : | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ೧೯೭೯. |
| | | : | ಸಂಶೋಧನಾ ತರಂಗ ಸಂ.೨. |
| ೧೧. | ಚನ್ನಕ್ಕ ಎಲಿಗಾರ | : | ಪ್ರಾಚೀನ ಕರ್ನಾಟಕ ರಾಣಿಯರು, ೧೯೮೭. |
| ೧೨. | ಜಯಮ್ಮ ಕರಿಯಣ್ಣ. ಎಚ್. | : | ಹೆಣ್ಣಿನ ಸ್ಥಾನಮಾನ ಒಂದು ಪುನರವಲೋಕನ |
| ೧೩. | ತಿಪ್ಪೇರುದ್ರಸ್ವಾಮಿ | : | ಕರ್ನಾಟಕ ಸುಸ್ಕೃತಿ ಸಮೀಕ್ಷೆ |
| ೧೪. | ದೇವರಕೊಂಡಾರೆಡ್ಡಿ | : | ತಲಕಾಡಿನ ಗಂಗರ ದೇವಾಲಯಗಳು – ಒಂದು ಅಧ್ಯಯನ, ಬೆಂಗಳೂರು, ೧೯೯೪. |
| ೧೫. | ದೇಸಾಯಿ.ಪಿ.ಬಿ. ಮತ್ತು ಸಾಲತ್ತೊರೆ.ಬಿ.ಎ. | : | ಕನ್ನಡ ನಾಡಿನ ಚರಿತ್ರೆ, ಬೆಂಗಳೂರು, ೧೯೫೩. |
| ೧೬. | ನರಸಿಂಹ ಮೂರ್ತಿ | : | ನೊಳಂಬರು, ಬೆಂಗಳೂರು, ೧೯೮೦. |
| | | : | ಕರ್ನಾಟಕದ ಪರಂಪರೆ ಬೆಂಗಳೂರು. |
| ೧೭. | ನಾಗೇಗೌಡ.ಎಚ್.ಎಲ್. | : | ಪ್ರವಾಸಿ ಕಂಡ ಇಂಡಿಯಾ, ಮೈಸೂರು, ೧೯೬೬. |
| ೧೮. | ನೇಗಿನಹಾಳ | : | ನೇಗಿನಹಾಳರ ಪ್ರಬಂಧಗಳು, ಹಂಪಿ, ೧೯೯೯. |
| ೧೯. | ನರಸಿಂಹಾಚಾರ್ಯ.ಆರ್. | : | ಕರ್ನಾಟಕ ಕವಿ ಚರಿತೆ. |

೨೦. ಬಸವಲಿಂಗಪ್ಪ.ಸಿ.ಎನ್. : ಚಂದ್ರವಳ್ಳಿ, ೧೯೬೬.
: ನೊಳಂಬ ಇತಿಹಾಸ ದರ್ಶನ, ತಿಪಟೂರು, ೧೯೬೬.
: ನೊಳಂಬರು ೨೦೦೨.

೨೧. ಮಜುಂದಾರ್.ಆರ್.ಸಿ. : ಕನೂಜ್ ಸಾಮ್ರಾಜ್ಯ ಯುಗ, ಭಾಗ-೧, ಸಂ-೭.

೨೨. ಮಲ್ಲಾರಿ ಮೇವುಂಡಿ. : ಕನ್ನಡ ನಾಡಿನ ಕೆಲವು ಶಾಸನ ಕವಿಗಳು, ಧಾರವಾಡ, ೧೯೬೩.

೨೩. ಮುಗಳಿ.ಆರ್.ಎಸ್. : ಕನ್ನಡ ಸಾಹಿತ್ಯ ಚರಿತ್ರೆ

೨೪. ರಘುನಾಥಭಟ್, ಎಚ್.ಆರ್. : ಕರ್ನಾಟಕ ಶಾಸನ ಕಲೆ

೨೫. ರಂಗಸ್ವಾಮಯ್ಯ, ಜಿ.ಆರ್. ಮತ್ತು ಷೇಕ್ಆಲಿ, ಬಿ : ದಕ್ಷಿಣ ಭಾರತದ ಇತಿಹಾಸ, ಮೈಸೂರು.

೨೬. ಲಕ್ಷ್ಮಿನಾರಾಯಣರಾವ್.ಎನ್. ಮತ್ತು ಪಂಚಮುಖಿ.ಆರ್.ಎಸ್. : ಕರ್ನಾಟಕ ಅರಸು ಮನೆತನಗಳು, ಧಾರವಾಡ, ೧೯೪೬.

೨೭. ಲಕ್ಷ್ಮಣ ತೆಲಗಾವಿ : (ಸಂ.) ಹರತಿ ಸಿರಿ ೧೯೮೭.

೨೮. ವೆಂಕಣಗುಡ್ಡ, ಟಿ. : ಕರ್ನಾಟಕದ ಕನ್ನಡ ವಿಷಯ ವಿಶ್ವಕೋಶ, ಮೈಸೂರು, ೧೯೬೦.
ಕನ್ನಡ ವಿಶ್ವಕೋಶ, ಮೈಸೂರು.

೨೯. ಶೇಷಶಾಸ್ತ್ರಿ,ಆರ್. : ಕರ್ನಾಟಕ ವೀರಗಲ್ಲುಗಳು, ಕ.ಸಾ.ಪ. ಬೆಂಗಳೂರು, ೧೯೮೨
: ಶಾಸನ ಪರಿಚಯ ಬೆಂಗಳೂರು, ೧೯೮೨.

೩೦. ಶಿವತಾರಕ. ಕೆ.ಬಿ. : ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಹಂಪೆ

೩೧. ಸುರೇಶ್.ಕೆ.ಎಂ. ಮತ್ತು ವಾಸುದೇವ ಬಡಿಗೇರಿ : ಕರ್ನಾಟಕ ದೇವಾಲಯ ಕೋಶ.

೩೨. ಹಿರೇಮಠ.ಆರ್.ಸಿ. ಮತ್ತು ಕಲ್ಬುರ್ಗಿ.ಎಂ.ಎಂ. : ಕನ್ನಡ ಶಾಸನ ಸಂಪದ, ಧಾರವಾಡ,೧೯೮೭.

## BIBLIOGRAPHY

### English


1. Altekar A.S. : Education in Ancient India, Benaras, 1934.
   : The Rastrakutas & their Times, Poona,1967.
2. Andrew L. Cohen : The Temple Architecture & Sculpture of the Nolambas.
3. Arokia Swamy M. : The Kongu Country, Madras. 1956.
4. Balasubrahmanyam. S.R. : Early Chola Temple, New Delhi, 1971.
5. Bandarkar. R.G. : Early History of the Dekkan, 1979.
6. Chatarji. A.K. : A comprehensive History of Jainsim, Calcutta, 1978.
7. Douglas Barett. : Hemavathi, Bombay, 1958.
8. Desai. P.B.. : A History of Karnataka, Dharwar, 1970.
9. Gopal B.R. : The Rastrakutas of Malkhed.
   : Ed.: Corpus of Kadamba Inscription, 1985.
   : The Rastrakuta Studies in their History & Culture.
10. Gopinatha Rao T.A. : Elements of Hindu Iconography. Vol.2.Pt.1.
11. Krishna Murthy. M.S. : The Nolambas, Mysore 1980.
12. Lewis : Mysore & Coorg.
13. Mahalingam T.V. : Inscription of the Pallava their origin.
14. Michael W Meister & Dhakey M.A. : Encyclopedia of Indian Temple Architecture. (Upper Dravida Desa).
15. Nagaraja Rao. : Chalukya of Kalyana, Bangalore, 1983.
16. Narasimha Murthy S.V. : Coins & Currency System in Karnataka. 1997.
17. Rajendra Prasad : Art of South India Andhra Pradesh.
18. Soundar Rajan : The Hoysala Dynasty.
19. Sivarama Murthy. C : Indian Sculpture.
20. Sivanna : The Gangas of Talkad.

## ಸಂಕ್ಷೇಪ : ABBREVIATIONS

| | | |
|---|---|---|
| ಇ.ದ. | : | ಇತಿಹಾಸ ದರ್ಶನ, |
| ಕ.ವಿ.ಶಾ.ಸಂ. | : | ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ |
| ಕ.ಸಾ.ಪ.ಪ. | : | ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ |
| ಪ್ರ.ಕ. | : | ಪ್ರಬುದ್ಧ ಕರ್ನಾಟಕ |
| ಮಾ.ಕ. | : | ಮಾನವಿಕ ಕರ್ನಾಟಕ |
| ನೊ.ಇ.ದ. | : | ನೊಳಂಬ ಇತಿಹಾಸ ದರ್ಶನ. |
| AIRE | : | Annural Report of Indian Epigraphy |
| E.C. | : | Epigraphia Carnatica. |
| E.I. | : | Epigraphia Indica |
| M.A.R. | : | Mysore Archaeological Reports |
| S.I.I. | : | South Indian Inscriptions |
| Q.J.M.S. | : | Quarterly Journal of the Mythic Society |
| J.E.S.I. | : | journal of the Epigraphical socity of India |

## ಮೂಲ : ORIGINAL

ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು ೧ ರಿಂದ ೬

Annural Report of the Mysore Archaeological Reports,1887 onwards.

Annual Report on Indian Epigraphy,1887 onwards

Epigraphia Carnatica Vols. I to XVI.

Epigraphia Indica Vols.

Indian Antiquary.

South Indian Inscriptions.

## ನಿಯುತಕಾಲಿಕೆ :

ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಬೆಂಗಳೂರು.
ಪ್ರಬುದ್ಧ ಕರ್ನಾಟಕ, ಮೈಸೂರು.
ಮಾನವಿಕ ಕರ್ನಾಟಕ.

Quarterly Journal of the Mythic Society.



ಭೋಗ ನಂದೀಶ್ವರ ದೇವಾಲಯ, ನಂದಿ



ಅರುಣಾಚಲೇಶ್ವರ ದೇವಾಲಯ, ನಂದಿ.

ಕೃಪೆ: ಮಿಶೆಲ್ ಮಿಸ್ಟ ಡಾಕಿ



ನಾಗೇಶ್ವರ ದೇವಾಲಯ ಹಂಬಳಿ ಹಂಪಿ



ಕಲ್ಲೇಶ್ವರ ದೇವಾಲಯ ಬಾಗಳಿ

